# ಮಹಾಕವಿ

# ಹರಿಹರದೇವ.

(ಚರಿತ್ರೆ, ಕಾಲನಿರ್ಣಯ, ಮತ್ತು ಕಾವ್ಯವಿಮರ್ಶೆ.)







ಕರ್ನಾಟಕ ಸಂಘ, ರಾಜಾರಾಮ ಕಾಲೇಜ,
ಕೊಲ್ಹಾಪೂರ.

ಬೆಲೆ ೧-೧೨-೦ ಕ್ಯಾಲಿಕೊ ಬಾಯಿಂಡ ೨-೦-೦

ಮುದ್ರಕರು:

**ಎ. ಆರ್. ಶಿವನಾಗಪ್ಪ,**

ಹುಬ್ಬಳ್ಳಿ.

ಮುದ್ರಣಾಲಯ:

**ವಾಗ್ವಿಲಾಸ ಪವರ ಪ್ರಿಂಟಿಂಗ್ ಪ್ರೆಸ್,**

ಹುಬ್ಬಳ್ಳಿ.

ಪ್ರಕಾಶಕರು:

**ಕೆ. ಜಿ. ಕುಂದಣಗಾರ,**

ಅಧ್ಯಕ್ಷ,

ಕರ್ನಾಟಕ ಸಂಘ, ರಾಜಾರಾಮ ಕಾಲೇಜ

ಕೊಲ್ಹಾಪುರ.

ಎಲ್ಲ ಕನ್ನಡಿಗರಿಂಗೆ.





ಲಿಂ॥ ಜಗದ್ಗುರು ಗಂಗಾಧರ ಮಹಾಸ್ವಾಮಿಗಳು
ಮೂರುಸಾವಿರಮಠ, ಹುಬ್ಬಳ್ಳಿ.

# ಪ್ರಕಾಶಕರ ಬಿನ್ನಹ.



ಶಿಷಾನುಭವದಲ್ಲಿ ರಾ. ಸಾ. ಫ. ಗು. ಹಳಕಟ್ಟಿಯವರು ಪ್ರಕಟಿಸುತ್ತಿದ್ದ ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಪ್ರಕಟಿಸಿದ, ಸದ್ಧರ್ಮಗ್ರಂಥ ಮಾಲೆಯಲ್ಲಿ ಶ್ರೀ. ಚೆನ್ನಮಲ್ಲಿಕಾರ್ಜುನಪ್ಪನವರು ಪ್ರಕಟಿಸಿದ ರಗಳೆಗಳನ್ನು ಓದಿ ಅವುಗಳೊಳಗಿನ ಸೌಂದರ್ಯವನ್ನು ಕಂಡು ಹರಿಹರದೇವನ ಜೀವನ ಚರಿತ್ರೆ—ಕಾವ್ಯವಿಮರ್ಶೆಗಳನ್ನೊಳಗೊಂಡ ಒಂದು ಪುಟ್ಟ ಗ್ರಂಥವನ್ನು ಪ್ರಕಟಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಕಾರ್ಯವನ್ನು ಆರಂಭಿಸಿದೆವು. ಮೊದಲಿನ ಎರಡು ವರುಷಗಳಲ್ಲಿ ನಮ್ಮ ಪ್ರಯತ್ನಗಳಿಗೆ ಯಾವ ಫಲವೂ ದೊರೆಯದೆ ಎಲ್ಲ ಕಡೆಯಲ್ಲಿ ನಿರಾಸೆಯ ಅನುಭವವೇ ಬರಹತ್ತಿತು. ಆತುರವಾಯದ ಕಾರ್ಯವರ್ತಿಗಳ ದೀರ್ಘಪ್ರಯತ್ನದಿಂದ ಕೆಲವುಟ್ಟಿಗೆ ಯಶ ದೊರೆಯಬಹುದೆಂದು ಕಂಡುಬಂದಿತು. ಆರಂಭದಲ್ಲಿ ಕನ್ನಡ ಪಂಡಿತರು ನಮಗೆ ಸಹಾಯಸಹಾನುಭೂತಿಗಳನ್ನು ತೋರಿಸದಿದ್ದರೂ ( ನಮ್ಮ ದೃಢ ನಿಶ್ಚಯವನ್ನು ಪರೀಕ್ಷಿಸಬೇಕೆಂದಿರಬಹುದೆಂಬುದೇ ನಮ್ಮ ಕಲ್ಪನೆ. ) ಮುಂದೆ ಅವರು ತಮ್ಮ ಪ್ರಬಂಧಗಳನ್ನು ಕಳುಹಿಕೊಡುವುದಾಗಿ ಅಭಿವಚನವಿತ್ತರು ತುಸು ಕಾಲಾವಧಿಯ ಮೇಲೆ ತಮ್ಮ ಲೇಖನಗಳನ್ನು ಕಳುಹಿದರು. ನಮ್ಮ ಕೈಗೆ ಬಂದಷ್ಟು ಅವರ ಬರಹಗಳನ್ನು ಜತೆಗೊಳಿಸಿ ಅವುಗಳನ್ನೆಲ್ಲ ಅಚ್ಚಿಗೆ ಸಿದ್ಧಗೊಳಿಸುವಷ್ಟಕ್ಕೆ ಮತ್ತೊಂದು ವರುಷವು ಕಳೆದುಹೋಯಿತು. ಈ ಅವಧಿಯಲ್ಲಿ ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀಮನ್ಮಹಾರಾಜ-ನಿರಂಜನ ಜಗದ್ಗುರು-ಗುರುಶಿದ್ಧರಾಜಯೋಗೀಂದ್ರಮಹಾಸ್ವಾಮಿಗಳವರು ನಮ್ಮ ಹೊತ್ತಿಗೆಯ ಅಚ್ಚಿನ ಭಾರವನ್ನು ಸಹಾನುಭೂತಿಯಿಂದ ವಹಿಸಲು ಒಪ್ಪಿಕೊಂಡು ಮುಂದೆ ಆಕಾರ್ಯವನ್ನು ನೆರವೇರಿಸಿ ನಮ್ಮನ್ನು ಚಿರಋಣಿಗಳನ್ನು ಮಾಡಿದರು. ಅವರಿಗೆ ನಮ್ಮ ಧನ್ಯವಾದಗಳನ್ನೆಷ್ಟರ್ಪಿಸಿದರೂ ಕಡಿಮೆಯೇ.

ನಮ್ಮ ಬಯಕೆಯಂತೆ ಪಂಡಿತರ ಲೇಖನಗಳು ಈ ಸಂಗ್ರಹಕ್ಕೆ ದೊರೆತಿದ್ದರೆ ಗ್ರಂಥವು ಇದಕ್ಕಿಂತಲೂ ಉತ್ಕೃಷ್ಟವಾಗಬಹುದಿತ್ತು. ಅವುಗಳ ಅಭಾವದಲ್ಲಿ ಇದ್ದವುಗಳಿಂದಲೇ ತೃಪ್ತಿಗೊಳ್ಳಬೇಕಾಗಿದೆ. ಸುದೈವದಿಂದ

ಪುನರ್ಮುದ್ರಣದ ಸಂದರ್ಭವು ಒದಗಿದರೆ ಇನ್ನುಳಿದ ಪಂಡಿತರ ಲೇಖನಗಳನ್ನು ದೊರಕಿಸಿ ಅವುಗಳನ್ನು ಇದರಲ್ಲಿ ಪ್ರಕಟಿಸಲು ಮತ್ತೆ ಪ್ರಯತ್ನಿಸುವೆವು.

'ಹರಿಹರನ ರಗಳೆಗಳು ಷಟ್ಪದಿಕಾವ್ಯಗಳಿಗೆ ಮಾತೃಕೆಗಳು' ಎಂಬ ಸಂಶೋಧನೆಯ ಲೇಖನವನ್ನು ಕೆಲಮಟ್ಟಿಗೆ ಪರಿಶ್ರಮಪಟ್ಟು ಬರೆದಿರುವ ನಮ್ಮ ಕನ್ನಡವಿದ್ಯಾರ್ಥಿ ಶ್ರೀ. ಪರಪ್ಪಗೌಡರವರನ್ನೂ (ಈಗ ಬಿ. ಎ.) 'ಹರಿಹರದೇವನ ಕಾಲ' ಎಂಬ ಪರಿಶ್ರಮಪೂರ್ಣವಾದ ಸಂಶೋಧನೆಯ ಲೇಖನವನ್ನು ಬರೆದ ಎಮ್. ಎ. ವಿದ್ಯಾರ್ಥಿ ಶ್ರೀ. ಎಸ್. ಎಸ್. ಮಾಳವಾಡ (ಈಗ ಪ್ರೋ. ಮಾಳವಾಡ)ರವರನ್ನೂ ಕನ್ನಡವಿದ್ಯಾರ್ಥಿಗಳು ಅನುಕರಿಸಿದರೆ ನಮ್ಮ ಪರಿಶ್ರಮವು ಸಾರ್ಥಕವಾದಂತಾಗುವುದು, ಮತ್ತು ಸಂಘದ ಉದ್ದೇಶವು ಸಫಲವಾದಂತಾಗುವುದು.

ಈ ಪುಸ್ತಕದಲ್ಲಿ ಅನೇಕ ಪ್ರಬಂಧಗಳು ಸಂಗ್ರಹವಾಗಿರುವುದರಿಂದ ಒಂದು ವಿಷಯವು ಅನೇಕ ಸಲ ಚರ್ಚಿತವಾಗಿರಬಹುದು. ಆದರೆ ವಿಷಯವು ಒಂದೇ ಆಗಿದ್ದರೂ ಅವರು ಅನುಸರಿಸಿದ ರೀತಿ-ದೃಷ್ಟಿಭಾಗಗಳು ಬೇರೆಬೇರೆಯಾಗಿವೆ. ತಲೆಕಟ್ಟು ಒಂದೇ ಆಗಿದೆಯೆಂದು, ಉದಾ: ಗಿರಿಜಾಕಲ್ಯಾಣ, ಓದುಗರು ಮೂಗುಮುರಿಯಬಾರದೆಂದು ಅವರಲ್ಲಿ ನಮ್ಮದೊಂದು ಆಗ್ರಹದ ಬಿನ್ನಹ.

ಹುಬಳ್ಳಿಯ ಮೂರುಸಾವಿರಮಠದ ಶ್ರೀಮನ್ಮಹಾರಾಜ—ನಿರಂಜನ ಜಗದ್ಗುರು-ಶ್ರೀಗುರುಸಿದ್ಧರಾಜಯೋಗೀಂದ್ರಮಹಾಸ್ವಾಮಿಗಳವರು ಪ್ರೇಮ ಸಹಾನುಭೂತಿಗಳಿಂದ ಗ್ರಂಥಪ್ರಕಟನೆಯ ಸಂದರ್ಭದಲ್ಲಿ ತಮ್ಮ ಶುಭಾಶೀರ್ವಾದವನ್ನು ಕಳುಹಿದಲ್ಲದೆ ಅದರ ಅಚ್ಚಿನ ಭಾರವನ್ನು ವಹಿಸಿಕೊಂಡಬಗ್ಗೆ ಅವರಿಗೆ ನಮ್ಮ ಕೃತಜ್ಞತೆಯ ವಂದನೆಗಳು. ಅದರಂತೆ ಶ್ರೀ ಗಂಗಾಧರ ಸಂಸ್ಕೃತಕಾಲೇಜದ ಪ್ರಿನ್ಸಿಪಾಲರಾದ ಶ್ರೀ. ವೇದಮೂರ್ತಿ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳವರು ಅಚ್ಚಿನ ಕಾಲಕ್ಕೆ ಪ್ರೂಫುಗಳನ್ನು ಪರಿಶ್ರಮಪಟ್ಟು ಓದಿ ನಮ್ಮನ್ನು ಉಪಕೃತರನ್ನು ಮಾಡಿದ್ದಾರೆ. ಅವರಿಗೂ ನಮ್ಮ ಪ್ರೇಮಾದರದ ವಂದನೆಗಳು. ಲಿಂಗರಾಜಕಾಲೇಜದ ಪ್ರಿ. ಡಾ.

ಎಸ್. ಸಿ. ನಂದೀಮಠರವರು, ಎಮ್. ಎ., ಪಿ. ಎಚ್. ಡಿ., ತಮ್ಮ ಕಾರ್ಯಬಾಹುಲ್ಯದಲ್ಲಿ ಅವಕಾಶವನ್ನು ಕಲ್ಪಿಸಿಕೊಂಡು ಈ ಗ್ರಂಥದ ಮುನ್ನುಡಿಯನ್ನು ಬರೆದುಕೊಟ್ಟು ಶುಭಾಶೀರ್ವಾದಗಳನ್ನು ಕೊಟ್ಟಿದ್ದಾರೆ. ಅವರಿಗೂ ಸಂಗ್ರಹಕಾರ್ಯದಲ್ಲಿ ತಮ್ಮ ಲೇಖನಗಳನ್ನು ಕಳುಹಿದ ಎಲ್ಲ ಲೇಖಕಮಹಾನುಭಾವರುಗಳಿಗೂ ನಮ್ಮ ಆದರದ ವಂದನೆಗಳು.

ಗ್ರಂಥವನ್ನು ಜಾಗ್ರತೆಯಿಂದ ಅಚ್ಚುಮಾಡಿಸಬೇಕಾದುದರಿಂದ ಅನೇಕ ಅಚ್ಚಿನ ದೋಷಗಳು ಉಳಿದಿವೆ. ಪುಸ್ತಕದ ಕೊನೆಯಲ್ಲಿರುವ ಒಪ್ಪೋಲೆಯಲ್ಲಿ ಎಲ್ಲ ಅಚ್ಚಿನ ದೋಷಗಳು ಬಂದಿಲ್ಲವೆಂಬುದು ನಿಜ. ಅವುಗಳನ್ನೆಲ್ಲ ಕೊಟ್ಟು ಒಪ್ಪೋಲೆಯನ್ನು ಹೊತ್ತಿಗೆಗೆ ಭಾರವಾಗುವಂತೆ ಮಾಡುವುದಕ್ಕಿಂತ ತಿಳಿಯಬಹುದಾದವುಗಳನ್ನು ಬಿಟ್ಟು ಬಿಡುವುದು ಒಳಿತೆಂದು ತೋರಿ ಅವುಗಳನ್ನು ಬಿಟ್ಟುಬಿಟ್ಟಿದ್ದೇವೆ. ಈ ಪುಸ್ತಕದಲ್ಲಿ ಅನೇಕ ದೋಷಗಳಿರಬಹುದು ಸಹೃದಯರು ಅವುಗಳನ್ನು ತೋರಿಸಿಕೊಟ್ಟು ಉಪಕೃತರನ್ನು ಮಾಡಬೇಕೆಂದು ಅವರಲ್ಲಿ ನಮ್ಮ ನಮ್ರ ಬಿನ್ನಹ.

ಕರ್ಣಾಟಕಸಂಘ,
**ರಾಜಾರಾಮ ಕಾಲೇಜ,**
**ಕೊಲ್ಹಾಪೂರ.**

**ಕೆ. ಜಿ. ಕುಂದಣಗಾರ.**
ಅಧ್ಯಕ್ಷ.



# ವಿಷಯಸೂಚಿಕೆ.



## ಚಿತ್ರಗಳು.

# ಶ್ರೀಮನ್ಮಹಾರಾಜ-ನಿರಂಜನ-ಜಗದ್ಗುರು

## ಗುರುಸಿದ್ಧರಾಜಯೋಗೀಂದ್ರ, ಮಹಾಸ್ವಾಮಿಗಳವರು,

## ಮೂರುಸಾವಿರಮಠ ಹುಬ್ಬಳ್ಳಿ.

ಇವರು ಕೊಲ್ಹಾಪುರದ ರಾಜಾರಾಮ ಕಾಲೇಜದ ಕರ್ಣಾಟಕ— ಸಂಘಕ್ಕೆ ಹರಿಹರ ದೇವನ ಪ್ರಶಸ್ತಿಯ ವಿಷಯವಾಗಿ ಕಳುಹಿಸಿದ ಸಂದೇಶವು:

ಕರ್ಣಾಟಕಸಾಹಿತ್ಯದೇವಿಯ ಕಂಠಮಾಲೆಯೊಳಗೆ ಕಂಗೊಳಿಸುವ ಕವಿಪುಂಗವರಲ್ಲಿ ಹರಿಹರದೇವರೊಬ್ಬರು. ಇವರು ಪ್ರಾಚೀನಮಹಾಕವಿಗಳಂತೆ ಒಂದು ವಿಶಿಷ್ಟವಾದ ಸಂಪ್ರದಾಯಕ್ಕೆ ಸೆರೆಸಿಕ್ಕವರಲ್ಲ. ಆದರೆ ತಾವು ಕಂಡುಕೊಂಡ ಮಾರ್ಗವನ್ನು ಕೃತಿರೂಪದಲ್ಲಿಳಿಸಿದ ಓರ್ವ ಮಹಾಕವಿಗಳು. ಕಾವ್ಯಪ್ರಪಂಚದಲ್ಲಿ ನವಯುಗ ನಿರ್ಮಾಣಕರು. ಆದುದರಿಂದ ಸರಳ ರಗಳೆಯಲ್ಲಿಯೇ ರಸವತ್ತಾದ ಕಾವ್ಯವನ್ನು ರಚಿಸಿ ಕರ್ಣಾಟಕವಾಙ್ಮಯಕ್ಕೆ ಅಪಾರವಾದ ಉಪಕಾರವನ್ನು ಮಾಡಿದವರು. ಇವರ ಪೂರ್ವದಲ್ಲಿ ಒಂದೇ ಒಂದು ಗದ್ಯಗ್ರಂಥವಿದ್ದರೂ ಹರೀಶ್ವರದೇವನೇ ಕನ್ನಡಗದ್ಯಕಾವ್ಯದ ಆದ್ಯಪ್ರವರ್ತಕನು. ಇವೆಲ್ಲ ವಿಷಯಗಳಲ್ಲಿ ಹರಿಹರದೇವನು ತೋರಿಸಿದ ಧೈರ್ಯಸ್ಥೈರ್ಯಗಳೂ ಜಾಣ್ಮೆಯೂ ಅರ್ವಾಚೀನ ಕರ್ಣಾಟಕ—ಕವಿ—ಪ್ರಪಂಚಕ್ಕೇನೆ ಮಾರ್ಗದರ್ಶಕವಾಗಿದೆ.

ಹರಿಹರದೇವನು ಎಲ್ಲರ ಆದರಣೆಗೂ ಪಾತ್ರನಾದವನು. ಹಾಗೂ ವೀರಶೈವ ಕವಿಗಳಲ್ಲೆಲ್ಲ ಆದಿಕವಿಯು. ಆದುದರಿಂದಲೇ ಭೀಮಕವಿಯಂಥ ಪ್ರಖ್ಯಾತಕವಿಯೂ ಕೂಡ ಹರಿಹರಾಚಾರ್ಯರಿಗೆ "ಧರೆಗುಭಯಕವಿಶರಭಭೇರುಂಡ"ನೆಂದು ಹೇಳಿರುವನು. ಇಂಥ ಮಹನೀಯರ ಯಶೋವಿಸ್ತರವನ್ನು ವಿಸ್ತರಿಸಿದಷ್ಟು ಕಡಿಮೆ.

ಕರವೀರಪುರವು ಒಮ್ಮೆ ಕನ್ನಡನಾಡಾಗಿದ್ದರೂ ಕಾಲವೈಚಿತ್ರ್ಯದಿಂದ ಈಗ ಮರಾಠಿ ನಾಡಿನಲ್ಲಿ ಸೇರಿದೆ. ಇಂಥ ಸ್ಥಿತಿಯಲ್ಲಿಯೂ ಕೂಡ ಕೊಲ್ಹಾ

ಪುರದ ರಾಜಾರಾಮ ಕಾಲೇಜದ ಕರ್ಣಾಟಕಸಂಘದವರು "ಹರಿಹರದೇವನ ಪ್ರಶಸ್ತಿ" ಯೆಂಬುವ ಗ್ರಂಥವನ್ನು ಪ್ರಕಟಿಸಲು ಕೈಕೊಂಡ ಕಾರ್ಯವು ಅತ್ಯಂತ ಸ್ತುತ್ಯವೂ ಉಳಿದ ಸಂಘಗಳಿಗೆ ಮಾರ್ಗದರ್ಶಕವೂ ಆಗಿರುವುದು. ಇವರು ಆರಂಭಿಸಿದ ಸಾಹಿತ್ಯಸೇವೆಯ ಕಾರ್ಯವು ಉತ್ತರೋತ್ತರಾಭಿವೃದ್ಧಿಯಾಗಲೆಂದು ಆಶಿಸುವೆವು.

ಕಾರಭಾರಿ.

**ಮೂರುಸಾವಿರಮಠ, ಹುಬ್ಬಳ್ಳಿ.**



# ಮುನ್ನುಡಿ.



" ಹರಿಹರದೇವ "ವೆಂಬ ಈ ಗ್ರಂಥಕ್ಕೆ ಮುನ್ನುಡಿರೂಪದ ಮಂಗಳಾರತಿ ಮಾಡುವ ಕೆಲಸವನ್ನು ನನ್ನ ಮಿತ್ರರಾದ ಪ್ರೊಫೆಸರ ಕುಂದಣಗಾರರವರು ನನಗೆ ಒಪ್ಪಿಸಿರುವರು. ವಿಧಿಗನುಸರಿಸಿ ಮಾಡಿದರೆ ತೀರಿತೆಂದೂ ವಾಚಕರು ಅದಕ್ಕೂ ಹೆಚ್ಚಿಗೆ ನಿರೀಕ್ಷಿಸಲಾರರೆಂದೂ ತಿಳಿದು ನಾನಾದರೂ ಒಪ್ಪಿಕೊಂಡೆ; ಏಕೆಂದರೆ ವಿದ್ವತ್ತಾಪೂರ್ಣವಾದ ವಿದ್ವಾಂಸರ ಅನೇಕ ಲೇಖಗಳು ಈ ಗ್ರಂಥದಲ್ಲಿ ಅಡಕವಾಗಿವೆ.

ಕನ್ನಡನುಡಿಯು ಪ್ರಾಚೀನತೆಯಲ್ಲಿ, ಮಾಧುರ್ಯದಲ್ಲಿ, ಉಪಯುಕ್ತತೆಯಲ್ಲಿ, ವಿಸ್ತಾರತೆಯಲ್ಲಿ, ಸಾಮಾನ್ಯವಾಗಿ ಹೇಳಬೇಕಾದರೆ ಆವ ವಿಷಯದಲ್ಲಿಯೂ ಭಾರತೀಯ ಭಾಷೆಗಳಲ್ಲಿ ಮಿಗಿಲಾದ ಸ್ಥಾನವನ್ನೇ ಪಡೆಯಲರ್ಹವಾಗಿದೆಯೆಂಬುದು ಅಭಿಮಾನದ ಸಂಗತಿಯು. ಕನ್ನಡನುಡಿಗೆ ಇಂಥ ಗೌರವದ ಸ್ಥಾನವನ್ನು ಒದಗಿಸಿಕೊಟ್ಟವರು ಅನೇಕ ಮಹನೀಯರು. ಅವರಲ್ಲಿ ಹರಿಹರದೇವನು ಒಬ್ಬನು. ಗಹನವಾದ ತಾತ್ವಿಕವಿಷಯಗಳನ್ನು ಭೌತಿಕವಿಷಯಗಳೊಡನೆ ಸಂಕಲಿಸಿ ಪಾಮರರಿಗೂ ಮನಸಿನಲ್ಲಿ ನಡುವಂತೆ ಸ್ಪಷ್ಟ, ಸುಲಭ, ಮತ್ತು ಮಧುರವಾದ ಶೈಲಿಯಲ್ಲಿ ಹೇಳಲು ಯತ್ನಿಸಿದವನು. ಈತನು ಕವಿಯೆಂದು ಕೆಲವರು, ಜ್ಞಾನಿಯೆಂದು ಕೆಲವರು, ಧಾರ್ಮಿಕ ಪುರುಷನೆಂದು ಕೆಲವರು, ಭಕ್ತಾಗ್ರೇಸನೆಂದು ಕೆಲವರು, ಶಿವಯೋಗಿಯೆಂದು ಕೆಲವರು, ಅವತಾರ ಪುರುಷನೆಂದು ಕೆಲವರು, ಹೀಗೆ ನಾನಾಪ್ರಕಾರವಾಗಿ ಈತನನ್ನು ಬಣ್ಣಿಸಿರುವರು. ಆದರೆ ಇವುಗಳನ್ನೆಲ್ಲ ವಿಂಗಡಿಸಿ ಈತನಿಗೆ ಹಚ್ಚುವದಕ್ಕಿಂತ ಎಲ್ಲವನ್ನು ಒಟ್ಟುಗೂಡಿಸಿ ಇವೆಲ್ಲವೂ ಹರಿಹರನಲ್ಲಿ ಇರುವುವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದು ಹೇಳಬಹುದು.

ಹರಿಹರನಲ್ಲಿ ಮೊದಲು ಉಂಟಾದುದು ಶಿವನಲ್ಲಿಯ ಆಳವಾದಭಕ್ತಿ. ಆ ಭಕ್ತಿಯು ದೃಢವಾಗುತ್ತ ಹೋದಂತೆ ಶಿವನಲ್ಲಿ ಮತ್ತು ಶಿವಶರಣರಲ್ಲಿ ಪ್ರೇಮವು ಬಲಿಯಹತ್ತಿ ಶಿವಮಹಾತ್ಮ್ಯ, ಮತ್ತು ಶಿವಶರಣರ ಮಹಿಮೆಗಳು ಆತನ ಮುಖದಿಂದ ಸ್ವಾಭಾವಿಕವಾಗಿ ನಿರರ್ಗಲವಾಗಿ ಹೊರಬೀಳಹತ್ತಿದುವು.

ಅನೇಕ ಕವನಗಳಾಗಿ ಹರಿಹರನನ್ನು ಕವಿಯನ್ನಾಗಿ ಮಾಡಿದುವು. ಕವಿಯೇ ಜ್ಞಾನಿಯೆಂದೂ, ಧಾರ್ಮಿಕ ಪುರುಷನೆಂದೂ, ಬಲ್ಲವರು ಒಪ್ಪುವರು. ವೇದಗಳ ಮಂತ್ರಗಳನ್ನು ಕಂಡು ಋಷಿಗಳು ಕವಿಗಳೇ ಎಂದು ಋಗ್ವೇದಸಂಹಿತೆಯು ಹೇಳುವುದು. ಆದುದರಿಂದ ಹರಿಹರನು ಸ್ವಾಭಾವಿಕ ಕವಿಯು ಆತನ ಗ್ರಂಥಗಳಲ್ಲಿ ರಗಳೆಗಳು ಕನ್ನಡಸಾಹಿತ್ಯದಲ್ಲಿ ಉನ್ನತಸ್ಥಾನವನ್ನು ಪಡೆಯಲ್ತಕ್ಕುವು. ಹರಿಹರನು ರಗಳೆಗಳನ್ನು ಬರೆದುದರಿಂದ ಈತನನ್ನು ರಗಳೆಯ ಕವಿಯೆಂದು ಕರೆಯಹತ್ತಿದರೆಂದು ಈ ಅಪವಾದವನ್ನು ದೂರ ಮಾಡಲು ಗಿರಿಜಾಕಲ್ಯಾಣವನ್ನು ಬರೆದನೆಂದೂ ಇದ್ದ ಪ್ರತೀತಿಯು ನಮಗೆ ಸಮಂಜಸವಾಗಿ ತೋರುವುದಿಲ್ಲ. ಈತನು ಗಿರಿಜಾಕಲ್ಯಾಣವನ್ನು ಬರೆಯದಿದ್ದರೂ ಈತನ ಗೌರವಕ್ಕೆ ಆವರೀತಿಯಿಂದಲೂ ಕುಂದುಬರುತ್ತಿದ್ದಿಲ್ಲವೆಂದೇ ಹೇಳಬಹುದು.

ಹಿಂದುಸ್ತಾನದಲ್ಲಿ ಮಹಾಪುರುಷರ ಜೀವನಚರಿತ್ರೆಯನ್ನು ಐತಿಹಾಸಿಕ ದೃಷ್ಟಿಯಿಂದ ಬರೆದಿಡುವ ಸಂಪ್ರದಾಯವು ತೀರಕಡಿಮೆ. ಮಹಾಪುರುಷರು ಜನತೆಯ ಉದ್ಧಾರಕ್ಕಾಗಿ ಬಂದವರು; ತಮ್ಮ ಜೀವನಕ್ರಮದಲ್ಲಿ ಸಾಮಾನ್ಯರಂತೆ ನಟಿಸಿದರೂ ಸಾಮಾನ್ಯರಲ್ಲ; ದೈವೀಪುರುಷರು; ಅಂಥವರ ಚರಿತೆಯನ್ನು ಸಾಮಾನ್ಯರ ಚರಿತೆಯಂತೆ ಬರೆಯುವುದು ಯೋಗ್ಯವಲ್ಲ; ಅವರ ಮಹತ್ಕೃತಿಯು ಜನತೆಗೆ ತಿಳಿದರೆ ತೀರಿತು; ಎಂಬುದೇ ಇದಕ್ಕೆ ಕಾರಣವಾಗಿರಬಹುದು. ಆದುದರಿಂದಲೇ ಈ ಮಹಾಪುರುಷರು ಅದ್ಭುತ ಮತ್ತು ಅಗಾಧ ಶಕ್ತಿಗಳಿಂದೊಡಗೂಡಿದ ಪೌರಾಣಿಕ ಪುರುಷರಾಗಿರುವರು. ಈಗಿನ ಮನ್ವಂತರದವರು ನಂಬಲಾರದ ಅನೇಕ ಪವಾಡಗಳನ್ನು ಅವರ ಚರಿತೆಯಲ್ಲಿ ತೊಡಕಿಸಿರುವುದನ್ನು ಕಾಣಬಹುದು. ಈ ಸಾಮಾನ್ಯವಾದ ನಿಯಮಕ್ಕೆ ಹರಿಹರನು ಹೊರಗಾದವನಲ್ಲ. ಆತನ ಚರಿತೆಯನ್ನು ನಿರ್ಧರಿಸಲು ಹಲಕೆಲವು ಬಲವಾದ ಆಧಾರಗಳಿವೆ. ಅವೆಲ್ಲವುಗಳನ್ನು ಈಗಿನ ವಿಮರ್ಶಕರ ಒರೆಗಲ್ಲಿಗೆ ಹಚ್ಚಿ ಸಿದ್ಧಮಾಡಿ ತೋರಿಸುವುದು ಹಗುರಾದ ಕೆಲಸವಲ್ಲ. ಈ ಗ್ರಂಥದಲ್ಲಿ ಹರಿಹರನ ಚರಿತ್ರವನ್ನು ಸರಿಯಾಗಿ ಕನ್ನಡಿಗರ ಮುಂದಿಡಲು ಯತ್ನಮಾಡಲಾಗಿದೆ.

ಹರಿಹರನ ಚರಿತೆಯಲ್ಲಿ ವಿವಾದಾಸ್ಪದವಾದ ಹಲಕೆಲವು ವಿಷಯ ಗಳುಂಟು. ಅವುಗಳಲ್ಲಿ ಮುಖ್ಯವಾದುವು ಹರಿಹರನ ಕಾಲ ಮತ್ತು ಮತ ಎಂದು ಹೇಳಬಹುದು ಪಂಡಿತರಲ್ಲಿ ಇವುಗಳಬಗ್ಗೆ ಭಿನ್ನಾಭಿಪ್ರಾಯ ಗಳಿವೆ. ಇವುಗಳಲ್ಲಿ ಮೊದಲನೆಯದಾದ ಹರಿಹರನ ಕಾಲವನ್ನು ನನ್ನ ಮಿತ್ರರಾದ ಪ್ರೊಫೆಸರ ಕುಂದಣಗಾರರವರು ಮತ್ತು ಪ್ರೊಫೆಸರ ಮಾಳವಾಡರವರೂ ಇದೇ ಗ್ರಂಥದ ಪುಟ ೪೯ರಿಂದ ೬೭ರಲ್ಲಿ ನಿರ್ಣಯಿಸಿರುವರು. ಸಿದ್ಧನಂಜೇಶನ ( ಸು. ೧೬೫೦ ಕ್ರಿ. ಶ. ) ರಾಘವಾಂಕ ಚಾರಿತ್ರದಲ್ಲಿ ೧೪—೫೮ನೆಯ ಪದ್ಯದಲ್ಲಿ ಹರಿಹರರು "ಪಾವನೇಶ್ವರ ಸಂವತ್ಸರದ ಮಾರ್ಗಶೀರ್ಷದ ದಶಮೀ ಸೋಮವಾರ ಮಧ್ಯಾಹ್ನದಲ್ಲಿ ಹಂಪಿಯ ವಿರೂಪಾಕ್ಷನ ದೇವಾಲಯದಲ್ಲಿ ಪರದೆಯ ಉರಿಯನ್ನು ಆರಿಸಿದ"ನೆಂದು ಉಲ್ಲೇಖವಿದೆ. ಇದು ಕ್ರಿ ಶ. ೧೨೦೬ನೆಯ ಡಿಶಂಬರ ೯ನೆಯ ತಾರೀಖು ಸೋಮವಾರಕ್ಕೆ ಸರಿಹೋಗುವುದೆಂದು ಪುಟ ೬೪ ರಲ್ಲಿ ತೋರಿಸಿಕೊಟ್ಟಿರುವರು. ಶ್ರೀಮಾನ್ ರಾಜಪುರೋಹಿತರವರೂ ತಮ್ಮ ಲೇಖದಲ್ಲಿ ಇದನ್ನೇ ಒಪ್ಪಿರುವರು. ಡಾ. ವೆಂಕಟಸುಬ್ಬಯ್ಯನವರೂ ಇದನ್ನೇ ಒಪ್ಪಿರುವರೆಂಬುದು ಸಂತೋಷದ ಸಂಗತಿಯು. ಆದಾಗ್ಯೂ ಹರಿಹರನ ಕಾಲವ[illegible] ಬಸವಣ್ಣನವರ ( ಕ್ರಿ. ಶ. ೧೧೬೦ ) ಈಚೆಗೆ ಮತ್ತು ಸೂಕ್ತಿಸುಧಾರ್ಣವದ ಕರ್ತೃ ಮಲ್ಲಿಕಾರ್ಜುನನ ( ಕ್ರಿ. ಶ. ೧೨೪೫ ) ಆಚೆಗೆ ಇಟ್ಟುಕೊಳ್ಳಬಹುದು.

---

೧. ಈ ಪದ್ಯಗಳು ಒಂದು ಕೈಬರಹದ ಪುಸ್ತಕದಲ್ಲಿ ದೊರೆತವೆಂದು ಪುಟ ೬೩ರ ಅಡಿಟಿಪ್ಪಣೆಯಿಂದ ಕಂಡುಬರುವದು. ನನ್ನ ಹತ್ತಿರವಿದ್ದ ಒಂದು ಪ್ರತಿಯಲ್ಲಿಯೂ ಇವೇ ಪದ್ಯಗಳಿವೆ. ನನ್ನ ಪ್ರತಿಯು ಬರಹವು 'ಶ್ರೀನೃಪ ಶಾಲಿವಾಹನ ಶಕ ೧೭೦೯ ಪ್ಲವಂಗನಾಮ ಸಂವತ್ಸರದ ಶ್ರಾವಣವದ್ಯ ೮ ಬುಧವಾರ ಮೃಗನಕ್ಷತ್ರದ ಮಧ್ಯಾಹ್ನದಲ್ಲಿ ಮುಗಿದಿದೆ. ಈಗ ಅಚ್ಚಾಗಿರುವ ಪ್ರತಿಯಲ್ಲಿಯೂ ಇವೇ ಪದ್ಯಗಳಿವೆ.

೨. ಪುಟ ೬೮.

೩. ಪುಟ ೬೭.

ಇನ್ನು ಎರಡನೆಯದು ಹರಿಹರನ ಮತದ ವಿಷಯವು. ಶ್ರೀ. ರಾಜ ಪುರೋಹಿತರು ಪುಟ ೬೦ರಲ್ಲಿ "ಹರಿಹರನು ಜನ್ಮತಃ ಅದ್ವೈತ ಬ್ರಾಹ್ಮಣನು. ಗಿರಿಜಾಕಲ್ಯಾಣವನ್ನು ಬರೆದುದು ಬ್ರಾಹ್ಮಣನಿರುವಾಗ ನಂತರ ವೀರಶೈವನಾದನು. ಆಮೇಲೆ ಶರಣರಗಳೆಗಳನ್ನು ಬರೆದನು" ಎಂಬು ದಾಗಿ ಅಭಿಪ್ರಾಯ ಪಡುವರು. ಇವರ ಅಭಿಪ್ರಾಯಗಳಿಗೆ ಗಿರಿಜೆಯ ವಿವಾಹಸಮಾರಂಭದಲ್ಲಿ ಜರುಗಿದ ಹೋಮ, ಸಪ್ತಪದಿ ಮೊದಲಾದ ವಿಧಿ ಗಳನ್ನು ವರ್ಣಿಸಿರುವುದೂ, ತಪಸ್ವಿಗಳ ಯಜ್ಞೋಪವೀತ ಮುಂತಾದ ಬ್ರಾಹ್ಮಣಲಾಂಛನಗಳನ್ನು ಪ್ರೌಢಿಯಿಂದ ವರ್ಣಿಸಿರುವುದೂ, ಕಪಿಲ, ಕೌಂಡಿನ್ಯ, ದೂರ್ವಾಸ, ಪರಾಶರ, ಯಾಜ್ಞವಲ್ಕ್ಯ, ಪುಂಡರೀಕ, ಗೌತಮ, ಜಮದಗ್ನಿ, ಜೈಮಿನಿ ಮೊದಲಾದ ಋಷಿಗಳನ್ನು ಸ್ವಾಭಿಮಾನದಿಂದ ಉಲ್ಲೇ ಖಿಸಿರುವುದೂ, ಈ ತನಿಗೆ ಹರಿಹರನೆಂದು ಹೆಸರಿರುವುದೂ, ಆಧಾರಗಳಾಗಿವೆ. ಇವೆಲ್ಲವು ಹರಿಹರನು ಗಿರಿಜಾ ಕಲ್ಯಾಣವನ್ನು ಬರೆಯುವ ಕಾಲಕ್ಕೆ ಆತನು ಅದ್ವೈತ ಬ್ರಾಹ್ಮಣನಾಗಿದ್ದನೆಂದು ಸಿದ್ಧಮಾಡಲು ಸಾಕಷ್ಟು ಬಲವಾದ ಆಧಾರಗಳೆಂದು ಶ್ರೀ. ರಾಜಪುರೋಹಿತರ ಮತವು. ಆದರೆ ನಮಗೆಮಾತ್ರ ಹಾಗೆ ತೋರುವುದಿಲ್ಲ. ಗಿರಿಜಾಕಲ್ಯಾಣವನ್ನು ಬರೆಯುವಾಗ ಹರಿಹರನು ಲಿಂಗವಂತನಿದ್ದಿರಬೇಕೆಂದೇ ನಮಗೆ ತೋರುವುದು.

ಗಿರಜಾಕಲ್ಯಾಣದ ಕಥಾವಸ್ತುವು ಅತಿ ಪ್ರಾಚೀನವಾದುದು. ಕಾಲಿ ದಾಸ ಮಹಾಕವಿಗಳ ಮನಸ್ಸನ್ನು ಆಕರ್ಷಿಸಿ ಸಂಸ್ಕೃತ ಸಾಹಿತ್ಯದೊಳಗಿನ ಒಂದು ಮಹಾಕಾವ್ಯಕ್ಕೆ ಕಾರಣವಾದುದು. ಬಾಣಕೃತವಾದ ಪಾರ್ವತೀ ಪರಿಣಯವೆಂಬ ಒಂದು ನಾಟಕವೂ ಉಂಟು. ಇದು ಶೈವಪುರಾಣಗಳಿಂದ ಉದ್ಧೃತವಾದುದು. ಶಿವನ ಪಂಚವಿಂಶತಿಲೀಲೆಗಳಲ್ಲಿ ಇದು ಒಂದು. ಇಂಥ ಪ್ರಾಚೀನ ಕಥೆಯನ್ನು ಹರಿಹರನು ಪ್ರತಿಭೆಗೆ ಆಸ್ಪದವಿಲ್ಲದ ಸ್ಥಳದಲ್ಲಿ ಬದಲಿ ಸುವ ಗೊಡವೆಗೆ ಹೋಗದೆ ಕನ್ನಡಕಾವ್ಯಸೃಷ್ಟಿಗಿಳಿಸಿದನೆಂದು ಹೇಳಿದರೆ ತಪ್ಪಾಗಲಾರದು. ಆದುದರಿಂದ ಗಿರಿಜೆಯ ವಿವಾಹಸಮಾರಂಭದ ಹೋಮ ಮತ್ತು ಸಪ್ತಪದಿ ಮುಂತಾದ ವಿಧಿಗಳು, ಯಜ್ಞೋಪವೀತ ಮೊದಲಾದ ಲಾಂಛನಗಳು, ಋಷಿಗಳ ಹೆಸರುಗಳು, ಇತ್ಯಾದಿ ವಿಷಯಗಳನ್ನು ಮೂಲ

ಕಥಾವಸ್ತುವಿನಲ್ಲಿದ್ದಂತೆ ಇಟ್ಟಿರುವನೆಂದು ಊಹಿಸಲವಕಾಶವಿದೆ. ಮೇಲಾಗಿ ವೀರಶೈವರ ವಿವಾಹವಿಧಿಗಳಲ್ಲಿ ಕೆಲವು ಕಡೆಗೆ ಲಾಜಾಹೋಮ ಸಪ್ತಪದಿಗಳ ಅವಶೇಷಗಳು ಕಂಡುಬರುವವು. ಕಪಿಲ, ದುರ್ವಾಸ, ಜಮದಗ್ನಿ ಮೊದಲಾದವರು ಶಿವೋಪಾಸಕರಿದ್ದರೆಂದು ಪುರಾಣಗಳಲ್ಲಿ ಪ್ರತೀತಿಯಿದೆ. ದೂರ್ವಾಸನು ತ್ರಿಕ ಮೊದಲಾದ ಶೈವಪಂಥಗಳ ಉತ್ಪಾದಕನೆಂದೂ, ಶೈವಸಿದ್ಧಾಂತ ಸ್ಥಾಪನಾಚಾರ್ಯನೆಂದೂ ಶಿಲಾಶಾಸನಗಳಲ್ಲಿ ಹೇಳಿದೆ. ಜಮದಗ್ನಿಯ ಮಗನಾದ ಪರಶುರಾಮನು ಶಿವನ ಶಿಷ್ಯನೆಂದೂ, ಶಿವನ ಭಕ್ತನೆಂದೂ ರಾಮಾಯಣದಿಂದ ಸಿದ್ಧವಾಗುವದು. ಶೈವಪುರಾಣಗಳಲ್ಲಿ ಹರಿಯು ಕೂಡ ಪರಮಶಿವಭಕ್ತನೆಂದೇ ಹೇಳಿದೆ. ವೀರಶೈವರಲ್ಲಿ ಆರಾಧ್ಯರೆಂಬುವವರು ಲಿಂಗ ಯಜ್ಞೋಪವೀತಗಳೆರಡನ್ನೂ ಧರಿಸುವರೆಂದು ಕೇಳಿಕೆಯಲ್ಲಿದೆ. ಆದುದರಿಂದ ಮೇಲಿನ ಆಧಾರಗಳು ಹರಿಹರನು ಶೈವನಿದ್ದನೆಂಬುದನ್ನೇ ಹೆಚ್ಚಾಗಿ ಸಾಧಿಸುವವು. ಹರಿಹರನು ತನ್ನ ಗುರುಪರಂಪರೆಯನ್ನು ಹೇಳುವಾಗ "ಶೈವಾಗಮ" "ಶೈವಸಿದ್ಧಾಂತ" ಮೊದಲಾದ ಶೈವ—ಪಾರಿಭಾಷಿಕ—ಶಬ್ದಗಳನ್ನು ಉಪಯೋಗಿಸಿರುವುದೇ ಇದಕ್ಕೆ ಸಾಕ್ಷಿಯಾಗಿದೆ. ಶೈವಸಿದ್ಧಾಂತಕ್ಕೂ ಶಂಕರಾಚಾರ್ಯರ ಅದ್ವೈತಸಿದ್ಧಾಂತಕ್ಕೂ ಬಹಳ ಅಂತರವಿದೆ

ಗಿರಿಜಾಕಲ್ಯಾಣವನ್ನು ಬರೆಯುವಾಗ ಹರಿಹರನು ವೀರಶೈವನಿಲ್ಲದಿದ್ದರೆ ಕೆಳಗಿನ ವಿಷಯಗಳನ್ನು ಎತ್ತುವ ಅವಶ್ಯಕತೆಯಿದ್ದಿರಲಿಲ್ಲ.

ಶಿವನ ಮನೋಹರಂ ಶಿವನ ಪುಣ್ಯಫಲಂ ಶಿವನಾಪ್ತಸಂಕುಳಂ ।
ಶಿವನ ವಿಲೋಚನಂ ಶಿವನ ಗೋತ್ರಬಲಂ ಶಿವನೂರ್ಜಿತೋಜ್ವಲಂ ।
ಶಿವನ ಸುಖಂ ಸದಾಶಿವನ ಸರ್ವಮುಖಂ ಶಿವಭಕ್ತರೆನ್ನ ಕಾ ।
ವ್ಯವನತಿ ಸಮ್ಮದಂ ಬೆರಸಿ ಪೊರ್ದುಗೆ ತಿರ್ದುಗೆ ತಾಳ್ದುದಳ್ಕರಿಂ ॥

ಕ. ೧–೭೧.

ಇದರಲ್ಲಿ ಧ್ವನಿತವಾದ ಹರಿಹರನ ಶಿವಭಕ್ತಿಯ ಛಲವು ವೀರಶೈವಕವಿಗಳಿಗೆ ಸಾಮಾನ್ಯವಾಗಿದೆ.

ಘನಕವಿತಾವಿಳಾಸದೊಳೆ ಸಂದ ಮಯೂರನ ರೀತಿ ಕಾಳಿದಾ - |
ಸನ ರಸವೃತ್ತಿ ಬಾಣನ ಮೃದೂಕ್ತಿ ಹಲಾಯುಧನಾಶು ಕೇಶಿರಾ - |
ಜನ ಬಗೆಯುದ್ಭಟಯ್ಯನ ಗಭೀರತೆ ಮಲ್ಹಣನೇಳ್ಗೆ ಭೋಜರಾ - |
ಜನ ಜಸಮೆನ್ನ ಕಾವ್ಯರಸದೊಳ್ ನಲವಿಂ ನೆಲಸಿರ್ಕೆ ಸಂತತಂ || ಗಿ. ಕ. ೧-೮.

ಇದರಲ್ಲಿ ಉಕ್ತರಾದ ಮಯೂರ, ಕಾಲಿದಾಸ, ಬಾಣ, ಹಲಾಯುಧ, ಕೇಶಿರಾಜ, ಉದ್ಭಟ, ಮಲ್ಹಣ, ಭೋಜರಾಜ ಇವರೆಲ್ಲರು ಶಿವಕವಿಗಳು, ವೀರಶೈವ ಕವಿಗಳ ಅಭಿಮಾನದ ವ್ಯಕ್ತಿಗಳು ಗುಬ್ಬಿಯ ಮಲ್ಲಣಾರ್ಯನ ಕೆಳಗಿನ ಪದ್ಯವನ್ನು ಈ ಪದ್ಯಕ್ಕೆ ಹೋಲಿಸಿ ನೋಡಬಹುದು.

ಕಾವ್ಯಂ ತಾನಿದು ನವರಸ |
ಸೇವ್ಯಂ ಗಿರಿಜಾಧಿನಾಥನುರುತರಕರ್ಣ ||
ಶ್ರಾವ್ಯಂ ವಸುಧಾತಳದೊಳ್ |
ನವ್ಯಂ ಭೂತೇಶಭಕ್ತಜನತಾಭಾವ್ಯಂ || ಗಿ. ಕ. ೧-೧೪.

ಗಿರಿಜಾಕಲ್ಯಾಣವನ್ನು ಬರೆದುದು ಶಿವಭಕ್ತರಿಗಾಗಿ ಎಂದು ಈ ಪದ್ಯದಿಂದ ಕಂಡುಬರುವುದು.

ಸುರಚಿರಮೂರ್ತಿ ಸತ್ಯತರಮೂರ್ತಿ ಕೃಪಾಕರಮೂರ್ತಿ ಪುಣ್ಯವಿ - |
ಸ್ತರಗುರುಮೂರ್ತಿ ಶಾಂತಿತರಮೂರ್ತಿ ಸುಧಾಕರಮೂರ್ತಿಯುತ್ತರೋ - |
ತ್ತರವರಮೂರ್ತಿ ಮುಕ್ತಿಸುಖಮೂರ್ತಿ ಮನೋಹರಮೂರ್ತಿ ಚಂದ್ರಶೇ - |
ಖರಗುರುಮೂರ್ತಿ ಕೀರ್ತಿಪತಿ ಹಂಪೆಯ ಶಂಕರದೇವರೊಪ್ಪುವರ್ ||

ಆಶೈವಾಗಮಸಿದ್ಧರಪ್ಪ ಪರಮ ಶ್ರೀಶಂಕರಾಚಾರ್ಯರಿಂ |
ಪಾಶಚ್ಛೇದಮನಿಂಬುಗೊಂಡು ಮೆರೆದಂ ಶ್ರೀಶುದ್ಧಪಂಚಾಕ್ಷರೀ |
ನೇಶಾನಂದರಸಾದ್ರ್ರಚಿತ್ತಯುತಹೃದ್ರಾಜೀವಸಂಪೂರ್ಣಸಂ - |
ಕಾಶಪ್ರಜ್ವಲಮೂರ್ತಿ ಕೀರ್ತಿಭರಿತಂ ಶ್ರೀಮಾದಿರಾಜಹ್ವಯಂ ||

ಇಂತಿಂತೊಪ್ಪುವ ಮಾದಿರಾಜನ ಮನೋದುಗ್ಧಾಬ್ಧಿಚಂದ್ರಂ ಶಿವಂ |
ಶಾಂತಂ ಶಾಶ್ವತಮೂರ್ತಿ ಶೈವಸುಭಗಂ ಸಾಕಾರಸರ್ವೇಶ್ವರಂ ||
ಸಂತೋಷಾಭರಣಂ ಪ್ರಸನ್ನಕರಣಂ ಪ್ರತ್ಯಕ್ಷಪಂಚಾನನಂ |
ಸಂತಂ ಹಂಪೆಯ ಮಾಯಿದೇವನೆಸೆದಿರ್ಪಂ ಶೈವಸಾರೋದಯಂ ||

ಗಿರಿಜಾಕಲ್ಯಾಣದೊಳಗಿನ ಗಿರಿಜೆಯ ವಿವಾಹಪದ್ಧತಿಯನ್ನು ಚೆನ್ನಬಸವಪುರಾಣದೊಳಗಿನ ಪದ್ಧತಿಗೆ ಹೋಲಿಸಿ ನೋಡುವಾ.

ಗಿರಿಜಾಕಲ್ಯಾಣಂ

ಶ್ರೀ ಕೈಲಾಸದೊಳಿರ್ದು ಪಿ - ।
ನಾಕಿ ವಿವಾಹಾರ್ಥದಿಂದೆ ವರಮೂರ್ತಿಗಳಂ ॥
ಲೋಕೋತ್ತಮರಂ ಪುಣ್ಯ - ।
ಶ್ಲೋಕರನಾಸಪ್ತಋಷಿಯರಂ ನೆನೆಯಲೊಡಂ ॥

ನೆನೆಯದ ಮುನ್ನಂ ಬಂದರ್ ।
ವಿನುತಾಶೇಷರ್ ಜಟಾಧರರ್ ಭಸಿತಾಂಗರ್ ॥
ಘನಮಹಿಮಾರುಂಧತಿ ಜೆ - ।
ನ್ನನೆ ಬರೆವರೆ ಸಪ್ತಋಷಿಯರತಿ ಮುದದಿಂದಂ ॥

ಬಂದಭವಂಗತಿಸುಖಮುಖ ।
ದಿಂದಂ ಮೈಯ್ಯಿಕ್ಕಿ, ಹರ, ಬರ್ದುಂಕಿದೆವೆನುತಂ ॥
ಸಂದಣಿಸಿ ಪುಳಕಮೇಳ್ತರೆ ।
ನಿಂದಿರ್ದು ಶಶಾಂಕಮೌಳಿ ಬೆಸಸೆನೆ ಮತ್ತಂ ॥

ಇರೆ ಕಂಡು ಕರುಣದಿಂ ಶಂ - ।
ಕರನಾಋಷಿಗಳ್ಗೆ ಬೆಸಸಿದಂ ಪೋಪುದು ಭೂ - ॥
ಧರನಾಥನಲ್ಲಿಗತ್ಯಾ - ।
ದರಮಂ ಮಾಡುವುದು ಬೇಡುವುದು ಗಿರಿಸುತೆಯಂ ॥ ೧೦---೧೭ರಿಂದ ೨೦.

ಚೆನ್ನಬಸವಪುರಾಣಂ

ಅತ್ತಲಾಪರಶಿವಂ ಕೈಲಾಸಪುರದೊಳಗಿ - ।
ರುತ್ತಿರ್ದು ಸಪ್ತರ್ಷಿಗಳನಿರದೆ ಕರೆದು ಶೈ - ।
ಲೋತ್ತಮನ ಮಗಳ ತಾಂ ಮದುವೆಯಾಗಲ್ವೇಳ್ಕುಮಾತನಂ ಕೇಳಿಮೆನಲು ॥
ಕಾಂಡ ೩. ಸಂಧಿ ೯. ಪದ್ಯ ೨೦.

ಗಿರಿಜಾಕಲ್ಯಾಣಂ

ವರಮುನಿಗಳ್ ಮನನೊಂದಾ - ।
ದರದಿಂ ನುಡಿದರ್ ಶಿವಂ ಶಶಾಂಕಧರಂ ಶಂ - ॥
ಕರನಭವಂ ನಿರ್ಮಾಯಂ ।
ಗಿರಿಜೆಯ ಬೇಡುವಡೆ ತಿಳುಪಿ ಕಳುಪಿದನೆಮ್ಮಂ ॥

ಆತಂಗೆ ಚಂದ್ರಮೌಳಿಗ - ।
ಜಾತಂಗೆ ನಿರಾಮಯಂಗೆ ನಿತ್ಯಂಗೆ ನತ ॥
ವ್ರಾತಂಗೆ ಬೇಡಬಂದೆವು ।
ನೂತನಭುವನೈಕಭಾಗ್ಯವತಿಪಾರ್ವತಿಯಂ ॥
ಚಂದ್ರಧರಂಗೆ ನತೋತ್ಪಲ ।
ಚಂದ್ರಂಗಂ ಗಣಸಮೂಹನಯನಚಕೋರಸು ॥
ಚಂದ್ರಂಗಂ ಮುದದಿಂದಂ ।
ಚಂದ್ರಾನನೆ ಶಿವೆಯನೊಲ್ದು ಕೊಡು ಗಿರಿರಾಜಾ ॥ ೧೦--೨೪ರಿಂದ ೨೬.

ಚೆನ್ನಬಸವಪುರಾಣಂ

ಬಂದ ಹದನಂ ನಿರೂಪಿಸುವುದೆನೆ ಮುನಿನಾಥ - ।
ರೆಂದರೀಶಂಗೆ ಹಿಮಕರಕಲಾಚೂಡಂಗೆ ।
ವೃಂದಾರಕೇಂದ್ರಕಮಲಜಮುಕುಂದಾದಿಸುರನಿಕರಪೂಜಿತಪದಂಗೆ ॥
ಕಂದರ್ಪಪೂರಶುದ್ಧಸ್ಫಟಿಕವರ್ಣಂಗೆ ।
ಮಂದರಾಚಲನಿವಾಸಂಗೆ ಮುದದಿಂ ಬೇಡ ।
ಬಂದೆವು ಭವತ್ಸುತೆಯನಖಿಳಜನಸನ್ನುತೆಯನಮರಕುಲವಂದಿತೆಯನು ॥
೩--೯--೨೧.

ಗಿರಿಜಾಕಲ್ಯಾಣಂ

ಗಿರಿಪತಿ ಚಾರರಂ ಕಳುಪಿ ನಿರ್ಜರ ಲೋಕದ ವಿಶ್ವಕರ್ಮನಂ ।
ಬರಿಸಿ ನಯೋಕ್ತಿಯಿಂ ನುಡಿದು ಮನ್ನಿಸಿ ಬೇಳ್ಪುದನಿತ್ತು ಚಂದ್ರಶೇ - ॥
ಖರನ ಮದೀಯ ಪುತ್ರಿಯ ವಿವಾಹಶುಭೋಚಿತಮಂಟಪಾದಿಭಾ - ।
ಸುರವರ-ಚಿತ್ರಪತ್ರಕುಳಮಂ ನೆರೆ ನಿರ್ಮಿಪುದೆಂದು ಬೇಗದಿಂ ॥ ೧೦--೨೭.

ಎನೆ ನಲಿದು ವಿಶ್ವಕರ್ಮಂ ।
ನೆನೆಯದ ಮುನ್ನಂ ಸಮುದ್ರಮುದ್ರಿತವಿಶ್ವಾ - ।
ವನಿ ಪರಿಗತ ವಿಭವಾಸ್ಪದ - ।
ಘನಮಂಟಪಮೆಸೆದು ಮುಂದೆ ತೋರಿತ್ತಾಗಳ್ ॥ ೧೦--೨೮.

ಚೆನ್ನಬಸವಪುರಾಣಂ

ಗಿರಿರಾಜನಾ ಋಷಿಗಳಂ ಕಳುಪಿ ಬಳಿಕ ಘನ ।
ಹರುಷದಿಂ ವಿಶ್ವಕರ್ಮನನೊಡನೆ ಕರೆಸಿ ಮ - ।
ದ್ವರಸುತೆಯ ಮದುವೆಗೆ ವಿವಾಹಮಂಟಪವ ರಚಿಸೆನಲವಂ ಭಕ್ತಿಯಿಂದ ॥
ಪರಶಿವನ ಮದುವೆಯಿದು ಮಿಕ್ಕ ನಾಡಾಡಿ ಸುರ ।
ಗಿರರ ಮದುವೆಗಳ ಪಾಡಲ್ಲೆಂದು ಕೂಡಿ ನಿ - ।
ರ್ಧರಿಸಿ ತೊಡಗಿದನಖಿಳ ಪರಿಕರದ ಸಂಗ್ರಹದೊಳೇನೆಂಬೆನಚ್ಚರಿಯನು ॥ ೩-೯-೨೪

ಗಿರಿಜಾಕಲ್ಯಾಣಂ

ವಿವಾಹಮಂಟಪದ ವರ್ಣನೆ. ೧೦--೨೪ರ ಮುಂದಿನ ವಚನ.

ಗಿರಿಜೆಯ ಅಲಂಕಾರ. ೧೦--೨೯ರಿಂದ ೪೪ ವಚನಸಹಿತ.

ಚೆನ್ನಬಸವಪುರಾಣಂ

ವಿವಾಹಮಂಟಪದ ವರ್ಣನೆ ೩-೯-೨೪ ರಿಂದ ೩೦

ಗಿರಿಜೆಯ ಸಿಂಗಾರ ೩-೧೦-೮ ರಿಂದ ೨೫

ಶಿವನ ಮದುವೆಗೆ ಬಂದವರು:-- ದಿಕ್ಪಾಲಕರು (೧೦-೬೨), ಏಕಾದಶರುದ್ರರು, ದ್ವಾದಶರವಿಗಳು ( ೧೦-೬೩ ) ಅಷ್ಟವಸುಗಳು ( ೧೦-೬೪ ), ರಾಜರ್ಷಿ-ಬ್ರಹ್ಮರ್ಷಿ-ದೇವರ್ಷಿಗಳು ( ೧೦-೬೫ ), ಮಾಧವ ( ೧೦-೬೮ ), ಸರಸಿಜಭವ ( ೧೦-೬೯ ) ಸುರರ, ಖೇಚರರ, ಕಿನ್ನರರ, ಗರುಡರ, ಸಿದ್ಧರ, ಗಂಧರ್ವರ ಬಲಗಳು (೧೦-೭೦), ಬಿರುದಿನಗ್ಗದ ಗಣಂಗಳ್ ( ೧೦-೭೧ರಿಂದ ೭೪ ).

ಚೆನ್ನಬಸವಪುರಾಣಂ

ಶಿವನ ಮದುವೆಗೆ ಬಂದವರು:

ಹರಿಯಜ ಸುರೇಂದ್ರವರಗರುಡಗಂಧರ್ವಕಿ - ।
ನ್ನರಯಕ್ಷಸಿದ್ಧವಿದ್ಯಾಧರಪಿಶಾಚ ಕಿಂ - ।
ಪುರುಷಮನುಮುನಿವಸುದಿಶಾಧಿಪದಿನಾಧಿಪಾದ್ಯಖಿಳಸುರಸಂದೋಹಮುಂ ॥
ನರಭುಜಂಗಾದಿ ನಾನಾಲೋಕವಾಸಿಗಳ್ ।
ಪರಿಕಿಸಲನಂತಬ್ರಹ್ಮಾಂಡದ ಜನಂ ಮಹೇ - ।
ಶ್ವರನ ವೈವಾಹಮಂ ನೋಳ್ಪೆವೆಂದುತ್ಸವದೊಳೈತಂದುದಾಕ್ಷಣದೊಳು ॥
೩-೧೦-೩.

ಗಿರಿಜಾಕಲ್ಯಾಣಂ.

ಆಸಮಯದೊಳ್ ಪಾರ್ವತೀದೇವಿ ನಿಟ್ಟೈದೆ ಮೆಟ್ಟಕ್ಕಿಯಂ ಮೆಟ್ಟಿ ತೆರೆಯಂ ಮರೆಗೊಂಡು ನಿಂದಿರ್ಪಲ್ಲಿ--೧೦--೮೦ ವಚನ

ಚೆನ್ನಬಸವಪುರಾಣಂ.

ಈಶ್ವರಗಿರಿಜೆಯರ್ ಮಹಾಹರುಷದಿಂ ಮೆಟ್ಟಕ್ಕಿಗಿರದೆ ಬಿಜಯಂಗೈದುಂ ೩--೧೦--೫೬.

ಗಿರಿಜಾಕಲ್ಯಾಣಂ.

ಕಳಕಳಮಂ ನಿವಾರಿಸುತುಮಾಯತಮೇಯೆನಲಾಯತಂ ಲಸ - ।
ದ್ಗಳಬಳಮಂ ವಿವರ್ಜಿಸುತುಮಾಯತಮೇಯೆನಲಾಯತಂ ನಿರಾ - ॥
ಕುಳಿತಮನಂ ಬೃಹಸ್ಪತಿಸಮಾಯತಮೇಯೆನಲಾಯತಂ ಮನಂ ।
ಗೊಳಿಪ ಮಹಾಮುಹೂರ್ತದೊಳಗಾಯತಮೇಯೆನೆ ತಪ್ಪದಾಯತಂ ॥

ಎಂಬ ಸಮಯದೊಳ್

ಅಮರಗುರು ಸಕಳವೇದಾ - ।
ಗಮಕೋವಿದನೊಲ್ದು ಭಕ್ತಿಯಿಂದಂ ಪುಣ್ಯಾ - ॥
ಹವಮೆನುತುಮಿತ್ತ ರಾಜ - ।
ತ್ಸುಮುಹೂರ್ತಂ ಬಂದು ತೆರೆಯನೋಸರಿಸಲೊಡಂ ॥

ಕರಡೆಗಳ ರವಂ ನಿಸ್ಸಾ - ।
ಳರವಂ ಭೇರೀರವಂ ಮೃದಂಗರವಂ ದೇ - ॥
ವರ ಹೂಮಳೆಗಳ ಘೋರಂ ।
ಬರವಂ ಮಂಗಳರವಂಗಳುಣ್ಮಿದುವಾಗಳ್

ಆನಿರೆ ಮತ್ತೊರ್ವಳ್ ಗಡ ।
ತಾನಿರ್ಪಳ್ ಜಡೆಯೊಳೆನುತೆ ಮುಳಿದಿಡುವಂತಾ ॥
ಮಾನಿನಿ ಜೀರಿಗೆಬೆಲ್ಲದೊ - ।
ಳಾನುತೆ ಶಿವನುತ್ತಮಾಂಗಮಂ ಪದೆದಿಟ್ಟಳ್ ॥

ಮೃಡನಾಗಳ್ ಗಿರಿಜೆಯ ಚೆ - ।
ಲ್ವಿಡಿದ ಮೊಗಂಗಂಡು ಸಾತ್ವಿಕಂ ಕೈಕೊಂಡೊ - ॥
ಲ್ದಿಡುವಾ ಜೀರಿಗೆ ಬೆಲ್ಲಂ ।
ಸಡಿಲ್ದು ಕಂಪನದೆ ಬಿಳ್ದುವಗಗೆಜೆಯ ಪದದೊಳ್ ॥

ಅನಂತರದಲ್ಲಿ

ಅರಸುತ್ತಿರೆ ಪಲಕಾಲದೊ - ।
ಳುರೆ ನಿನ್ನನೆನುತ್ತೆ ಶಿವನ ಮುಕುಟೇಂದುಗೆ ತಾಂ ॥
ತುರುಗಿದ ತಾರಗೆಯೆಂಬಾ ।
ತೆರದಿಂ ತಂಡುಲಮನಗಜೆ ಸುರಿದಳ್ ಶಿರದೊಳ್ ॥

ಆಗಳ್

ಪರಮತಪೋನಿಧಿಯೆನಿಸಿದ ।
ಗಿರಿಜೆಗೆ ಪುಣ್ಯಾಂಬುವಿಂದಮಭಿಷೇಕಮನೊ - ॥
ಪ್ಪಿರೆ ಮಾಡುವ ತೆರದಿಂ ಶಂ - ।
ಕರನಮಲಿನ ತಂಡುಲಂಗಳಂ ತವೆ ಸುರಿದಂ ॥

ಆಸಮಯದೊಳ್

ನಲಿನಲಿದು ಬಂದು ಗಿರಿಪತಿ ।
ಯೊಲವಿಂದಂ ಗಿರಿಜೆಸಹಿತವುಂ ನಾವೆಲ್ಲಂ ॥
ನೆಲೆದೊಳ್ತರ್ ಬಳಿದೊಳ್ತರ್ ।
ಸಲೆದೊಳ್ತರ್ ನಿಮಗೆನುತ್ತೆ ಧಾರೆಯನೆರೆದಂ ॥ ೧೦--೧೬ ರಿಂದ ಕ್ಷ.

ಚೆನ್ನಬಸವಪುರಾಣಂ.

ಸುರರ ಗುರುವಾಸಮುಯದೊಳ್ ಭಕ್ತಿಯಿಂ ಶಿವನ ।
ವರಮಂಗಳಾಷ್ಟಕವನೋದುತಾಯುತವೆಮೆನ – ।
ಲಿರವೆ ಮುನಿವರರು ಸರ್ವಾಯುತಾಯುತವೆಯೆನಲ್ ತೆರೆ ಸೀರೆಯಂ ಸರಿಯಲು ॥

ಕರದ ಜೀರಿಗೆ ಬೆಲ್ಲದಿಂದಲೊರ್ಬೊರ್ಬರಂ ।
ಪರಗಿರಿಜೆಯುಂ ಬೇಗದಿಂದಿಡುತಿರಲ್ ನೋಡಿ ।
ಹರಿಯಜೇಂದ್ರಾದಿಗಳ್ ಜಯಜಯಧ್ವಾನದಿಂ ನುತಿಸಿದರ್ ಭಕ್ತಿಯಿಂದೆ ॥

ಆಸಮಯದೊಳ್ ಸಕಲ ವಾದ್ಯಸಿಘೋಷದಿಂ ।
ಗಾಸಿಯಾದುವು ದಿಗ್ಗಜಂ ಮುತ್ತಿನಕ್ಷತೆಯ ।
ಸೂಸಿದರ್ ಶಿವಶಿವೆಯರೊರ್ಬೊರ್ಬರುತ್ತಮಾಂಗದ ಮೇಲೆ ಲೀಲೆಯಿಂದೆ ॥
ಈಸದಾಶಿವನೆಡೆಗೆ ಗಿರಿರಾಜನೈದಿಸು ಪಿ – ।
ಲಾಸದಿಂ ಮಗಳ ಮುಂದಿಟ್ಟು ಧಾರೆಯನೆರೆಯು – ।
ಲಾಸಮೀಪದ ಮನೆಯೊಳೀಶ್ವರಂ ಶಿವೆಗೂಡಿ ಹಸೆಯೊಳಗೆ ಮಂಡಿಸಿದನು ॥

೩—೧೦—೫೭, ೫೮ ॥

ಮೇಲಿನ ಅವತರಣಿಕೆಗಳ ಸಾರಾಂಶವು ಹೀಗಿದೆ. ಪಾರ್ವತಿಯನ್ನು ಪರಮೇಶ್ವರನಿಗೆ ಮದುವೆಮಾಡಿಕೊಡಬೇಕೆಂದು ಕೇಳಲು ಹರಿಹರನೂ ವಿರೂಪಾಕ್ಷಪಂಡಿತನೂ ಪರ್ವತರಾಜನಲ್ಲಿಗೆ ಋಷಿಗಳನ್ನು ಕಳಿಸಿರುವರು. ವಿವಾಹಮಂಟಪ ನಿರ್ಮಾಣಕೆಲಸವನ್ನು ಇಬ್ಬರೂ ವಿಶ್ವಕರ್ಮನಿಗೇ ಒಪ್ಪಿಸಿರುವರು. ವಿವಾಹಮಂಟಪದ ವರ್ಣನೆಯಲ್ಲಿ ಇಬ್ಬರಲ್ಲಿಯೂ ಬಹುತರ ಸಾಮ್ಯತೆಯುಂಟು. ಗಿರಿಜೆಯ ಉಡಿಗೆತೊಡಿಗೆಗಳ ವರ್ಣನೆಯು ಎರಡಲ್ಲಿಯೂ ಸರಿಯಾಗಿದೆ. ಹರಿಹರನು ಮಾತ್ರ ಶಿವನ ಅಲಂಕಾರವನ್ನು ಹೆಚ್ಚಾಗಿ ವರ್ಣಿಸಿರುವನು. ಶಿವನ ನಿಬ್ಬಣಕ್ಕೆ ಬಂದವರ ಹೆಸರುಗಳಲ್ಲಿ ಎರಡರಲ್ಲಿಯೂ ಹೋಲಿಕೆಯಿದೆ. ಎರಡರಲ್ಲಿಯೂ ಸುರಗುರುವಾದ ಬೃಹಸ್ಪತಿಯೇ ಪುರೋಹಿತನಾಗಿದ್ದಾನೆ. ಎರಡರಲ್ಲಿಯೂ ಮೆಟ್ಟಕ್ಕಿ, ತೆರೆ, ಜೀರಿಗೆಬೆಲ್ಲ, ಅಕ್ಷತೆ, ದಾರೆಯನೆರೆಯುವಿಕೆ, ಇತ್ಯಾದಿ ವಿಷಯಗಳು ಸಾಮಾನ್ಯವಾಗಿವೆ. ನಂತರ ಹರಿಹರನು ಲಾಜಾಹೋಮ ಸಪ್ತಪದಿಗಳನ್ನು ಉಲ್ಲೇಖಿಸಿರುವನು. (ಗಿ. ಕ, ೧೦—೯೫ರಿಂದ ೯೭ ಗದ್ಯಸಹಿತ. ) ವಿರೂಪಾಕ್ಷಪಂಡಿತನು ನಾಗವಲ್ಲಿಯಾದ

ನಂತರ ಜಲಕ್ರೀಡೆಯನ್ನು ತಂದಿರುವನು. ಕುಮಾರಸಂಭವದಲ್ಲಿ ಪಾಣಿಗ್ರಹಣದನಂತರ ಅಗ್ನಿಪ್ರದಕ್ಷಿಣೆ—ಲಾಜಾಹೋಮ—ಧ್ರುವದರ್ಶನಗಳು ಉಕ್ತವಾಗಿವೆ ( ಕು. ಸಂ. ೭—೭೭ರಿಂದ ೮೬ ). ವಿರೂಪಾಕ್ಷಪಂಡಿತನು ಲಾಜಾಹೋಮಸಪ್ತಪದಿಗಳನ್ನು ಉಲ್ಲೇಖಿಸದಿರುವುದರ ಕಾರಣವು ಬರಬರುತ್ತ ಅವುಗಳ ಮಹತ್ವವು ವೀರಶೈವರಲ್ಲಿ ಕಡಿಮೆಯಾಗುತ್ತಾ ಬಂದಿರಬೇಕು. ವಿರೂಪಾಕ್ಷಪಂಡಿತನ ಕಾಲಕ್ಕೆ ವೀರಶೈವರಿಗೆ ಅವು ಅಂಥ ಮಹತ್ವದ ವಿಧಿಗಳಲ್ಲೆಂದು ಭಾವನೆಯಿದ್ದಿರಬೇಕು.

ಮೇಲಿನ ಆಧಾರಗಳಿಂದ ಹರಿಹರನು ಗಿರಿಜಾಕಲ್ಯಾಣವನ್ನು ಬರೆಯುವಾಗ ಲಿಂಗವಂತನಿದ್ದನೆಂದು ಊಹಿಸಲವಕಾಶವಿದೆಯೆಂಬುದು ಸ್ಪಷ್ಟವಾಗುವದು.

ಈ ಗ್ರಂಥದಲ್ಲಿ ಇಂಥ ವಿವಾದಾಸ್ಪದವಾದ ಅನೇಕ ವಿಷಯಗಳನ್ನು ಬಿಡಿಸಲು ಲೇಖಕರು ಯತ್ನಿಸಿದ್ದಾರೆ. ಅವರ ಯತ್ನವು ಎಲ್ಲಿಯವರೆಗೆ ಫಲಕಾರಿಯಾಗಿದೆಯೆಂಬುದನ್ನು ನಿರ್ಣಯಿಸಲು ವಾಚಕರೇ ಸಮರ್ಥರು. ಆದರೂ ನನ್ನ ಅಭಿಪ್ರಾಯದ ಮೇರೆಗೆ ಅವರ ಯತ್ನವು ಒಳ್ಳೇ ಯಶಸ್ವಿಯಾಗಿ ಪರಿಣಮಿಸಿದೆಯೆಂದು ಅಭಿಮಾನದಿಂದ ಹೇಳಬಲ್ಲೆ.

ಈ ಸಂಘವ ಸ್ಥಾಪನೆಯಲ್ಲಿ ನನ್ನದೂ ಸ್ವಲ್ಪ ಅಂಗವಿದೆಯಾದುದರಿಂದ 'ಹರಿಹರಪ್ರಶಸ್ತಿಯ' ಪ್ರಕಟನೆಯು ನನ್ನಲ್ಲಿ ಆನಂದವನ್ನೂ ಅಭಿಮಾನವನ್ನೂ ಉಂಟುಮಾಡಿರುವುದು. ಈ ಸಂಘಕ್ಕೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಈ ಸಂಘವು ನುರಿತಸಾಹಿತಿಗಳಾದ ಪ್ರೊಫೆಸರ ಕುಂದಣಗಾರರವರ ನೇತೃತ್ವದಲ್ಲಿ ದಿನೇದಿನೇ ಅಭಿವೃದ್ಧಿಯನ್ನು ಹೊಂದಿ ಇದಕ್ಕೂ ಹೆಚ್ಚಿಗೆ ಮಾತೃಭಾಷೆಯ ಸೇವೆಯನ್ನು ಮಾಡಲೆಂದು ಹಾರೈಸುವ

ತಾ ೬—೮—೧೯೩೭. ಸಂಘದ ಹಿತೇಚ್ಛು

**ಶಿ. ಚ. ನಂದಿಮಠ,**

ಪ್ರಿನ್ಸಿಪಾಲ, ಲಿಂಗರಾಜ ಕಾಲೇಜ,

**ಬೆಳಗಾವಿ.**



ಹಂಪಿಯ ಶ್ರೀ ವಿರೂಪಾಕ್ಷನ ಗುಡಿಯ ಗೋಪುರ.

### ಮಹಾಕವಿ

# ಹರಿಹರ-ಚರಿತ್ರೆ.



ಅನೇಕ ಕನ್ನಡ ಕವಿಗಳು ತಮ್ಮ ಚರಿತ್ರವಿಷಯಕವಾದ ಸಂಗತಿಗಳನ್ನು ಹೇಳಿಕೊಂಡಿಲ್ಲ. ಅವರಲ್ಲಿ ಹರಿಹರದೇವನು ಒಬ್ಬನು. ಆತನ ಸೋದರರವಳಿಯನೂ ಶಿಷ್ಯನೂ ಆದ ರಾಘವಾಂಕದೇವನು ಮತ್ತು ಉದ್ಭಟ ಕಾವ್ಯದ ಕರ್ತೃ ಸೋಮರಾಜನು ಅವನ ಚರಿತ್ರಕ್ಕೆ ಸಂಬಂಧಪಟ್ಟ ಕೆಲವು ಸಂಗತಿಗಗಳನ್ನು ತಮ್ಮ ಗ್ರಂಥಗಳಲ್ಲಿ ಹೇಳಿದ್ದಾರೆ. ಸಿದ್ಧನಂಜೇಶನು (ಸು. ೧೬೫೦) ತನ್ನ ರಾಘವಾಂಕಚಾರಿತ್ರದಲ್ಲಿ, ಶಾಂತಲಿಂಗದೇಶಿಕನು (ಸು. ೧೬೭೨) ತನ್ನ ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ, ಮತ್ತು ಪದ್ಮಣಾಂಕನು ( ಸು. ೧೩೮೫ ) ತನ್ನ ಪದ್ಮರಾಜಪುರಾಣದಲ್ಲಿ ಹರಿಹರ-ಚರಿತ್ರೆಗೆ ಒಳಪಟ್ಟ ಅನೇಕ ಸಂಗತಿಗಳನ್ನು ಹೇಳಿದ್ದಾರೆ. ಅವೆಲ್ಲವುಗಳು ನಿರ್ದುಷ್ಟವಾದುವೆಂದು ಹೇಳಲಾಗುವುದಿಲ್ಲ. ವೀರಶೈವ ಕವಿಗಳೆಲ್ಲರೂ ಆತನನ್ನು ಮನಮುಟ್ಟಿ ಹೊಗಳಿದ್ದಾರೆ. ಮಿಕ್ಕ ಕವಿಗಳಾರೂ ಆತನ ಹೆಸರನ್ನೆತ್ತಿಲ್ಲ. ಇಲ್ಲವೆನ್ನಲು ಮಲ್ಲಿಕಾರ್ಜುನನು ( ಸು. ೧೨೪೫ ) ತನ್ನ ಸೂಕ್ತಿ-ಸುಧಾರ್ಣವದಲ್ಲಿ ಮತ್ತು ಅಭಿನವವಾದಿವಿದ್ಯಾನಂದನು ( ಸು. ೧೫೩೩ ) ತನ್ನ ಕಾವ್ಯಸಾರದಲ್ಲಿ ಆತನ ಗಿರಿಜಾಕಲ್ಯಾಣದೊಳಗಿನ ಪದ್ಯಗಳನ್ನು ಆಯ್ದುಕೊಂಡಿದ್ದಾರೆ. ಇಷ್ಟು ಆಧಾರಗಳಿಂದ ಹರಿಹರ-ಚರಿತ್ರೆಯನ್ನು ರಚಿಸಬೇಕಾಗಿದೆ. ರಾಘವಾಂಕಚಾರಿತ್ರದಲ್ಲಿ ರಾಘವಾಂಕನೇ ಕುಮಾರ-ವ್ಯಾಸನಿಗೆ ಹರಿಹರ-ಚರಿತ್ರೆಯನ್ನು ಹೇಳಿದಂತೆ ಉಲ್ಲೇಖವಿದೆ. ಐತಿಹಾಸಿಕ ದೃಷ್ಟಿಯಿಂದ ಇದು ಅಸಂಗತಿಯೇ. ಪರಂಪರೆಯಲ್ಲಿ ಹೀಗೆ ಐತಿಹಾಸಿಕ ಅಸಂಗತಿಗಳು ಅಡಕವಾಗಿರುವುದು ಅಸ್ವಾಭಾವಿಕವಲ್ಲ. ಇದಕ್ಕೆ ಕಾರಣವೆಂದರೆ ಇತಿಹಾಸದ ಬಗ್ಗೆ ನಮ್ಮ ಪೂರ್ವಜರ ಅನಾದರವು. ಇಂತಹ ಅನೇಕ ಉದಾಹರಣೆಗಳನ್ನು ಸಂಸ್ಕೃತ-ಕನ್ನಡ ಸಾಹಿತ್ಯಗಳ ಇತಿಹಾಸದಲ್ಲಿ ಕಾಣಬಹುದು. ಅವುಗಳಲ್ಲಿ ಒಂದೆರಡನ್ನು ಕೆಳಗೆ ಕೊಡುತ್ತೇವೆ. ರುದ್ರಭಟ್ಟನ ಸಂದರ್ಭದಲ್ಲಿ ಷಡಕ್ಷರದೇವಲಕ್ಷ್ಮೀಶರು ಬರು

ತ್ತಾರೆ; ಕಾಲಿದಾಸನ ಸಂದರ್ಭದಲ್ಲಿ ದಂಡಿಭರ್ತೃಹರಿಗಳು ಬರುತ್ತಾರೆ. ಕುಮಾರವ್ಯಾಸನು (ಸು. ೧೪೩೦) ವಿಜಯನಗರದ ಪ್ರೌಢದೇವರಾಯನ (೧೪೧೯-೧೪೪೬) ಆಶ್ರಿತ ಕವಿ. ಆತನ ಆಸ್ಥಾನದಲ್ಲಿದ್ದುಕೊಂಡು ಭಾರತದ ದಶಪರ್ವಗಳನ್ನು ಬರೆದನು. ಪ್ರಭುಲಿಂಗ-ಲೀಲೆಯನ್ನು ಬರೆದ ಚಾಮರಸನು ಈತನ ಸಮಕಾಲೀನನು. ಇಬ್ಬರಲ್ಲಿಯೂ ಆಪ್ತಸಂಬಂಧವಿದ್ದಿತೆಂಬ ಐತಿಹ್ಯವು ವೀರಶೈವ ಗ್ರಂಥಗಳಲ್ಲಿ ದೊರೆಯುತ್ತಿವೆ. ಕುಮಾರವ್ಯಾಸನ ಭಾರತವು ಪ್ರೌಢದೇವರಾಯನ ಕಾಲದಲ್ಲಿ ಅಷ್ಟು ಲೋಕಪ್ರಿಯವಾಗಿರಲಿಲ್ಲವೆಂದು ತೋರುತ್ತಿದೆ. ಮುಂದೆ ಕೃಷ್ಣದೇವರಾಯನ(೧೫೦೯-೧೫೨೯)ಕಾಲದಲ್ಲಿ ಅದು ಲೋಕಪ್ರಿಯವಾದುದರಿಂದ ಆದೊರೆಯು ಅದರ ಮುಂದಿನ ಭಾಗವನ್ನು "ಲೇಸೆನಿಸಿ ಮೊದಲಾಕುಮಾರವ್ಯಾಸ ದಶಪರ್ವಗಳ ಹೇಳಿದ ಭಾರತದ ಉಳಿದ ಪರ್ವಗಳ ನೀ ಸಕಲಜನ ಮೆಚ್ಚುವಂತೆಪೇಳು", ಎಂದು ತಿಮ್ಮಣ್ಣಕವಿಗೆ ಆಜ್ಞೆಯಿತ್ತನು. ಇತ್ಯರ್ಥವೇನೆಂದರೆ ಕುಮಾರವ್ಯಾಸ ಭಾರತವು ಕೃಷ್ಣದೇವರಾಯನ ಕಾಲದಲ್ಲಿ ಜನರ ಮೆಚ್ಚುಗೆಯನ್ನು ಪಡೆದು ಆಕವಿಯ ಹೆಸರು ಜನರ ಬಾಯಲ್ಲಿ ನಿಂತಿತು. ಇಂತಹ ಕವಿಯು ರಾಘವಾಂಕನು ಪ್ರೌಢಕವಿಯು" ಬಂದು ಒಪ್ಪಿಕೊಳ್ಳಬೇಕೆಂದು ಆರಿಂದಲೋ ಪ್ರಚುರಗೊಂಡ ದಂತಕಥೆಯಿದು. ಅದರಲ್ಲಿ ರಾಘವಾಂಕನು ವೇದದಲ್ಲಿ 'ನಳಿನಭವನೆಣೆಯಾದಪ್ಪಂ' 'ಶಬ್ದಪಾಂಡಿತ್ಯದೊಳಗಸಮಂ' 'ತರ್ಕಮೀಮಾಂಸವೇದಾಂತ' ಮುಂತಾದವುಗಳಲ್ಲಿ ಆತನನ್ನು ಸರಿಗಟ್ಟುವವರಾರೂ ಇಲ್ಲವೆಂದು, ಕುಮಾರವ್ಯಾಸನಕ್ಕಜಂಬಡುತಿರ್ದನು, ಎಂದು ಹೇಳಿದೆ. ಶಿಷ್ಯನೇ ಹೀಗಿರುವಾಗ ಆತನ ಗುರು ಹರಿಯರಸನು ಎಂತಹ ಪಂಡಿತನಿರಬೇಕೆಂದು ಕುಮಾರವ್ಯಾಸನೇ ಆಶ್ಚರ್ಯಪಡುತ್ತಿರುವಾಗ ಮಿಕ್ಕ ಜನಸಾಮಾನ್ಯದ ಪಾಡೇನು ? ಎಂದು ಅಭಿಪ್ರಾಯ ಪಡುವುದು ಈದಂತಕಥೆಯ ಉದ್ದೇಶ.

ಹರಿಹರನು ತನ್ನ ಗ್ರಂಥಗಳಲ್ಲಿ ಪವಾಡಗಳನ್ನು ಒಪ್ಪಿಕೊಂಡಿದ್ದಾನೆ. ಆತನ ತರುವಾಯ ಆತನ ಚರಿತ್ರೆಯಲ್ಲಿ ಅನೇಕ ಪವಾಡಗಳು ಅಡಕವಾದುವು. ಹೀಗಾಗುವುದು ಅಸ್ವಾಭಾವಿಕವಾಗಿರಲಿಲ್ಲ. ಏಕೆಂದರೆ ಹರಿಹರದೇವನು ಬಸವಣ್ಣನವರ ತೀರ ಸಮೀಪ ಕಾಲದವನೂ, ಅನ್ಯಾದೃಶನಾದ ಶಿವ

ಭಕ್ತನೂ, ಶಿವಯೋಗಿಯೂ ಆಗಿದ್ದನು. ಆತನ ಬ್ರಹ್ಮಚರ್ಯ - ಆತ್ಮವಿಶ್ವಾಸಸ್ವೈರವೃತ್ತಿಗಳು ಅಗಾಧವಾಗಿದ್ದುವು. ಆದುದರಿಂದ ಆತನು ಪವಾಡಪುರುಷನೆಂದು ಎಲ್ಲರೂ ನಂಬಿದ್ದಾರೆ. ಆತನ ಚರಿತ್ರೆಯು ಅನೇಕ ಪವಾಡಗಳಿಂದ ತುಂಬಿ ಹೋಗಿದೆ. ಹೆಜ್ಜೆ ಹೆಜ್ಜೆಗೆ ಪವಾಡ. ಆಪವಾಡಗಳು ಸಟಿಯೋ ದಿಟವೋ ಎಂಬುದನ್ನು ತಾತ್ವಿಕ ದೃಷ್ಟಿಯಿಂದ ವಿವೇಚಿಸುವುದು ನಮ್ಮ ಕರ್ತವ್ಯವಲ್ಲದಿದ್ದರೂ ಅವುಗಳಿಗೆ ಸುಸಂಗತವಾದ ಅರ್ಥವನ್ನು ಹೇಳಿ, ಚರಿತ್ರವನ್ನು ಹೆಚ್ಚು ಉಜ್ವಳಗೊಳಿಸುವುದು ಮಾತ್ರ ನಮ್ಮ ಕರ್ತವ್ಯವು.

ತನ್ನ ರಗಳೆಗಳಲ್ಲಿ ಪುರಾತನರೂ ಶಿವಶರಣರೂ ಒಂದಾನೊಂದು ಕಾರಣದಿಂದ ಅವತಾರವೆತ್ತಿದ ಪ್ರಮಥರೆಂದು ಹರಿಹರನು ಹೇಳಿದ್ದಾನೆ. ಅವನನ್ನು ಅನುಸರಿಸಿ ಆತನ ಮುಂದಿನ ಕವಿಗಳಾದರೂ ಹರಿಹರನು ಗಣಹರುಷನ ಅವತಾರವೆಂದು ಹೇಳಿದರು. “ ಗಣಹರುಷನು ಕೈಲಾಸದಲ್ಲಿ ಗಣಸಭೆಯೊಳಿರುವಾಗ ಬಸವೇಶನು ಭೂಮಿಯನ್ನಗಲಿ ಪುರಾತರನ್ನೊಡಗೊಂಡು ಶಿವಸಭೆಯನ್ನು ಪ್ರವೇಶಿಸಲು ಪುರಾರಿಯು ಅವರನ್ನು ಬೇರೆ ಬೇರೆ ಕರೆದು ಅಪ್ಪಿಕೊಂಡು ಕುಳ್ಳಿರಿಸಿದನು. ಆಗ ಗಣಹರುಷನು ಶಿವನೆದುರಿಗೆ ಬಂದು ಕೈಮುಗಿದು ಹೀಗೆ ಬೇಡಿಕೊಂಡನು:– ‘ಈಗಣಂಗಳು ಭೂಮಿಯಲ್ಲಿ ಅವತರಿಸಿ ನಿನ್ನನ್ನು ಭಕ್ತಿಯಿಂದ ಮೆಚ್ಚಿಸಿದ ಸಂಗತಿಯನ್ನು ಹೇಳು.’ ಅದಕ್ಕೆ ಪ್ರತ್ಯುತ್ತರವಾಗಿ ಭವಾನೀ ವಲ್ಲಭನು ‘ಎನ್ನವರ ಘನವಿಶ್ವಾಸದಿಂ ವಿಸ್ತರಿಪರಾರು ನೀನಲ್ಲದೆನುತಾಷಡಾನನಜನಕ ತಲೆದಡಹಿ ಗಣಹರುಷ’ ಕೇಳು, ಭೂಲೋಕವಲ್ಲಿ ಭಾಸುರದ ಸುಪ್ರಮಥರಮಲ ಚರಿತವನೆಲ್ಲವಾಸುರದೆ ಪೇಳ್ದು ನವರಘಟಾಪ್ರಬಂಧದಿಂ ಶಾಸನಂ ಗೆಯ್ದು ಸರ್ವರ ಧನ್ಯರಂ ಮಾಡಿ ಯೆನ್ನ ಕೂಡು ಎಂದನು.” ಬಸವ, ಪ್ರಭುದೇವ, ಸಿದ್ಧರಾಮ, ಚೆನ್ನಬಸವ, ಮುಂತಾದ ಶಿವಗಣಂಗಳು ಅವತಾರಿಕರೆಂದು ಆಕಾಲದಲ್ಲಿ ಜನರು ನಂಬಿದ್ದಂತೆ ಹರೀಶ್ವರನೂ ಗಣಹರುಷನ ಅವತಾರವೆಂದು ನಂಬಿದರು. ಇದಕ್ಕೆ ಕಾರಣವಿಷ್ಟೇ. ಇವರೆಲ್ಲರು ತಮ್ಮಲ್ಲಿನ ಅಗಾಧಜ್ಞಾನಸಾಮರ್ಥ್ಯದಿಂದ ಜನಸಾಮಾನ್ಯದ ಕಣ್ಣು ಕುಕ್ಕಿಸಿದರು. ಇಂತಹ ಸಾಮರ್ಥ್ಯವು ಅವತಾರಿಗಳಲ್ಲಿರಬೇಕೇಹೊರ್ತು ಅನ್ಯರಲ್ಲಿರಲಾರದೆಂಬ ಭಾವನೆಯು ಅವರ ಚರಿತ್ರಕಾರರದು.

ಹಂಪೆಯಲ್ಲಿ ಮಹಾದೇವನೆಂಬ ಬ್ರಾಹ್ಮಣನಿದ್ದನು. ಈತನು ಆರಾಧ್ಯ ಬ್ರಾಹ್ಮಣನು.[೧] ಈತನ ಹೆಂಡತಿ ಶರ್ವಾಣಿ. ಇವರಿಬ್ಬರು ಧಾರ್ಮಿಕರು ಸಜ್ಜನರು, ಅಭಿಮಾನಿಗಳು,[೨] ಹಂಪೆಯ ವಿರುಪಾಕ್ಷನ ಭಕ್ತರು. ಇರಇರುತ್ತ ಶರ್ವಾಣಿಯು ಗರ್ಭಿಣಿಯಾಗಿ ಗಂಡುಮಗುವನ್ನು ಹೆತ್ತಳು. ಹನ್ನೆರಡನೆಯ ದಿನ ಮಗುವಿಗೆ ಹರಿಹರನೆಂದು ಹೆಸರಿಟ್ಟರು. ಆರಾಧ್ಯಬ್ರಾಹ್ಮಣರು ಸ್ಮಾರ್ತರಾದರೂ, ಲಿಂಗವನ್ನು ಹಣೆಯ ಮೇಲೆ ಧರಿಸುತ್ತಿದ್ದರೂ, ಶಿವನೇ ಸರ್ವೋತ್ತಮನೆಂದು ಹೇಳುತ್ತಿರಲಿಲ್ಲವೆಂದು ತೋರುತ್ತದೆ. ಅವರಿಗೆ ಹರಿಯೂ ಹರನೂ ಸಮಾನರಾಗಿದ್ದುದರಿಂದಲೇ ಮಹಾದೇವಭಟ್ಟನು ಮಗುವಿಗೆ ಹರಿಹರನೆಂದು ಹೆಸರಿಟ್ಟನು. ಹರಿಹರನಿಗೆ ಅಕ್ಕನೊಬ್ಬಳಿದ್ದಳೆಂದು [೩] ಪದ್ಮರಾಜ ಪುರಾಣದಲ್ಲಿಯೂ [೪] ಚೆನ್ನಬಸವ-ಪುರಾಣದಲ್ಲಿಯೂ ಹೇಳಿದೆ. ರಾಘವಾಂಕನ ತಾಯಿಯ ಹೆಸರು ರುದ್ರಾಣಿಯೆಂದು [೫] ರಾಘವಾಂಕ-ಚಾರಿತ್ರದಲ್ಲಿ ಹೇಳಿದೆ. ಈಅಕ್ಕತಮ್ಮಂದಿರ ಬಾಲ್ಯದ ಬಗ್ಗೆ ಆವ ಸಂಗತಿಗಳೂ ತಿಳಿಯುವುದಿಲ್ಲ. ಉಪನಯನವಾದ ಮೇಲೆ ಮಾದರಸನೆಂಬ ಗುರುವಿನ ಹತ್ತರ ಈತನು ಅಭ್ಯಾಸ ಮಾಡಿದನು. ತನ್ನ ಗುರುಪರಂಪರೆಯ ಬಗ್ಗೆಯೂ ತನ್ನ ಗುರುವಿನ ಬಗ್ಗೆಯೂ ಹರಿಹರನಿಗೆ ಪ್ರಬಲವಾದ ಅಭಿಮಾನವಿರುವುದರಿಂದ ಅವರನ್ನು [೬] ಗಿರಿಜಾ ಕಲ್ಯಾಣದಲ್ಲಿ ಮತ್ತು ಮಹಾದೇವಿಯಕ್ಕನ ರಗಳೆಯಲ್ಲಿ ಮನಸೋಕ್ತವಾಗಿ ಹೋಗಳಿದ್ದಾನೆ,

ಸುರುಚಿರಮೂರ್ತಿ ಸತ್ಯತರಮೂರ್ತಿ ಕೃಪಾಕರಮೂರ್ತಿ ಪುಣ್ಯವಿ- |
ಸ್ತರಗುರುಮೂರ್ತಿ ಶಾಂತಿಮಯಮೂರ್ತಿ ಸುಧಾಕರಮೂರ್ತಿಯುತ್ತರೋ-||
ತ್ತರವರಮೂರ್ತಿಮುಕ್ತಿಸುಖಮೂರ್ತಿ ಮನೋಹರಮೂರ್ತಿ ಚಂದ್ರಶೇ-|
ಖರಶಿವಮೂರ್ತಿ ಕೀರ್ತಿಪತಿ ಹಂಪೆಯ ಶಂಕರದೇವರೊಪ್ಪುವರ್ || ೧-೩೬

---

೧. ಶಿರದೊಳೆಸೆವ ಲಿಂಗದಿ ಯಜ್ಞಸೂತ್ರದಿಂ || ರಾ. ಚಾ. ೨-೩೪. ಆರಾಧ್ಯಬ್ರಾಹ್ಮಣರು ಲಿಂಗಜನಿವಾರಗಳೆರಡನ್ನೂ ಧರಿಸುತ್ತಾರೆ. ೨. "ಮಾನನಿಧಿ ಮಹಾದೇವ ಶರ್ವಾಣಿಯರ" ರಾ. ಚಾ. ೧೪-೪೬. ೩. "ಅಂತಾಗೆ ತಮ್ಮಗ್ರಜೆಯ ಸುತಂ" ೫-೩೫. ೪. "ವರಹರೀಶ್ವರನ ಸೋದರದಳಿಯ....ಕವಿರಾಘವಾಂಕ" ೬೨-೫೬. ೫. ರಾ. ಚಾ. ೨-೨೩,೭೯. ೬. ೧೮೮೬ ರಲ್ಲಿ ಬೆಂಗಳೂರು ಲಕ್ಷ್ಮೀ ವಿಲಾಸ ಮುದ್ರಣಾಲಯದಲ್ಲಿ ಮುದ್ರಿತವಾದ ಗಿರಿಜಾಕಲ್ಯಾಣ.

ಆಶ್ಶೈವಾಗಮಸಿದ್ಧನಪ್ಪ ಪರಮಶ್ರೀಶಂಕರಾಚಾರ್ಯರಿಂ |
ಪಾಶಚ್ಛೇದಮನಿಂಬುಗೊಂಡು ಮೆರೆವಂ ಶ್ರೀಶುದ್ಧಪಂಚಾಕ್ಷರೀ ||
ವೇಶಾನಂದ ರಸಾರ್ದ್ರಚಿತ್ತಯುತಹೃದ್ರಾಜೀವಸಂಪೂರ್ಣಸಂ- |
ಕಾಶಂ ಪ್ರಾಂಜಳಮೂರ್ತಿಕೀರ್ತಿಭರಿತಂ ಶ್ರೀಮಾದಿರಾಜಾಹ್ವಯಂ||೩೭
ಇಂತಿಂತೊಪ್ಪುವ ಮಾದಿರಾಜನಮನೋದುಗ್ಧಾಬ್ಧಿಚಂದ್ರಂ ಶಿವಂ |
ಶಾಂತಂ ಶಾಶ್ವತಮೂರ್ತಿ ಶೈವಸುಭಗಂ ಸಾಕಾರಸರ್ವೇಶ್ವರಂ ||
ಸಂತೋಷಾಭರಣಂ ಪ್ರಸನ್ನಕರಣಂ ಪ್ರತ್ಯಕ್ಷಪಂಚಾನನಂ |
ಸಂತಂ ಹಂಪೆಯ ಮಾಯಿದೇವನೆಸೆದಿರ್ಪಂ ಶೈವಸಾರೋದಯಂ|| ೩೮

ಈಮಾಯಿದೇವನು ಹರಿಹರನ ಗುರುವು.

ಶ್ರೀಗುರು ಪರಮಗುರು ಘನಮಹಿ |
ಮಾಗುರು ಮಾಧುರ್ಯಗುರು ಮಹಾಗುರು ವರವಿ ||
ದ್ಯಾಗುರು ಸುಖೈಕಗುರು ವಸು |
ಧಾಗುರು ಶೈವಗುರು ಶಾಂತಗುರು ಮಾಯ್ದೇವಂ || ೩೯

ಸದಮಳನೆಂಬುದುತ್ತಮಗುಣಾಶ್ರಯನೆಂಬುದು ಶೈವಸಿದ್ಧನೆಂ- |
ಬುದು ರವಿತೇಜನೆಂಬುದು ಕೃಪಾಂಬುಧಿಯೆಂಬುದು ಶಾಂತಮೂರ್ತಿಯೆಂ-||
ಬುದು ಪರಮಾಗಮಪ್ರಕರನೆಂಬುದು ಹಂಪೆಯ ಮಾಯಿದೇವನೆಂ |
ಬುದು ಶಿವನೆಂಬುದಪ್ರತಿಮನೆಂಬುದು ಸದ್ಗುರುವೆಂಬುದೀಜಗಂ || ೪೩

ಧರೆಯೊಳಗಾಮಾಯ್ದೇವರ |
ವರಕರುಣಂಬಡೆದು ಮೆರೆವನುನ್ನತಮಹಿಮಂ ||
ಗುರುಪದಭಕ್ತಂ ಹಂಪೆಯ |
ಹರಿದೇವಂ ಕವಿಕಳಾವಿಶಾರದರರಸಂ || ೪೧

೭ಹಂಪೆಯ ಶಂಕರದೇವಂ |
ಹಂಪೆಯ ಗುರು ಮಾದಿರಾಜದೇವರ ಮತ್ತಾ ||
ಹಂಪೆಯ ಮಾದರಸರ ದಯೆ- |
ಯಿಂ ಪೇಳ್ದಂ ರಸಿಕಚಕ್ರಿ ಹರಿಹರದೇವಂ || ೩

೭. ಉಡುತಡಿಯ ಮಹಾದೇವಿಯಕ್ಕನ ರಗಳೆ; ಸದ್ಧರ್ಮ ಗ್ರಂಥಮಾಲಾ ೧೩, ಹಾವೇರಿ ೧೯೩೩. ೧ನೆಯ ಸಲ ೩ನೆಯ ಪದ. ಪುಟ ೧.   ೮. ಬೆಂಗಳೂರು ಪ.ತಿ ೧೮೮೬ ಪುಟ ೨.

ಇದರಂತೆ ಮತ್ತೆ ಗಿರಿಜಾಕಲ್ಯಾಣದ [೮]ಕಥಾಗರ್ಭದಲ್ಲಿ ತಾನು ಮಾದರಸರ ಶಿಷ್ಯನೆಂಬ ಸಂಗತಿಯಲ್ಲಿ ಅತಿಶಯವಾದ ಅಭಿಮಾನವನ್ನು ತೋರಿಸುತ್ತಾನೆ: "ಗಿರಿಜಾಕಲ್ಯಾಣಕಥಾಕಾವ್ಯಮಂ ಹಂಪೆಯ ಮಾದರಸರ ಕಾರುಣ್ಯದ ಶಿಶುವಪ್ಪ ಹಂಪೆಯ ಹರಿಹರದೇವಂ". ತನ್ನ ಗುರುವಿನ ಹತ್ತಿರ ವಿದ್ಯಾಭ್ಯಾಸಮಾಡಿ ಹರಿಹರದೇವನು ವೇದ, ವೇದಾಂಗ, ಇತಿಹಾಸ, ಪುರಾಣ, ಕಾವ್ಯ, ನಾಟಕ, ಅಲಂಕಾರ, ವ್ಯಾಕರಣ ಮುಂತಾದ ವಿಷಯುಗಳಲ್ಲಿ ಪಾರಂಗತನಾದನು. ಈಸಂಗತಿಯ ಸತ್ಯತೆಯನ್ನು ಆತನ ಶಿಷ್ಯನಾದ ರಾಘವಾಂಕನು ಆತನಿಂದ ವಿದ್ಯೆ ಪಡೆದ ಮೇಲೆ ವಿವರಿಸಲ್ಪಟ್ಟ ಪಾಂಡಿತ್ಯದಿಂದ ಕಂಡುಕೊಳ್ಳಬಹುದಾಗಿದೆ. ಹರಿಹರದೇವನು ಹೀಗೆ ಪಂಡಿತನಾಗಿ ತನ್ನ ವಿದ್ಯಾಪರಿಣತಿಗೆ ಅನುರೂಪವಾದ ಗಿರಿಜಾಕಲ್ಯಾಣವೆಂಬ ಕಾವ್ಯವನ್ನು ರಚಿಸಿದನು. ಈ ಸಂದರ್ಭದಲ್ಲಿ ಭಿನ್ನಾಭಿಪ್ರಾಯಗಳಿವೆ.

೧. [೯]ತದ್ಧರಿದೇವನಂ ಪರಿಮಿತಕೆ ಕರೆದು |
ಮಾವರಂ ನಿಮ್ಮನಿಂದಿಗೆಂಟನೆಯ ದಿನಕೆ ತನ್ನೊಳ್ನಿರಪಲಿರ್ದಪಂ ||
೧೩-೨೭

ಅಂತರಿಂ ನಿವೀಗಳೊರೆವೀಮುಹಾಕಾವ್ಯ- |
ಮಂ ತಡೆಯದನಿತರೋಳ್ಪಾರವೆಯ್ದಿಪುದೆಂದ- |
ದಂ ತಿಳಿಪಿಯುವರಿಂದೆ ಬೀಳ್ಕೊಂಡು . . . . . . || ೨೮

ಮತ್ತೆ

೨. [೧೦]ವರವಿರೂಪಾಕ್ಷನೊಪ್ಪಿತದ ರಗಳೆಗಳನಾ- |
ಪರಿಪರಿಯ ಶಿವಗಣಂಗಳ ಮೇಲೆ ಪೇಳ್ದು ಸ- |
ದ್ಗಿರಿಜಾವಿವಾಹವಂ ಪೇಳ್ದಾ ವಿರೂಪಾಕ್ಷಲಿಂಗದಲ್ಲೈಕ್ಯವಹನು ||
೬೨—೫೫

ಮತ್ತೆ

೩. '[೧೧]ಸರಸ-ಮೃದು-ಮಧುರೋಪಮೆಗಳಿಂದ ವಸ್ತುಕವಾರ್ಣಕದಿಂದ

---

೯. ೧೯೦೯ರಲ್ಲಿ ಬೆಂಗಳೂರು ಒಕ್ಕಲಿಗರ ಸಂಘದ ಮುದ್ರಣಾಲಯದಲ್ಲಿ ಮುದ್ರಿತವಾದ ಪದ್ಮರಾಜ ಪುರಾಣ ಪುಟ ೨೬೦-೬೧. ೧೦. ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿಸಂಸ್ಥೆಯ ಪರವಾಗಿ ೧೯೩೪ರಲ್ಲಿ ಪ್ರಕಟಿತವಾದ ಚೆನ್ನಬಸವಪುರಾಣ ಪುಟ ೭೪೭. ೧೧. ಕರ್ಣಾಟಕಕವಿಚರಿತೆಭಾಗ ೧ ಪುಟ ೨೨೫.

ಶಿವನಂ ಶಿವಗಣಂಗಳನು ರಗಳೆಗಳಿಂದ ನುತಿಸಿ ವಚನದ ರಚನೆ ಹೆಚ್ಚುವಂತೆ ಗಿರಿಜಾಕಲ್ಯಾಣವಂ ರಚಿಸಿದನು'— ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ. ಮೇಲಿನ ಎರಡನೆಯ ಮತ್ತು ಮೂರನೆಯ ಆಧಾರಗಳಮೇಲಿಂದ ಮೊದಲನೆಯ ಆಧಾರದಲ್ಲಿನ ಮಹಾಕಾವ್ಯವೆಂದರೆ "ಗಿರಿಜಾಕಲ್ಯಾಣವೆಂಬ" ಪ್ರಚುರವಾದ ಅಭಿಪ್ರಾಯವನ್ನು ಕರ್ಣಾಟಕ ಕವಿಚರಿತೆಕಾರರು ಹೀಗೆ ಹೇಳುತ್ತಾರೆ. "ಹರೀಶ್ವರನು ಈ ಗ್ರಂಥವನ್ನು ರಘಟಾರೂಪವಾಗಿ ಬರೆದುದರಿಂದ ಜನರು '[೧೨]ರಗಳೆಯ ಕವಿ' ಎಂದು ಈತನನ್ನು ಪರಿಹಾಸಮಾಡಿದಂತೆಯೂ ಆ ಅಪವಾದವನ್ನು ನೀಗುವುದಕ್ಕಾಗಿ ಈತನು ಗಿರಿಜಾಕಲ್ಯಾಣವೆಂಬ ಮಹಾಕಾವ್ಯವನ್ನು ಬರೆದು ತನ್ನ ಪ್ರೌಢಿಮೆಯನ್ನು ತೋರಿಸಿದಂತೆಯೂ ಪ್ರತೀತಿಯಿದೆ." (ಅಡಿಯಲ್ಲಿ ಸಿದ್ಧನಂಜೇಶನ ರಾಘವಾಂಕ ಚಾರಿತ್ರದ ೧೪ನೆಯ ಸಂಧಿಯಲ್ಲಿಯೂ ಈ ವಿಷಯವು ಸೂಚಿತವಾಗಿದೆ.) ರಾಘವಾಂಕ ಚಾರಿತ್ರವನ್ನು ಸೂಕ್ಷ್ಮವಾಗಿ ಗಮನಕೊಟ್ಟು ಓದುತ್ತಿರಲು ಈ ಅಂಶವು ಅಲ್ಲಿ ಕಂಡುಬರಲಿಲ್ಲ. ನನ್ನ ಹತ್ತರ ಇದ್ದ ಪ್ರತಿಯಲ್ಲಿ ಆ ಭಾಗವು ಬಿಟ್ಟುಹೋಗಿದೆಯೋ ಏನೋ ತಿಳಿಯದು. ಅಥವಾ ಹಸ್ತ ದೋಷದಿಂದ ಸಿದ್ಧನಂಜೇಶನ ಹೆಸರು ಇಲ್ಲಿ ಬಂದಿರಬಹುದು. [೧೩]ರಾಘವಾಂಕ ಚಾರಿತ್ರದಲ್ಲಿ ಹೀಗಿದೆ.

ಈ ಪರಿಯೊಳುಂ ಪ್ರಮಥರಮಲಸತ್ಕಥೆಯಂ ವಿ |
ರೂಪಾಕ್ಷ ಪೇಳ್ದಂತೆ ಹರಿಯರಸನುಸಿರುತಿರೆ |
ತಾಪಸೋತ್ತಮನೊರ್ವ ಬಂದು ಪ್ರಮಥರ ಚರಿತ ಪೂರೈಸಿಕೃತಿಯೊಳಿಲ್ಲಾ ||
ಈಪರಿಯೊಳುಸಿರ್ದೆಯಧಿಕವನಲ್ಪಗೆಯ್ದೆನಲು |
ಕೋಪದಿಂ ಲಿಂಗದೆಡೆಗೈದಿ ಭಕ್ತರು ನಗುವೊ |
ಲೇಪೇಳಿಸಿದೆಯೆಂದು ಲೇಖನಿಯನಿಟ್ಟನಂಜದೆ ಶಿವಂ ಬೆರಗಾಗಲು|| ೧೪-೧೨೧
ಒರೆಯೆ ತಪ್ಪಿಂದವರ್ಭಕ್ತರು ಸಮಾಸದಿಂ |
ದೊರೆದ ಕತದಿಂದಿಂನು ಗಣಚರಿತ್ರವನು ವಿ |
ಸ್ತರಿಸಿ ಪೇಳುವೆನು ಬರೆಯೆಂದು ಕೃತಿಗಳ ಪೇಳಿಸಿದನು ಭಕ್ತಾಧೀನನು||

---

೧೨. ಕರ್ಣಾಟಕಕವಿಚರಿತೆ ೧೯೨೪ ಪುಟ ೨೩೨. ೧೩. ನನ್ನಹತ್ತರವಿದ್ದ ಗೋಕಾಕದ ಕಾಗದದ ಪ್ರತಿ ಪುಟ ೧೬೨.

ಪರಮ ಮಾಹೇಶ್ವರಂ ಬಂದು ಕೇಳಿದರಲ್ಲಿ |
ಪರಿಪೂರ್ಣಮಾಗುದು ಕಥಾಕ್ರಮುವೆನಲ್ಕೋಪ- |
ವಿರದ್ಯೆವಡಿಸಿ ವಿರೂಪಾಕ್ಷನೆನ್ನಂ ಕಾಡಿದಪನಾದುದಾಗಲೆಂದೂ || ೧೨

ಗರ್ಭಗೃಹಮಂ ಪೊಕ್ಕು ಅಸಿಯಿಂ ಕೊರಲಂ ಘರಿಲ್ಘರಿಲೆನಲ್ಕರಿದು
ಇಟ್ಟಂ || ೧೩ || ಆಗ ಪಂಪಾವಿರೂಪಾಕ್ಷನು ಪ್ರತ್ಯಕ್ಷನಾಗಿ
ತುಂಗಕೋಪದಿನಿಂತು ಗೆಯ್ವರೆ ಮದ್ಭಕ್ತ |
ಸಾಂಗಚರಿತದೊಳೊರ್ವನಾಚರಣೆಯುಸುರೆ ವರು- |
ಷಂಗಳಪರಿಮಿತಂಗಳಾಗಬೇಕದರಿಂದೆ ಸಪ್ತಶತಸಪ್ತತಿಗಳಾ || ೧೪

ವರಪುರಾತನರ ಸುಚರಿತ್ರಗಳೊಳಾಂ ನಿನಗೆ |
ಕಿರಿಕಿರಿದನೊರದು ರಗಳೆಯ ಪೇಳಿಸಿದೆನಿವಂ |
ವರಭಕ್ತರಾಕರ್ಣಗ್ಯೆಯ್ವುತ್ತೈಹಿಕಾಮುಷ್ಮಿಕ-ಮಹಾಸುಖಕ್ಕೆ ||
ಗುರಿಯಾಗಲೆಂಬ ಬಗೆಯಿಂದೊರದೆ ನೀನು ಮುಂ- |
ದರಿಯದೀಸಾಹಸವನೆಸಗಬಹುದೆಯೆಂದು |
ಹರಿಹರಾರ್ಯಂಗೆ ಗುರುವಾರ್ಯಂಗೆ ಪರಮದ್ಯೆಶ್ವರ್ಯಂಗೆ ನಿರವಿಸಿದನೀಶಂ || ೧೫

ಶರಣರೇನೆಂದೊಡಂ ಪ್ರತ್ಯುತ್ತರಂಗುಡದೆ |
ಪರಿಯಂನನೊಲಿಸುವ ತೆರಂ ಪಳಿದರೆಂದು ನೀಂ |
ಮರುಗದಿರು ಪಲತೆರದ ಪೂಮಾಲೆಗಳನಿಂದಿನಿಂ ಸಮರ್ಪಿಸುವುದೆನಲೂ ||೧೬

ಈತರುವಾಯ ಹರಿಹರದೇವನು ಗ್ರಂಥರಚಿಸಿದಂತೆ ಹೇಳಿಲ್ಲ. ಮೇಲಿನ ೧೨ ನೆಯ ಪದ್ಯದಲ್ಲಿ "ಪರಿಪೂರ್ಣವಾಗದು ಎನಲ್ಕೆ" ಮತ್ತು "ಸಾಂಗಚರಿತದೊಳೊರ್ವನಾಚರಣೆಯುಸುರೆ ವರುವರುಷಂಗಳಪರಿಮಿತಂಗಳಾಗಬೇಕು"(೧೪) ಎಂದು ಹೇಳಿರುವಾಗ ಹರಿಹರನ ಕೊನೆಯ ಗ್ರಂಥವು ಇದೇ ಎಂದು ಕಂಡು ಬರುತ್ತದೆ. ಇದಕ್ಕೆ ಆತನ ಗುರುವಿನ ಮೇಲಿನ ಅಭಿಮಾನ ಮತ್ತು ಭಾಷಾ ಶೈಲಿ ಪುಷ್ಟಿಕರವಾಗಿವೆ. ಗಿರಿಜಾಕಲ್ಯಾಣದಲ್ಲಿ ಹರಿಯರಸನು ತನ್ನ ಗುರುವಿನ ಬಗ್ಗೆ ಅಭಿಮಾನಪಟ್ಟಂತೆ ಶರಣರಗಳೆಗಳಲ್ಲಿ ಗುರುಗಳ ಮತ್ತು ಗುರು ಪರಂಪರೆಯ ಸಂದರ್ಭವನ್ನೇ ಎತ್ತಿಲ್ಲ. ಇಲ್ಲವೆನ್ನಲು ಮಹಾದೇವಿಯಕ್ಕನ ರಗಳೆಯಲ್ಲಿ ಒಂದು ಕಂದದಲ್ಲಿ ತನ್ನ ಗುರುಪರಂಪರೆಯನ್ನು ಹೇಳಿಬಿಟ್ಟಿದ್ದಾನೆ

ಮಾತ್ರ. ಹೀಗಿ ಮಾಡುವುದು ಮನುಷ್ಯಸ್ವಭಾವಕ್ಕೆ ಅನುರೂಪವಾಗಿದೆ. ಗುರುಗಳ ಆಶ್ರಯವನ್ನು ಬಿಟ್ಟು ಅದೇ ಸ್ವತಂತ್ರನಾದಾಗ ಆಪ್ರಭುಗಳ ಬಗ್ಗೆ ಆದರ, ಭಕ್ತಿ, ಅಭಿಮಾನ ಮುಂತಾದ ಗುಣಗಳು ಉಜ್ವಳವಾಗಿರುತ್ತವೆ. ಬರಬರುತ್ತ ಅವು ಕುಂದುತ್ತ ಹೋಗುತ್ತವೆ. ಸಂಪೂರ್ಣವಾಗಿ ನಾಶವಾಗುವುದಿಲ್ಲ. ಈ ತತ್ವವನ್ನು ಹರಿಹರನ ಗ್ರಂಥಗಳಿಗೆ ಹಚ್ಚಿನೋಡಿದರೆ ಗುರುಭಕ್ತಿಯು ಗಿರಿಜಾಕಲ್ಯಾಣದಲ್ಲಿ ಒಡೆದು ಕಾಣುತ್ತದೆ. ಎಂದೋ ಒಮ್ಮೆ ಸ್ಮರಿಸಿಕೊಂಡಂತೆ ಮಹಾದೇವಿಯಕ್ಕನ ರಗಳೆಯಲ್ಲಿ ಅಕಸ್ಮಾತ್ತಾಗಿ ಪ್ರಾದುರ್ಭವಿಸುತ್ತದೆ. ಈ ಕಾರಣದಿಂದ ಗಿರಿಜಾಕಲ್ಯಾಣವನ್ನು ಹರಿಹರನು ಮೊದಲು ಎಂದರೆ ಗುರುವಿನ ಆಶ್ರಮವನ್ನು ಬಿಟ್ಟ ಕೂಡಲೆ ಬರೆದಿರಬೇಕು.

ಇನ್ನು ಭಾಷಾಶೈಲಿಯನ್ನು ಪರೀಕ್ಷಿಸಿದರೂ ಇದೇ ನಿರ್ಣಯವು ಹೊರಡುತ್ತದೆ. ವೇದಶಾಸ್ತ್ರಪುರಾಣಗಳನ್ನು ಅಭ್ಯಾಸ ಮಾಡಿದ ಹರಿಹರನ ಭಾಷೆಯಲ್ಲಿ ಸಂಸ್ಕೃತಪದಭೂಯಿಷ್ಠತೆಯು ಕಂಡುಬರಬೇಕು. ಈಸತ್ಯಕ್ಕನುಸರಿಸಿ ಗಿರಿಜಾಕಲ್ಯಾಣದೊಳಗಿನ ಕೆಳಗಿನ ಪದ್ಯಗಳನ್ನು ನೋಡಿ:

ಧೀರಂ ಪಿಂಗಳಲೋಚನಂ ನಿಶಿತದಂಷ್ಟ್ರಂ ಭೀಷ್ಮವಕ್ತ್ರಂ ಘನಂ ।
ಕ್ರೂರಂ ವಜ್ರಸಮಾನರೋಮನಿಚಯಂ ಸಂಪೂರ್ಣಕಾಯಂ ಸ್ಥಿರಂ ॥
ಶೂರಂ ರೌದ್ರಗಭೀರಚಿತ್ತನಸಮಾನಂ ಸ್ವಲ್ಪಪುಚ್ಛಾನ್ವಿತಂ ।
ಘೋರಾರಣ್ಯಚರಂ ವಿರಾಜಿಸಿದುದುದ್ಯದ್ಭೀಕರಂ ಸೂಕರಂ ॥೧-೧೦೧॥

ವರಭೂಪಾಲವಿಶಾಲಮೌಳಿಮಣಿಸಂಘಾತಪ್ರಭಾಪುಂಜವಿ ।
ಸ್ತರಪಾದಂ ನತಸರ್ವಲೋಕನಭಯಂ ತೀವ್ರಪ್ರತಾಪಂ ಮಹೀ ॥
ಧರರಾಜಂ ಮಹಿಮಾಂಬುರಾಶಿಯಚಲಂ ಭರ್ಗಪ್ರಿಯಂ ಭೋಗಭಾ ।
ಸುರನುದ್ದಾಮಗುಣಂ ಪ್ರಚಂಡಭುಜನೊಪ್ಪಿರ್ಪಂ ನಗಾಧೀಶ್ವರಂ ॥
೨—೧೦೪

ಇವೆರಡೂ ಪದ್ಯಗಳಲ್ಲಿ ಪ್ರತ್ಯಯಗಳ ಹೊರ್ತು ಮತ್ತು ಕ್ರಿಯಾಪದಗಳ ಹೊರ್ತು ಕನ್ನಡದ ಅಂಶವಿಲ್ಲ. ಕನ್ನಡದವೆಂದು ಹೇಳಬಹುದಾದ ಪದ್ಯಗಳಲ್ಲಿಯೂ ಸಂಸ್ಕೃತ ಶಬ್ದಗಳನ್ನು ಅನೇಕವಾಗಿ ಕಾಣಬಹುದು. ಕೆಳಗಿನ ಪದ್ಯವನ್ನು ನೋಡಿ.

ನೆಗೆದ ಪತಾಕಾಪಟಕೋ |
ಟಿಗಳೊಪ್ಪಿದುವಾವಗಂ ತೊಳಲ್ದು ಬಳಲ್ದಾ ||
ಖಗನ ತುರಂಗಪ್ರತತಿಗೆ |
ಗಗನಾಂಗನೆ ಬೀಸುತಿರ್ಪ ವೀಜನತತಿಯೊಲ್ || ೨—೮೦

ಹೀಗಿದ್ದರೂ ಶುದ್ಧಕನ್ನಡ ಶಬ್ದಗಳ ಸರಣಿಯು ಆತನಲ್ಲಿಲ್ಲವೆಂತಲ್ಲ ಈ ಪದ್ಯವನ್ನು ನೋಡಿ:

ಎತ್ತಿದುದೊಂದು ಮಾಲೆ ಪೊಸ ಪೂವಿನ ಬಿಲ್ಲವೊಲಾಗೆ ಮೀರಿ ಬೆಂ |
ಬತ್ತುವ ನೋಟಮುಂಗಜನ ಬಾಣದವೋಲಿರೆ ಕಾಯಕಾಂತಿ ಸೈ ||
ತೊತ್ತಿದ ಮೌರ್ವಿಯುಂ ತಿರಿಸಲೆಂದು ಯುವೋನ್ಮೃಗಮುಂ ಕರುತ್ತುಕೋ |
ಲೆತ್ತುವ ಬೇಂಟೆಗಾರ್ತಿಯರವೋಲೆಸೆದರ್ಮಗೆ ಮಾಲೆಗಾರ್ತಿಯರ್ ||
೨—೮೮

ಇಲ್ಲಿ ಕವಿಪರಂಪರೆಗೆ ಕಟ್ಟುಬಿದ್ದ ಕನ್ನಡವು ಕಂಡು ಬರುತ್ತದೆಯೇ ಹೊರ್ತು ಆತನದೇ ಆದ ಸುಲಭಕನ್ನಡಭಾಷೆಯು ಕಂಡು ಬರುವುದಿಲ್ಲ. ಅದು ಮಾತ್ರ ಪಾರ್ವತಿಗೆ ಹರನು ಪ್ರತ್ಯಕ್ಷನಾದಾಗ ಸ್ವಾಭಾವಿಕವಾಗಿ ಹೊರಬಿದ್ದಿದೆ. ಉದಾಹರಣೆಗೆಂದು ಒಂದೆರಡು ಪದ್ಯಗಳನ್ನು ಕೊಡುತ್ತೇವೆ.

ಎಳೆವಾಳೆಯುಸುಳಿಯೆಲೆಯೊಳ್ |
ನಳನಳಿಸುವ ಕಂದಮೂಲಮುಂ ನವಜಂಬೂ ||
ಫಳವಾಮ್ರಫಳಂ ಕದಳೀ |
ಫಳಗಳ ನೆರೆ ತೀವಿ ತಂದು ಮುಂದಿಳುಪುತ್ತಂ || ೯—೯೧

ಎಲೆಯತಿಥಿ ಬಳಲ್ದಿರೆನ್ನಿಮೀ |
ಫಲದಿಂದಂ ನಿಮ್ಮ ಪಸಿವನುಡಿಗಿಸಿಯೆನೆ ಸೈ ||
ಫಲಮುಂ ಕೈಕೊಂಡಪೆವೀ |
ಲಲನೆಯದಾರ್ತ್ರಪವಗಣ್ಯವಾವನ ಪುಣ್ಯಂ ೯—೯೨

ಹೀಗಿರುವ ಗಿರಿಜಾಕಲ್ಯಾಣದ ಅಂತ್ಯಭಾಗದೊಳಗಿನ ಆತನ ಭಾಷೆಯು ಕೆಲ ಮಟ್ಟಿಗೆ ರಗಳೆಗಳ ಭಾಷೆಯನ್ನು ಹೋಲುತ್ತದೆ. ಗದ್ಯದ ಭಾಷೆಯನ್ನು

ನೋಡುವ ಕಾರಣವಿಲ್ಲ. ಅದು ಗಿರಿಜಾಕಲ್ಯಾಣ-ರಗಳೆಗಳಲ್ಲಿ ಒಂದೇಸಮವಾಗಿದೆ. ಗಿರಿಜಾಕಲ್ಯಾಣದೊಳಗಿನ ಗದ್ಯಗಳಲ್ಲಿ ಕೆಲವೆಡೆ ರಗಳೆಗಳ ಸಾಲುಗಳನ್ನು ಹೋಲುವ ವಾಕ್ಯಸರಣಿಗಳು ತೋರುತ್ತವೆ. ಉದಾಹರಣೆಗೆಂದು ಒಂದನ್ನು ಇಲ್ಲಿ ಕೊಡುತ್ತೇವೆ:

ಕೋಕಿಳಧ್ವಾನದಿಂ ಅಳಿಕುಲದಗಾನದಿಂ,
ಶುಕರವಪ್ರತಾನದಿಂ ಫಳರಸದಪಾನದಿಂ,
ರಾಜಹಂಸಯಾನದಿಂ ಲತಾಮಂಟಪಸ್ಥಾನದಿಂ,
ಪರಿಕಾಲಪರ್ಬಿಂ ತಮಾಲವನದ ಮರ್ಬಿಂ,
ಪೂದೋಂಟದ ಕೊರ್ಬಿಂ ಪ್ರಸೂನಕುಲದ ಪರ್ಬಿಂ, ೨-೭೧ ವ

'ಇಲ್ಲಿ ಭಾಷೆಯನ್ನು ದುರ್ಲಕ್ಷಿಸಿ ಅಂತ್ಯಪ್ರಾಸವನ್ನು ಸೂಕ್ಷ್ಮವಾಗಿ ನೋಡಿದರೆ ರಗಳೆಯ ಹೋಲಿಕೆಯು ಕಂಡು ಬರುತ್ತಿದೆ. ಇದಲ್ಲದೆ ರಗಳೆಗಳಲ್ಲಿ ಆಗಾಗ ಕಂಡುಬರುತ್ತಿರುವ

" ಮೊರೆಯೋ ಮೊರೆಯೋ ಶಿವಧೋ "

ಎಂಬ ವಾಕ್ಯಪ್ರಯೋಗವು ಗಿರಿಜಾಕಲ್ಯಾಣದಲ್ಲಿ ಒಂದೇ ಒಂದು ಸಲ ಉಪಯೋಗವಾಗಿದೆ ( ಆಶ್ವಾಸ ೮ ಪದ್ಯ ೭೫ ).

ಷಟ್ಸ್ಥಲಸಿದ್ಧಾಂತವನ್ನನುಸರಿಸುವ ಪಾರಿಭಾಷಿಕಶಬ್ದಗಳು ಗಿರಿಜಾಕಲ್ಯಾಣದಲ್ಲಿ ಇಲ್ಲವೇ ಇಲ್ಲ. ಆದರೆ ಶೈವಾಗಮ, ಶಿವಜ್ಞಾನ, ಶೈವಜ್ಞಾನ ಎಂಬ ಪದಪ್ರಯೋಗಗಳು ಮಾತ್ರ ಕಂಡುಬರುತ್ತವೆ. ಬಸವಣ್ಣನವರ ಪೂರ್ವದಲ್ಲಿ ಶೈವಾಗಮಗಳಿದ್ದುವು; ಅವುಗಳಲ್ಲಿ ಶಿವಜ್ಞಾನ, ಶೈವಜ್ಞಾನ ಮುಂತಾದ ಪಾರಿಭಾಷಿಕಶಬ್ದಗಳಿವೆ.

ಗಿರಿಜೆಯ ಲಗ್ನದ ಕಾಲದಲ್ಲಿ ವೀರಶೈವ-ಪದ್ಧತಿಯನ್ನನುಸರಿಸುವ ಪಂಚಕಲಶವಾದರೂ ಬರಬೇಕಿತ್ತು. ಅದರ ಬದಲು ಪುಣ್ಯಾಹವಾಚನ, ಅಕ್ಷತಾರೋಪಣ, ಲಾಜಾಹೋಮ, ಸಪ್ತಪದಿ ಮುಂತಾದ ಬ್ರಾಹ್ಮವಿವಾಹಕ್ಕೆ ಸಂಬಂಧಪಟ್ಟ ಧಾರ್ಮಿಕ ವಿಧಿಗಳು ಉಕ್ತವಾಗಿವೆ. ತಪ್ಪಿ ಕೂಡ ವೀರಶೈವ ವಿವಾಹವಿಧಿಯೊಳಗಿನ ಪಾರಿಭಾಷಿಕಶಬ್ದಗಳು ಬಂದಿಲ್ಲ. ಇತ್ಯರ್ಥವೇನೆಂದರೆ ಈ ಆಂತರಿಕ ಪ್ರಮಾಣಗಳಿಂದ ಮತ್ತು ರಾಘವಾಂಕಚಾರಿತ್ರೆಯ ಆಧಾರದ

ಮೇಲಿಂದ ಗಿರಿಜಾಕಲ್ಯಾಣವನ್ನು ಹರಿದೇವನು ಮೊದಲು ರಚಿಸಿರಬೇಕು; ಮತ್ತು ಗುರುಗಳ ಆಶ್ರಮವನ್ನು ಬಿಟ್ಟು ತನ್ನ ಮನೆಗೆ ಬಂದ ಕೂಡಲೆ ಅದನ್ನು ಬರೆದಿರಬೇಕು, ಎಂದು ಊಹಿಸಲು ಅವಕಾಶವುಂಟಾಗಿದೆ.

ಹರಿಹರದೇವನ ಅಕ್ಕನು ರುದ್ರಾಣಿಯೆಂದು ಮೇಲೆ ಹೇಳಿದೆಯಷ್ಟೆ. ಈಸಂಗತಿಯನ್ನು ಸಿದ್ಧನಂಜೇಶನು ರಾಘವಾಂಕಚಾರಿತ್ರದಲ್ಲಿ ಒಪ್ಪುವುದಿಲ್ಲ. ಆತನು ಹೇಳುವ ಸಂಗತಿಯೇ ಬೇರೆಯಾಗಿದೆ. ಮಹಾದೇವಭಟ್ಟ-ರುದ್ರಾಣಿಯರು ತಮ್ಮ ಮಗ ರಾಘವಾಂಕನ ಜನ್ಮ-ಕಾಲಕ್ಕೆ ತಮ್ಮ ವಂಶಗುರು ಹರಿಹರಾಚಾರ್ಯರನ್ನು ಕರೆಯಿಸಿದರು. " ತನ್ನಯ ವಂಶಗುರು ಹರೀಶ್ವರನೆನಿಸುವಾಚಾರ್ಯರಂ ಬರಿಸಿದಂ ಮಹಾದೇವಭಟ್ಟ", ಎಂದು ಅಲ್ಲಿ ಹೇಳಿದೆ. ಆದರೂ ತಪ್ಪೇನು ? ನಿತ್ಯವೂ ವ್ಯವಹಾರಸಂಬಂಧವುಂಟಾಗುತ್ತಿರುವ ಕುಟುಂಬದೊಳಗಿನ ಹೆಣ್ಣುಮಕ್ಕಳನ್ನು ಅಕ್ಕ, ತಂಗಿ, ಅಮ್ಮ, ಅಜ್ಜಿ ಎಂದು ಸಂಬೋಧಿಸುವ ರೂಢಿಯು ಪುರಾತನಕಾಲದಿಂದ ನಡೆದು ಬಂದುದು ಈಗಲೂ ವ್ಯವಹಾರದಲ್ಲಿದೆ. ಆದುದರಿಂದ ಹರಿಯರಸನು ರುದ್ರಾಣಿಯನ್ನು ತನ್ನ ಅಕ್ಕನೆಂದು ಭಾವಿಸಿರಬಹುದು. ಹರಿಶ್ಚಂದ್ರಕಾವ್ಯದಲ್ಲಿ[೧೪]

. . . . . . . ಸದ್ಗುಣ |
ಸ್ತೋಮಮೆಲ್ಲಂ ನೆರೆದು ರೂಪಾದುದೆನಿಸುವ ಮ- |
ಹಾಮಹಿಮ ಹಂಪೆಯ ಹರೀಶ್ವರನ ಮೂರ್ತಿ ನೆಲಸಿರ್ಕೆನ್ನ
ಚಿತ್ತದೊಳಗೆ || ೧—೧೨

ಚತುರ ಕವಿರಾಯ ಹಂಪೆಯ ಹರೀಶ್ವರನ ವರ- |
ಸುತನುಭಯಕವಿಕಮಲರವಿ ರಾಘವಾಂಕಪಂ- |
ಡಿತನೆಂದೊಡೆ . . . . . . . || ೧—೧೫

ಎಂದು, ಸೋಮನಾಥಚರಿತ್ರೆಯಲ್ಲಿ[೧೫]

---

೧೪. Reprint from Kavya Kalanidhi series for the University Exams, 1930. ೧೫. ಶಿವಾನುಭವಗ್ರಂಥಮಾಲಾ ೧೯೩೧, ನಂ. ೨೪.

. . . . . . . .                    ಮ- |

ಹಾಮಹಿಮ ಹಂಪೆಯ ಹರೀಶ್ವರನ ಮೂರ್ತಿ ನೆಲಸಿರ್ಕೆನ್ನ

ಚಿತ್ತದೊಳಗೆ || ೧—೧೪

. . . ಇದಂ ಪೇಳ್ದ ಕವಿ ಹಂಪೆಯ ಹರೀಶ್ವರನ ಸುತ ರಾಘವಾಂಕ

ನೆನಲೂ || ೧—೨೫

ಎಂದು ರಾಘವಾಂಕನು ಹೇಳಿರುವುದರಿಂದ ಆತನು ಹರಿಹರನ ಸೋದರದಳಿಯನಲ್ಲವೆಂದು ಹೇಳಬಹುದಾಗಿದೆ. ಅಮಾತು ನಿಜವಾಗಿದ್ದರೆ ಅದನ್ನು ರಾಘವಾಂಕನು ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದನು. ಯಾಕೆಂದರೆ ತಾನು ಆತನ ಶಿಷ್ಯನೆಂದು ಮೇಲಿನ ಅವತರಣಿಕೆಗಳಲ್ಲಿ ("ಹರೀಶ್ವರನ ವರಸುತ, ಹರೀಶ್ವರನ ಸುತ") ಹೇಳಿದಂತೆ ಇದಕ್ಕಿಂತಲೂ ಹೆಚ್ಚಿನ ಆಪ್ತಸಂಬಂಧವನ್ನು ಎಂದೂ ಹೇಳದಿರುತ್ತಿರಲಿಲ್ಲ.

ಹರಿಹರದೇವನು ಮದುವೆಯಾಗಿ ಗೃಹಸ್ಥಧರ್ಮವನ್ನು ಸ್ವೀಕರಿಸಿದಂತೆ ಆಧಾರಗಳು ಎಲ್ಲಿಯೂ ದೊರೆಯುವುದಿಲ್ಲ. ಆವಿಷಯವನ್ನು ಸಿದ್ಧನಂಜೇಶನು ರಾಘವಾಂಕಚಾರಿತ್ರದಲ್ಲಿ ಎತ್ತಿಲ್ಲ; ಪದ್ಮಣಾಂಕನು ಪದ್ಮರಾಜಪುರಾಣದಲ್ಲಿ ಹೇಳಿಲ್ಲ. ರಾಘವಾಂಕನು ತನ್ನ ಹರಿಶ್ಚಂದ್ರ-ಕಾವ್ಯದಲ್ಲಿಯೂ ಸೋಮನಾಥಚರಿತ್ರೆಯಲ್ಲಿಯೂ[೧೬] ತನ್ನ ಗುರುಪರಂಪರೆಯಲ್ಲಿ ಕೆಲವರ ಲಗ್ನವಾಗಿತ್ತೆಂದು ಹೇಳಿ ಹರಿದೇವನ ವಿಷಯದಲ್ಲಿ ಮೌನವಾಗಿದ್ದಾನೆ.

ಜಿತೇಂದ್ರಿಯಂ ನಿಷ್ಕಾಮಿ . . . . . |

. . . . . .      ರಾಜಿಪ ಸುಕೃತ |

ಭಾವಿಕ ಹಂಪೆಯ ಶಂಕರಪ್ರಭು . . . . . .   ||ಸೋ. ಚ.|| ೧-೧೩

ಭವಿಭಕ್ತರಲ್ಲೆಂದು ಕೈಯಾನದುದು ತನ್ನ |

ಯುವತಿಗಲ್ಲದೆ ಮನದೊಳೆಳಸದುದು , . . . . .

. . . . . . ಹಂಪೆಯಮಹಾದೇವಗುರುರಾಯ . . . . .   || ೧-೧೩

---

೧೬. ಶಿವಾನುಭವ ಗ್ರಂಥಮಾಲಾ ನಂ. ೨೪.

ಆಮಹಾದೇವರುದರದೊಳು ಗುರುಭಕ್ತಿ ನಿ- |
ಷ್ಕಾಮವರಿವಾಚಾರನೀತಿದಯೆಜಂಗಮ- |
ಪ್ರೇಮಶಮೆದಮೆಶಾಂತಿದಾಂತಿಚಾತುರ್ಯಸತ್ಯೌದಾರ್ಯವೇಕನಿಷ್ಠೆ ||
ಸಾಮರ್ಥ್ಯವೆಲ್ಲಾ ಕಲಾಪ್ರೌಢಿಸದ್ಗುಣ- |
ಸ್ತೋಮವೆಲ್ಲಂ ಕೂಡಿ ರೂಪಾದುದೆನಿಸುವ ಮ -|
ಹಾಮಹಿಮ ಹಂಪೆಯ ಹರೀಶ್ವರನ ಮೂರ್ತಿ . . . . || ೧—೧೪

(ಇವೇ ಪದ್ಯಗಳು ಹರಿಶ್ಚಂದ್ರ ಕಾವ್ಯದಲ್ಲಿಯೂ ಇವೆ.) ಈಪದ್ಯಗಳಲ್ಲಿ ಶಂಕರ ದೇವನು 'ಜಿತೇಂದ್ರಿಯನು' ಎಂದು ಹೇಳಿರುವುದರಿಂದ ಆತನು ಯೋಗಿಯು. ಮಹಾದೇವ-ಗುರುರಾಯನ ಲಗ್ನವಾಗಿತ್ತೆಂದು ಹೇಳಿದೆ. ಹರಿಹರದೇವನ ವಿಷಯವಾಗಿ 'ನಿಷ್ಕಾಮ, ಜಂಗಮಪ್ರೇಮ, ಶಮೆ, ದಮೆ, ಶಾಂತಿ, ದಾಂತಿ, ಏಕನಿಷ್ಠೆ' ಮುಂತಾದ ಸದ್ಗುಣಗಳನ್ನು ಹೇಳಿರುವುದರಿಂದ ಮತ್ತು ಇವು ಪ್ರಾಪಂಚಿಕನಿಗಲ್ಲದೆ ಯೋಗಿಗೆ ತಕ್ಕ ಗುಣಗಳಾಗಿರುವದರಿಂದ ಹರಿದೇವನು ಯೋಗಿಯೇ ಆಗಿರಬೇಕು. ಇದಲ್ಲದೆ ಪದ್ಮರಾಜ ಪುರಾಣದಲ್ಲಿ [೧೭]

" ಸ್ಮರಕಾಲಮಾಯಾದಿಗಳ್ಗಿಡದ ಪದದೊಳ್ತೊ- |
ಡರನಿಕ್ಕಿ ಡಂಗುರಂ ಬೊಯ್ಸಿ ವರ್ತಿಸುವವಂ |
ಹರಮಂತ್ರಸಿದ್ಧಂ . . . . . .

ಎಂದು ಹೇಳಿರುವುದರಿಂದ ಹರಿಹರದೇವನು ಬ್ರಹ್ಮಚಾರಿಯು, ಯೋಗಿಯು ಎಂದೇ ಸಿದ್ಧವಾಗುತ್ತದೆ.

ಮೇಲಿನ ಗುರುಪರಂಪರೆಯನ್ನು ನೋಡಿದರೆ ಹಂಪೆಯು ಆಕಾಲದಲ್ಲಿ ಒಂದು ವಿದ್ಯಾಪೀಠವೇ ಆಗಿತ್ತೆಂದು ತೋರುತ್ತದೆ. ಅಲ್ಲಿನ ಗುರುಗಳು ಬಹು ದೊಡ್ಡ ಪಂಡಿತರಾಗಿದ್ದರು. ಅವರ ಶಿಕ್ಷಣಪದ್ಧತಿಯೂ ಉಚ್ಚತರಗತಿಯದು. ಆದುದರಿಂದಲೇ ಮಹಾದೇವಭಟ್ಟನು ಹರಿಹರಾಚಾರ್ಯರಿಂದ ತನ್ನ ಮಗ ರಾಘವಾಂಕನ ಉಪನಯನವನ್ನು ಮಾಡಿಸಿ, ಶಿಕ್ಷಣಕ್ಕೆಂದು ಆಗುರುವಿನ ವಶಕ್ಕೆ ಅವನನ್ನು ಕೊಟ್ಟನು.

---

೧೭. ಸಂಧಿ ೫ ಪದ್ಯ ೭.

೧೮"ರಾಘವಾಂಕಂಗೆ ತಾಯಿ- |
ತಂದೆಗಳು ಮನದಿನಣುಗಂಗುಪನಯನವ ಮಾಡುವೆವೆಂದು
ನಿಶ್ಚೈಸುತೆ ||
. . . . . . ಹರಿದೇವರಂ |
ತಂದು ಗಾಯತ್ರಿಯುಪದೇಶಮಂ ಮಾಡಿಸಿ ಮು- |
ದಂದಳೆದು . . . . . . || ಮತ್ತು
. . . . . . ದಂಪತಿಗಳತಿ ಹರುಷದಿಂ ಸುತನ |
ಗುರು ಹರೀಶ್ವರನಡಿಗೆಯೆರಗಿಸುತ್ತೆ ಭಕ್ತಿಯಿಂ |

೧೯ಇರಲೀ ಸುತಗೆ ಚತುರ್ದಶವಿದ್ಯೆಗಳ ಕಲಿಸಿ |
ಪೊರೆವುದೆಮ್ಮಂ ಕರುಣದಿಂ . . . . . . ||

ಎಂಬ ಆಧಾರಗಳ ಮೇಲಿಂದ ರಾಘವಾಂಕನ ಉಪನಯನದ ಕಾಲದ ವರೆಗೆ ವೀರಶೈವಧರ್ಮವು ಅಷ್ಟು ವಿಸ್ತಾರವಾಗಿ ಪ್ರಸಾರಗೊಂಡಿರಲಿಲ್ಲವೆಂದು ತೋರುತ್ತದೆ; ಮತ್ತು ಹರೀಶ್ವರನು ಶೈವಮಾರ್ಗದ ಆರಾಧ್ಯ-ಬ್ರಾಹ್ಮಣನಾಗಿದ್ದನು, ವೀರಶೈವನಾಗಿರಲಿಲ್ಲ. ಮೇಲಿನ ಆಧಾರಗಳಿಂದ ಮತ್ತೊಂದು ಸಂಗತಿಯು ಸ್ಪಷ್ಟವಾಗುತ್ತದೆ. ಅದು ಹೀಗೆ. ಹರೀಶ್ವರನು ಆ ಕಾಲದಲ್ಲಿ ಬಹು ದೊಡ್ಡ ಪಂಡಿತನೆಂದು ಪ್ರಸಿದ್ಧಿಗೊಂಡು ಎಲ್ಲರ ಆದರಕ್ಕೆ ಪಾತ್ರನಾಗಿದ್ದನು. ಆದುದರಿಂದಲೇ ರಾಘವಾಂಕನ ಶಿಕ್ಷಣದ ಕಾರ್ಯವನ್ನು ಮಹಾದೇವಭಟ್ಟನು ನಂಬುಗೆಯಿಂದ ಹರೀಶ್ವರನ ಕಡೆಗೆ ಒಪ್ಪಿಸಿ ಧನ್ಯನಾದನು. ರಾಘವಾಂಕನಾದರೂ ಗುರುವಿಗೆ ಒಪ್ಪುವ ಶಿಷ್ಯನಾಗಿದ್ದನು. ಗುರುಶಿಷ್ಯರ ಸಂಬಂಧದಲ್ಲಿ ಮಾನಿತ ಆಪ್ತತ್ವವೊಂದು ಬೆರೆತು ಹೋದುದರಿಂದ ಶಿಕ್ಷಣಕ್ರಮದಲ್ಲಿ ಉತ್ಸಾಹವು ಉಕ್ಕೇರಿತು. ಶಿಷ್ಯನು ಗುರುವಿನ ವಿಷಯವಾಗಿ ಅಭಿಮಾನಿ. ತಾನು 'ಹರೀಶ್ವರನ ವರಸುತಂ' ಎಂದು ಹೇಳಿಕೊಂಡಿದ್ದಾನೆ. ಬಸವಪುರಾಣದಲ್ಲಿಯೂ 'ಹರಿದೇವಸುತರಾಘವ' ಎಂದಿದೆ. ಗುರುವೂ ಶಿಷ್ಯನ ಬಗ್ಗೆ ಅಭಿಮಾನ-ಆದರಗಳನ್ನು ತಾಳಿ 'ಶಿಷ್ಯಾದಿಚ್ಛೇತ್ ಪರಾ

೧೮. ರಾಘವಾಂಕಚಾರಿತ್ರ ಸಂಧಿ ೨ ಪದ್ಯ ೪೯. ೧೯. ರಾಘವಾಂಕ ಚಾರಿತ್ರ ಸಂಧಿ ೨ ಪದ್ಯ ೫೧

ಜಯಂ' ಎಂಬ ಉಕ್ತಿಯಂತೆ ಮನಗೊಟ್ಟು ಶಿಕ್ಷಣಕೊಟ್ಟು ಅವನನ್ನು ಪಂಡಿತನನ್ನು ಮಾಡಿದನು.

. . . . . . ಸುಪ್ರಸಾದವನಿಕ್ಕಿ ರಾಘವನ [೨೦]ಬುಧವರನೆನಿಸಿದ
ನಿಳೆಯೊಳು ||

ಸಕ್ಕದದ ಕನ್ನಡದ ಭಾಷಾಲಸತ್ಕವಿ- |
ತ್ವಕ್ಕೆ ತಾನಧಿಪತಿಯಲಂಕೃತಿಗಳಿಗೆ ನಾಟ- |
ಕಕ್ಕೆ ವ್ಯಾಕರಣಕ್ಕೆ ಭಾಣಕ್ಕೆ ಪ್ರಹಸನಕೆ ನವರಸಗಳಿಗೆ ತನ್ನೊಳು ||
ಧಿಕ್ಕರಿಪ ಕವಿಯಿಲ್ಲದಿರೆ ನೋಡಿ ಮರ್ತ್ಯಲೋ- |
ಕಕ್ಕಿವನೆ ಕವಿಶರಭಭೇರುಂಡನೆಂದು ಪೆಸ-
ರಿಕ್ಕಿ ಕರೆದರು ಕವಿನಿಕರವಾ ಹರೀಶ್ವರನ [೨೧]ಕೃಪೆಯೊದವನುಸುರ
ಲಳವೆ ||

ಹೀಗೆ ಸಿದ್ಧನಂಜೇಶನು ರಾಘವಾಂಕನ ಶಿಕ್ಷಣವನ್ನು ಅಭಿಮಾನದಿಂದ ಹೊಗಳುತ್ತಿರುವಾಗ ಆಕಾಲದ ಶಿಕ್ಷಣಪದ್ಧತಿಯನ್ನೂ ಹೇಳಿದ್ದಾನೆ. ಅದು ಇಲ್ಲಿ ಅಪ್ರಸ್ತುತವಾದರೂ ಮಹತ್ವದ ಸಂಗತಿಯೆಂದು ಅಡಿಯಲ್ಲಿ ಕೊಡಬೇಕಾಗಿ ಬಂದಿದೆ. ಈ ವಿಷಯವು ಮನನೀಯವೂ ಸಂಶೋಧನೆಗೆ ಯೋಗ್ಯವೂ ಆಗಿದೆ.

---

ಪ್ರಣವಪಂಚಪ್ರಕಾರವೆನಿಸಿರ್ಕು ಮತ್ತಾ- |
ಪ್ರಣವತಾರಕಾಕಾರ ದಂಡಕರೂಪವಾ- |
ಪ್ರಣವ ಕುಂಡಲಾಕೃತಿಯರ್ಧಚಂದ್ರಾಭದರ್ಪಣಪ್ರತಿಮನೈದು ||
ಸುಪ್ರಕಾರಗಳೆ ಪಂಚಪ್ರಣವವಾದುವಿವೆ |
ಯಪ್ರತಿಮಪಂಚಾಕ್ಷರೋದಯಕರಂಗಳಾ- |
ಸುಪ್ರಥಿತ ಪಂಚಾಕ್ಷರದಿನೇಕಪಂಚಾದಶಾಕ್ಷರೋದಯವೆಂದನು ||
ಅದರೊಳಗೆ ಸಪ್ತವರ್ಣಂ ಪ್ರಕೃತಿ ನವವರ್ಣ- |
ಮದು ವಿಕೃತಿ ಷೋಡಶಸ್ವರಂಗಳೆನಿಸಿದುವು ಮ- |
ತ್ತದರೊಳಗೆ ಪುಲ್ಲಿಂಗವಾರು ಸ್ತ್ರೀಲಿಂಗವಾರುಂ ನಪುಂಸಕವೆ ನಾಲ್ಕು

---

೨೦. ರಾಘವಾಂಕಚಾರಿತ್ರ ಸಂಧಿ ೨, ಪದ್ಯ ೫೭. ೨೧. ರಾಘವಾಂಕಚಾರಿತ್ರ ಸಂಧಿ ೨, ಪದ್ಯ ೫೮

ಮುದದಿ ವಿಕಲಾಕ್ಷರಂ ಪಂಚೋತ್ತರಂ ತ್ರಿಂಶ- |
ವದಕೆ ಸ್ವರಮೊದಗೆ ಸಕಲಾಕ್ಷರಾಹ್ವಯವಕ್ಕು |
ಪುದಿದಿರ್ಪುವಲ್ಲಿ ಪನ್ನೆರಡು ಪನ್ನೊಂದು ಪುಂಸ್ತ್ರೀನಪುಂಸಕಲಿಂಗಂಗಳು||
ಇನ್ನಿವೈವತ್ತೊಂದು ವರ್ಣಂಗಳಿವರ ದೆಸೆ- |
ಯಿನ್ನಿಖಿಲ ದೇಶಭಾಷೆಗಳು ಪದಿನಾಲ್ಕಾದ |
ಸನ್ನುತಸುವಿದ್ಯೆಗಳು ಸಕಲಮಂತ್ರಗಳುದಿಸಿದುವಿವಕೆ ಪೆರತಾದುದು ||
ಭಾನ್ನೆಲದೊಳಿಲ್ಲೆನುತ್ತಖಿಲ ಲೌಕಿಕವೈದಿ- |
ಕೋನ್ನತಸುವಿದ್ಯೆಗಳುಮೊರ್ಮೆ ಬರ್ಪಂತೆ ಕರು |
ಣನ್ನಿಮಿರೆ ಸುಪ್ರಸಾದವನಿಕ್ಕಿ ರಾಘವನೆ ೨೨ಬುಧವರನೆನಿಸಿದನಿಳೆ-
ಯೊಳು ||

ರಾಘವಾಂಕನ ಶಿಕ್ಷಣವು ಈ ರೀತಿಯಿಂದ ನಡೆಯುತ್ತಿರುವಾಗ ಹರೀಶ್ವರನು ವೀರಶೈವಮತತತ್ವಗಳ ಅಭ್ಯಾಸಮಾಡುತ್ತಿದ್ದನು; ಮತ್ತು ಆ ಮತತತ್ವಗಳ ತಿರುಳನ್ನು ಕಂಡುಹಿಡಿದು ರಾಘವಾಂಕನ ಶಿಕ್ಷಣವು ಮುಗಿಯುವ ಪೂರ್ವದಲ್ಲಿಯೇ ಅವನ ಸಹಿತವಾಗಿ ಆ ಮತವನ್ನು ಸ್ವೀಕರಿಸಿದನೆಂದು ನಂಬಲು ಬಲವಾದ ಆಧಾರಗಳು ದೊರೆಯುತ್ತವೆ.

. . . . . . ೨೩ವಿರೂಪಾಕ್ಷನಿರವಂ ಮನ- |
ಶ್ಚೂಡಿಕಾಪಟದೊಳಂಕಿಸಿ ಬಳಿಕುಳಿದ ಬಾಹ್ಯವೃತ್ತಿಯಂ
ಬಳಸುವಚಲಂ ||

ಆಡಲೇಂ ವಿಷಮಸಂಸಾರವಾರ್ಧಿಪ್ರಬಲ- |
ಬಾಡಬಂ ಗುರುಲಿಂಗಜಂಗಮಸಪರ್ಯೆಯಂ |
ಮಾಡಿ ತಣಿಯದ ತವಕದಿಂದುರ್ವಿಕೊರ್ವಿ ನಲಿದಾಡುವನು
ಪಮುಚರಿತ್ರಂ || ೬ ||

ಅರರೆ ಹಂಪೆಯ ಮಹಾದೇವರ ಜಠರಸುಧಾ- |
ಶರಧಿಸಂಭವಸುಧಾಕರನಖಿಲಶಿವಭಕ್ತ- |
ಕರುಣಾಕಟಾಕ್ಷಪ್ರಭಾಪುಂಜರಂಜಿತಾಂಗಂ ದೇಹಗುಣವಿಭಂಗಂ ||

---

೨೨. ರಾಘವಾಂಕಚಾರಿತ್ರ, ಸಂಧಿ ೨, ಪದ್ಯಗಳು ೫೫-೫೭. ೨೩. ಪದ್ಮರಾಜಪುರಾಣ, ಸಂಧಿ ೫.

ಸ್ಮರಕಾಲಮಾಯಾದಿಗಳೆಡದ ಪದದೊಳ್ತೊ- |
ಡರನಿಕ್ಕಿ ಡಂಗುರಂಬೊಯ್ಸಿ ವರ್ತಿಸುವವಂ |
ಹರಮಂತ್ರಸಿದ್ಧಂ ಚಿದನುಬದ್ಧನಧಿಕಶುದ್ಧಂ ಸತ್ಕಲಾಪ್ರವೃದ್ಧಂ || ೭ ||
ಮಾತೇನೊ ಮೋಕ್ಷಲಕ್ಷ್ಮೀಧವನ ತುಂಗಭ- |
ದ್ರಾತಟೀಧಾಮನ ವಿರೂಪಾಕ್ಷನಂಘ್ರಿಕಂ- |
ಜಾತಸಂಜಾತಗಂಧಾಸ್ವಾದನಾನಂದಮದಮಧುಕರಾಯಮಾಣಂ ||
ಓತು ಬಣ್ಣಿಪೊಡಹೀಶಂಗರಿದೆನಿಪ ಸದ್ವಿ- |
ನೀತಂ ಕಲುಷಜಲದ ವಾತಂ ಪ್ರಣತಪಾರಿ- |
ಜಾತಂ ಲಸದ್ಗುಣೋಪೇತಂ ಶರಣಜನಪ್ರೀತಂ[೨೩] ಶಿಕೃಪಾಭಿ-
ಜಾತಂ|| ೮ ||

ಆದರೆ ಆತನು ಎಂದು ಯಾರಿಂದ ದೀಕ್ಷೆಯನ್ನು ತೆಗೆದುಕೊಂಡನೆಂಬ ಸಂಗತಿಯು ಮಾತ್ರ ಎಲ್ಲಿಯೂ ಹೇಳಲಾಗಿಲ್ಲ.

ಹರೀಶ್ವರನ ಗುಣವರ್ಣನಪರವಾದ ಮೇಲಿನ ಮೂರು ಪದ್ಯಗಳಲ್ಲಿ ಆತನ ಶಿವಭಕ್ತಿ ಆಧ್ಯಾತ್ಮಜ್ಞಾನಗಳ ಹೊರ್ತಾಗಿ ಮತ್ತೊಂದು ಸಂಗತಿಯು ಸೂಚಿತವಾಗುತ್ತಿದೆ. “ಸ್ಮರಕಾಲಮಾಯಾದಿಗಳ್ಗೆಡದ ಪದದೊಳ್ತೊಡರನಿಕ್ಕಿ ಡಂಗುರಂಬೊಯ್ಸಿ” ಎಂದು ಹೇಳುವಲ್ಲಿ ಆತನು ಬಹು ಸಾಮರ್ಥ್ಯವುಳ್ಳ ಬ್ರಹ್ಮಚಾರಿಯೂ ಶಿವಯೋಗಿಯೂ ಆಗಿ ಪ್ರಸಿದ್ಧನಾಗಿದ್ದನೆಂದು ಹೇಳುವುದೇ ಕವಿಯ ಮುಖ್ಯೋದ್ದೇಶವು. ಇಂತಹ ಯೋಗಿಗಳ ಅಂತವನ್ನು ಬಲ್ಲವರಾರು? ಅವರ ನಡೆಯೇ ಬೇರೆ, ನುಡಿಯೇ ಬೇರೆ. ಜನಸಾಮಾನ್ಯದ ಕಣ್ಣುಗಳನ್ನು ಕುಕ್ಕಿಸುವವರು ಅವರು.

ಈ ತರುವಾಯ ಹರೀಶ್ವರನು “ಫಾಳಾಕ್ಷನಾಜ್ಞೆಯಂ ಪಡೆದು ನರಸಿಂಹ ಬಲ್ಲಾಳಭೂವರನ ಗಣಕರ ನಿವಹಕೊಡೆಯನಾದಂ”[೨೪] ಎಂದು ಹೇಳಿರುವುದರಿಂದ ದ್ವಾರಸಮುದ್ರದ ಬಲ್ಲಾಳನಲ್ಲಿ ಕರಣಿಕನಾದನೆಂದು ಹೇಳುವುದು ತುಸು ಆಶ್ಚರ್ಯಕರವೇ. “ಹರಮಂತ್ರಸಿದ್ಧನೂ,” ಚಿದನು-

೨೩. ಪದ್ಮರಾಜಪುರಾಣ, ಸಂಧಿ ೫. ೨೪. ರಾಘವಾಂಕ-ಚಾರಿತ್ರ, ಸಂಧಿ ೧೪ ಪದ್ಯ ೪೭.

ಬದ್ಧನೂ," "ಸತ್ಕಲಾಪ್ರವೃದ್ಧನೂ," "ಶರಣಜನಪ್ರೀತನೂ" ಆದ ಶಿವಯೋಗಿಯು ಕರಣಿಕನಾಗಿರುವುದೆಂತು? ಬಲ್ಲಾಳನ ಮಂತ್ರಿಯಾದ ಕೆರೆಯಪದ್ಮರಸನೆಂಬ ಮತ್ತೊಬ್ಬ ಶಿವಯೋಗಿಯ ಸಂಪರ್ಕವುಂಟಾಗಬೇಕೆಂದು ಆತನು ಈ ಉದ್ಯೋಗವನ್ನು ಕೈಕೊಂಡಿರಬಹುದೇ. ಏನೇ ಇರಲಿ! ಆತನು ಕರಣಿಕನಾಗಿದ್ದನೆಂಬ ಸಂಗತಿಗೆ ಪದ್ಮರಾಜ-ಪುರಾಣದಲ್ಲಿಯೂ ಆಧಾರಗಳಿವೆ.

ಕರಣಿಕಾಕೃತಿಯ ಹರಿಹರದೇವನಾದಿಯಾಗೆಸೆವ ೨೫
ಷೋಡಶಪ್ರತಿಯ ಕರಣಿಕರೊಳಗ್ರಣಿಯೆನಿಪ ಗಾಡಿಕಾರಂ. ೨೬

ಹರೀಶ್ವರನು ಕರಣಿಕನಾದ ಮೇಲೆ ಸ್ವಾಭಾವಿಕವಾಗಿ ಇತರರಂತೆ ಲೆಕ್ಕವನ್ನು ಬರೆಯದೆ ಬೇರೆ ರೀತಿಯಾಗಿ ಬರೆದನು. ಅದನ್ನು ಕಂಡು ಇತರರು ಈತನಿಗೆ ಲೆಕ್ಕ ಬರೆಯಲಿಕ್ಕೆ ಬರುವದಿಲ್ಲೆಂದು ಬಲ್ಲಾಳನಿಗೆ ದೂರು ಹೇಳಿದರು.

. . . . . . ದೇಶವ್ಯಯಾದಿಗಳ ಲೆಕ್ಕಮಂ ಬರೆವ ನಿಜವಹಿಗಳಲ್ಲಿ ||
ಹೇಳಲೇನಾವ ಪುಟದೊಳು ನೋಡೆ ಸಕಲ ದೇ- |
ವಾಳಿಪ ವಿರೂಪಾಕ್ಷನಾಮಮಂ ಬರೆದು ವ- |
ರ್ಣಾಳಿಗಳೊಂದೊಂದುವಂ ಬರೆಯದಿರೆ ಗಣಕರೀತಂ ಲೆಕ್ಕವರಿ
ಯನೆಂದು || ೪೭ ||

ತಮ್ಮೊಳಗೆ ನಿಶ್ಚೈಸಿ ಧಾತ್ರೀಪತಿಗೆ ಬಿನ್ನ- |
ಪಮ್ಮಾಡಿದರು ಹರಿಯರಸನ ವಹಿಯಂ ತರಿಸಿ |
ಯೊಮ್ಮೆ ನೋಡು ೨೭ . . . . . . || ೪೮ ||
ಸದಮಲಿನ ಶಿವಕವೀಂದ್ರಂ ಲೆಕ್ಕಮೆಲ್ಲಮಂ !
ಮದನಹರಪಂಪಾವಿರೂಪಾಕ್ಷಯೆಂದು ಬರೆ- |
ದಿದನವನಿಪಂ ಪರೀಕ್ಷಿಸಲೊಡಂ ನಿಷ್ಪ್ರಯಾಸದೆ ನಿರ್ವಹಿಸಿದ
೨೮ಮಹಿಮಂ || ೪೯ ||

ಈ ಸಂದರ್ಭದಲ್ಲಿ ಹರೀಶ್ವರನು ಜಾಣ್ಮೆಯಿಂದ ಪಂಪಾವಿರೂಪಾಕ್ಷ ಎಂಬ

---

೨೫. ಪದ್ಮರಾಜಪುರಾಣ ಸಂಧಿ ೪ ಪದ್ಯ ೨೩. ೨೬. ಪದ್ಮರಾಜಪುರಾಣ ಸಂಧಿ ೫, ಪದ್ಯ ೬. ೨೭. ರಾಘವಾಂಕಚಾರಿತ್ರ ಸಂಧಿ ೧೪. ೨೮. ಪದ್ಮರಾಜಪುರಾಣ ಸಂಧಿ ೫.

ಪರಮಾತ್ಮನ ಹೆಸರಿನಲ್ಲಿ ಸಾಂಕೇತಿಕ ಭಾಷೆಯೊಂದನ್ನು ಕಲ್ಪಿಸಿಕೊಂಡು ಲೆಕ್ಕವನ್ನು ಬರೆದಿರಬೇಕು. ಇಂತಹ ಸಂಗತಿಗಳು ಪುರಾತನಕಾಲದಲ್ಲಿ ಅಸಾಧ್ಯವಾಗಿರಲಿಲ್ಲ. ವೀರಶೈವ "ಉದ್ಧರಣೆ" ಯಿದೆ. ಅದು ಜನಸಾಮಾನ್ಯಕ್ಕೆ ತಿಳಿಯದಿದ್ದರೂ ಸಾಂಕೇತಿಕ ಆಗಮವೆಂದು ಬಲ್ಲವರು ಹೇಳುತ್ತಾರೆ. ಅದರಂತೆಯೇ ಹರಿಯರಸನು "ವಿರೂಪಾಕ್ಷ" ಎಂದು ಬರೆಯುವಲ್ಲಿ ಎಲ್ಲವನ್ನೂ ವಿರೂಪಾಕ್ಷಮಯವಾಗಿ ಮಾಡಿ ಸಾಂಕೇತಿಕ ಭಾಷೆಯಿಂದ ಲೆಕ್ಕವನ್ನು ಬರೆದು ಎರಡು ಕಾರ್ಯಗಳನ್ನು ಸಾಧಿಸಿದನು. ಇದೇ ಅರ್ಥವನ್ನು ಸಿದ್ಧನಂಜೇಶನು ಮುಂದೆ ಹೀಗೆ ಸೂಚಿಸಿದ್ದಾನೆ:

. . . . . . ನರಸಿಂಹ- |
ಬಲ್ಲಾಳನ ಕರಣಿಕರು ಚಿನ್ನರನ್ನದ ಭಂಡಾರಗಳ ವಹಿಯ ತೆಗೆದು ||
ನಿಲ್ಲದೆ ಪರಿಪ್ರಶ್ನೆಗೈಯ್ಯೆ ಶಿವಲಿಖಿತದಿಂ |
ಸೊಲ್ಲಿಸಿ ನಿರುತ್ತರಮುಖರ ಮಾಳ್ಪೆನೆಂದು ಮನ- |
ದಲ್ಲಿ ಹರಿಹರ ನೆನೆದು ಪೇಳಲುಜ್ಜುಗಿಸಿದಂ ಬೆರಗಾಗೆ ಸಭೆಯ
ಜನರು || ೫೦ ||

ಇದರಂತೆ ಬಲದೇವನೂ

"ವಹಿಯೊಳುಂ ಪಂಚಾಕ್ಷರಿಯ ಬರೆದು ನೆಲದೆರೆಯ ಬಿಜ್ಜಳಗೆ
ಲೆಕ್ಕಮುಂ ಪೇಳ್ದಂತೆ [೨೭] || ೫೪ ||

ಎಂದು ಅದೇ ಪುಸ್ತಕದಲ್ಲಿ ಮುಂದೆ ಹೇಳಿರುವುದರಿಂದ ತಮ್ಮ ಆರಾಧ್ಯದೇವರ ಹೆಸರಿನಿಂದ ಸಾಂಕೇತಿಕ ಭಾಷೆಯನ್ನು ಕಲ್ಪಿಸಿಕೊಳ್ಳುವ ಪದ್ಧತಿಯೊಂದು ಆ ಕಾಲದಲ್ಲಿ ಇತ್ತೆಂದು ಊಹಿಸಬೇಕಾಗಿದೆ. ಮತ್ತು ಹರಿಹರದೇವನಂತಹ ಅಸಾಮಾನ್ಯ ಪಂಡಿತನಿಗೆ ಅದು ಕಷ್ಟಕರವಾಗಿರಲಿಲ್ಲ.

ಹೀಗೆ ಲೆಕ್ಕವನ್ನು ತಿಳಿಹೇಳುತ್ತಿರುವಾಗ ಸೂರ್ಯಾಸ್ತವು ಸಮೀಪಿಸಲು "ಅಘಹರ ವಿರೂಪಾಕ್ಷನಾಣೆಯಿಂದಾತನಂ ೪೨೦ ಗಳಿಗೆಗಳ ವರೆಗೆ ತಡೆದು ನಿಲ್ಲಿಸಿದನು" [೨೮] ಎಂದು ಮತ್ತೊಂದು ಪವಾಡವು ಹೇಳಲಾಗಿದೆ. ಇದಕ್ಕೆ ಆಧಾರವಾಗಿ ಕೆಳಗಿನ ಪವಾಡಗಳು ಹೇಳಲಾಗಿವೆ. "ಸಿದ್ಧರಾಮನು

---

೨೫. ಪದ್ಮರಾಜಪುರಾಣ ಸಂಧಿ ೫, ಪದ್ಯ ೬. ೨೬. ರಾಘವಾಂಕಚಾರಿತ್ರ ಸಂಧಿ ೧೪.
೨೭. ರಾಘವಾಂಕಚಾರಿತ್ರ ಸಂಧಿ ೧೪, ೨೮. ರಾಘವಾಂಕಚಾರಿತ್ರ ಸಂಧಿ ೧೪, ಪದ್ಯ ೬೩.

ಶಿವಭಕ್ತರಾಣೆಯಿಡಲು, ಬಸವಣ್ಣನು ಸಂಗಮೇಶ್ವರನ ಆಣೆಯಿಡಲು, ಮಹಾದೇವಿಯು ಬಸವಪದದಾಣೆಯಿಡಲು ಸೂರ್ಯನು ಕದಲದೆ ಅಲ್ಲಿಯೇ ನಿಂತುಬಿಟ್ಟನು." ೨೯ ಇದರ ಅರ್ಥವಿಷ್ಟೇ! ಎಲ್ಲ ಲೆಕ್ಕವನ್ನು ಆತನು ಅದೇ ದಿನ ಸಂಜೆಯೊಳಗಾಗಿ ಹೇಳಿಬಿಟ್ಟನು. ತನ್ನ ಸಾಂಕೇತಿಕ ಭಾಷೆಯ ಬಗ್ಗೆ ವಿಚಾರಮಾಡುತ್ತ ಕುಳಿತುಕೊಳ್ಳಬೇಕಾಗಿರಲಿಲ್ಲ.

ಈ ಯೆರಡು ಪವಾಡಗಳಲ್ಲಿ ಮೂರನೆಯದೊಂದು ಪವಾಡವು ಅಡಕವಾಗಿದೆ. ಲೆಕ್ಕವನ್ನು ಹೇಳುತ್ತಿರುವಾಗ ಹರಿಯರಸನು ಕೈಗಳನ್ನು ಮೇಲೆತ್ತಿ ವಿರೂಪಾಕ್ಷನನ್ನು ನೆನೆದು ಅಂಗೈಗಳನ್ನು ಕೂಡಿಸಿ ತಿಕ್ಕಿದನು. ಅದನ್ನು ಕಂಡು ಜನರೆಲ್ಲರೂ ಹಾಸ್ಯಮಾಡಿದರು. ನರಸಿಂಹ ಬಲ್ಲಾಳನು ಆಬಗ್ಗೆ ವಿಚಾರಿಸಲು,

ಅವಧರಿಸು ಭೂಪ ಪಂಪಾವಲ್ಲಭನ ತೆರೆಯ ।
ಸುವಸನಮುಮೀಮುಹೂರ್ತದೊಳುರಿವುತಿರೆ ।
. . . . . . ಲೊರಸಿದೆನೆನಲ್ಕೆ ೩೦ ॥ ೫೫ ॥

ಆತನ ಕೈಗೆ ತಗಲಿದ ಬಿಸಿಮುಸಿಯನ್ನು ಕಂಡು ಅದರ ಸತ್ಯಾಂಶವನ್ನು ತಿಳಿಯಬೇಕೆಂದು ಪಂಪಾಧಿಪತಿಗೆ ಬಿನ್ನವತ್ತಳೆಯನ್ನು ಬರೆಯಿಸಿ ಚರರ ಕೂಡ ಕಳುಹಿದನು. ಪಂಪಾವಿರೂಪಾಕ್ಷಾಲಯದಿಂದ ಬಂದ ಶ್ರೀಮುಖದಲ್ಲಿ "ಈಶ್ವರ ಸಂವತ್ಸರದ ಮಾರ್ಗಶಿರ ದಶಮೀ ಸೋಮವಾರ (ಕ್ರಿಸ್ತಾಬ್ದ ೧೨೧೭) ಮಧ್ಯಾಹ್ನಸಮಯದ ನೈವೇದ್ಯಕಾಲದಲ್ಲಿ ಪರದೆಯ ಹಿಂದಿರಿಸಿದ ಧೂಪಾರತಿಯ ಸ್ಪರ್ಶದಿಂದ ಆತೆರೆಯು ಉರಿಯಹತ್ತಿತು. ಆಗ ನಮ್ಮ ಮಗ ಹರಿಹರನು ಬಂದು ಆರಿಸಿ ಹೋದ ಸಂಗತಿಯನ್ನು ನಮ್ಮ ಪೂಜಾರಿಗಳು ಕಣ್ಣಾರೆ ಕಂಡಿರುವರು. ಆ ಸಂಗತಿಯನ್ನು ಪ್ರತ್ಯಕ್ಷವಾಗಿ ಹೇಳಲು ಚಾಮರದ ವಿಶ್ವಶಂಕರಭಟ್ಟನನ್ನು ಕಳುಹಿದ್ದೇವೆ."

ಭೂವರಂ ಬಲ್ಲಾಳರಾಯಂಗೆ ಶ್ರೀಮುಖಂ ।
ಪಾವನೇಶ್ವರವತ್ಸರದ ಮಾರ್ಗಶಿರ ದಶ- ।
ಮೀವಿಧುವಾಸರದೊಳು ಮಧ್ಯಾಹ್ನದವಸರದ ನೈವೇದ್ಯಕಾಲದಲ್ಲಿ ॥೫೮

---

೨೯. ಅದೇಗ್ರಂಥ ಸಂಧಿ ೧೪ ಪದ್ಯ ೫೩. ೩೦. ರಾಘವಾಂಕಚಾರಿತ್ರ ಸಂಧಿ ೧೪.

ತೆರೆಯ ಮರೆಯೊಳು ಸಮರ್ಪಿಸಿದ ಧೂಪಾರತಿಯ ।
ನಿರಸಲ್ತದಂಗಾರಸಂಸ್ಪರ್ಶನದಿ ತಿರ- ।
ಸ್ಕರಣಿ ಬೇವುತ್ತಿರಲ್ಕಾಸಮಯದೊಳಗೆಮ್ಮ ಸುತ ಹರಿಹರಂ ನಂದಿಸಿ॥
ಪೊರಮೊಟ್ಟು ಪೋದುದಂ ಪೂಜಕರ್ಕಂಡರಿಃ- ।
ತೆರನ ನಿನಗರಿಪುವೊಡೆ ಚಾಮರದ ವಿಶ್ವಶಂ- ।
ಕರಭಟ್ಟನಂ ಕಳುಹಿದೆವೆನುತ್ತೆ ಕರಣಿಕಂ [೩೧] ಶ್ರೀಮುಖವನೊಲಿ-
ದೋದಿದಂ ॥೫೮॥

ಈ ಪವಾಡವು ನಿಜವಾಗಿರಬಹುದೋ ಎಂಬ ಆಕ್ಷೇಪಣೆಯ ವಿವೇಚನೆಯನ್ನು ಬದಿಗಿರಿಸಿ ಅದರ ಕಾರಣವನ್ನು ಶೋಧಿಸಿ ಅದಕ್ಕೆ ವ್ಯಾವಹಾರಿಕ ರೂಪವನ್ನು ಕೊಡಲು ಯತ್ನಿಸುತ್ತೇವೆ. ಬಲ್ಲಾಳನ ಆಸ್ಥಾನದಿಂದ ಹರಿಹರನು ಹಂಪೆಗೆ ಬಂದ ದಿನವೇ ಕಾಕತಾಲೀಯನ್ಯಾಯದಿಂದ ತೆರೆಯು ಉರಿದಿರಬೇಕು; ಮತ್ತು ಅವನು ಅದನ್ನು ಕೂಡಲೇ ಆರಿಸಿರಬೇಕು. "ಹರಿಹರನು ಯೋಗಿಯು. ತೆರೆಯು ಉರಿಯುವ ಸಮಯವನ್ನು ತನ್ನ ಯೋಗದೃಷ್ಟಿಯಿಂದ ಕಂಡುಹಿಡಿದು ಆಕಾಲಕ್ಕೆ ಸರಿಯಾಗಿ ಬಂದು ಬಿಟ್ಟನು" ಎಂದು ಭಾವಿಕರು ಬಗೆದು ಹರೀಶ್ವರನ ಆಕೃತಿಗೆ ಪವಾಡದ ರೂಪುಕೊಟ್ಟರು. ಆ ಸಂಗತಿಗೂ ಆ ದಿನಕ್ಕೂ ಹೀಗೆ ಮಹತ್ವ ಬಂದು ಸಿದ್ಧನಂಜೇಶನ ವರೆಗೆ ಪರಂಪರೆಯಿಂದ ಈಪವಾಡದ ಕಥೆಯು ಬಂತು; ಮತ್ತು ಅವನು ಅದನ್ನು ರಾಘವಾಂಕಚಾರಿತ್ರೆಯಲ್ಲಿ ಹೇಳಿದನು. ಈಸಂಗತಿಯು ನಡೆದು ಹೋದ ದಿನವನ್ನು ಹೇಳುವಾಗ ಪಕ್ಷವು ಮಾತ್ರ ಬಿಟ್ಟುಹೋಗಿದೆ. ಕಾಲಾಂತರದಿಂದ ಅದು ಮರೆತು ಹೋಗಿರಬಹುದು. ಇಲ್ಲಿ ಉದಹರಿಸಿದ ಸಂಗತಿಗೂ ಪದ್ಮರಾಜಪುರಾಣದೊಳಗಿನ ಸಂಗತಿಗೂ ಕೆಲಮಟ್ಟಿಗೆ ವ್ಯತ್ಯಾಸವಿದೆ. ಇಲ್ಲಿ ತೆರೆಯುರಿದ ದಿನವು ಸೋಮವಾರವೆಂದಿದೆ; ಅಲ್ಲಿ ಅದು ರವಿವಾರವೆಂದಿದೆ. ಇಲ್ಲಿ ಧೂಪಾರತಿಯ ಸೆಕೆ ತಗಲಿ ತೆರೆಯು ಉರಿಯಿತೆಂದಿದೆ; ಅಲ್ಲಿ ಆರತಿಯ ಜ್ವಾಲೆ ತಗಲಿ ತೆರೆಯುರಿಯಿತೆಂದಿದೆ. ಇಲ್ಲಿ ಶಕೆ-ಸಂವತ್ಸರ-ತಿಂಗಳು-ತಿಥಿ-ವಾರಗಳು ಕೊಡಲಾಗಿವೆ; ಅಲ್ಲಿ ಹೋದ ರವಿವಾರ ಎಂದು ಮಾತ್ರ ಹೇಳಲಾಗಿದೆ.

---

೩೧. ಅದೇಗ್ರಂಥ ಸಧಿ ೧೪.

. . . ಹೋದ ರವಿವಾರಮಧ್ಯಾಹ್ನದವಸರದೊಳೊಲವಿಂ |
ಇಂದುಜೂಟಂಗಾರತಿಯನೆತ್ತುತಿರೆಯದರ |
ಹೆಂದದಾಜ್ವಾಲೆಯಾವರಿಸಿ ಬೇವಲ್ಲಿಯೋ- |
ರ್ವಂ ದಯಾರಸಭರಿತಲೋಚನಂ ದಾಕ್ಷಿಣ್ಯವಿಲಸಿತಮುಖಂ ಸುಶೀಲಂ || ೧೮

ಸಾತ್ವಿಕೋದಯಶರೀರಂ ತನ್ನ |
ಪೆಸರಂ ಬೆಸಗೊಳಲ್ಕೆ ಹರಿಗನೆನುತುಂ ಕರದ |
ಮಿಸುಪೋಲೆಕಂಠವಂ ಬಿಸುಟದನೊರಸಿಪೋದನೀಯೆಲ್ಲರೀಕ್ಷಿಪಂತೆ[೨೨] || ೧೯

ಹೀಗೆ ಪರಂಪರಾಗತವಾದ ಕಥೆಗೆ ಪದ್ಮಣಾಂಕನು ಅಷ್ಟು ಗಮನಕೊಟ್ಟಿಲ್ಲೆಂದು ತೋರುತ್ತದೆ.

ಇಷ್ಟಾದ ಮೇಲೆ ಹರಿಹರನು ಅಲ್ಲಿ ನಿಲ್ಲದೆ ಹಂಪೆಗೆ ಹೋದನೆಂದು ಪದ್ಮರಾಜ ಪುರಾಣದಲ್ಲಿ ಹೇಳಿದೆ:

. . . . . . ಎಲೆ |
ಮನುಜೇಶ, ಕೇಳಿಂದು ಮೊದಲಾಗಿ ಸಕಲದೇ- |
ವ ನಿಜೇಶಸೇವೆಯಲ್ಲದೆ ಮನುಜಸೇವೆಯಗ್ರಾಹ್ಯಮಿದು ಭಾಷೆಯೆನುತೆ ||
ಎನಿತೊಡಂಬಡಿಸಿದೊಡಮೊಪ್ಪದಲ್ಲಿಂ ತಳರ್ದು |
ಮನೆಗೆಯ್ದಿ ನೃಪನೊಡವೆಯಾಗಿರ್ದುದಂ ಬಿಟ್ಟು |
ತನಗೆ ಸಲ್ವೊಡವೆಯಂ ಭಕ್ತತತಿಗಾದಾಘಾನಂಗೆಯ್ದು ವೈರಾಗ್ಯದಿಂ || ೨೦||
ವರಪದ್ಮಣಾಮಾತ್ಯಪುಂಗವಾದ್ಯಖಿಲಶಿವ- |
ಶರಣಸಂತತಿಗೆ ಭಯಭಕ್ತಿಯಿಂ ಮೆಯ್ಯಿಕ್ಕಿ |
ಕರುಣಮಂ ಪಡೆದು ಕಳುಹಿಸಿಕೊಂಡು ಪಂಪಾಪುರಾಭಿಮುಖನಾಗಿ-
[೨೩]ತಳರ್ದುರ್ || ೨೧

ವೀರಬಲ್ಲಾಳನು ಹರಿಯರಸನ ಶಿವಸರ್ವೋತ್ತಮನೆಂಬ ದೃಢವಿಶ್ವಾಸವನ್ನೂ ಪಂಪಾ ವಿರೂಪಾಕ್ಷನ ಮೇಲಿನ ಭಕ್ತಿಯನ್ನೂ ಕಂಡು ಆತನನ್ನು ಹಂಪೆಗೆ ಕಳುಹಿಸಿದನೆಂದು ರಾಘವಾಂಕಚಾರಿತ್ರದಲ್ಲಿ ಹೇಳಿದೆ. ವ್ಯತ್ಯಾಸವು ಹೀಗೆ

---

೨೨. ಪದ್ಮರಾಜಪುರಾಣ ಸಂಧಿ ೫. ೨೩. ಪದ್ಮರಾಜಪುರಾಣ ಸಂಧಿ ೫.

ಕಂಡುಬಂದರೂ ಹರಿಹರನು ಹಂಪೆಗೆ ಹೋದನೆಂಬ ವಿಷಯದಲ್ಲಿ ಎಲ್ಲ ಗ್ರಂಥಗಳು ಏಕಮುಖವಾಗಿವೆ.

ಹಂಪೆಗೆ ಹೋಗುವಾಗ ದಾರಿಯಲ್ಲಿ ಆತನಿಗೆ ಶ್ರೀವೈಷ್ಣವರಿಂದ ಉಪಸರ್ಗವುಂಟಾಯಿತೆಂದೂ, ದೈವೀಸಾಮರ್ಥ್ಯದಿಂದ ಆವೈಷ್ಣವರಿಗೆ ಶಿಕ್ಷೆಯಾಯಿತೆಂದೂ ರಾಘವಾಂಕಚರಿತೆಯಲ್ಲಿ ಹೇಳಿದೆ. ಮಾರ್ಗಕ್ರಮಿಸುತ್ತ ಹರಿಹರಕ್ಕೆ ಬಂದ ಮೇಲೆ ಅಲ್ಲಿಯ ಹರಿಹರೇಶ್ವರನ ಗುಡಿಯಲ್ಲಿ ಪಿಂಗಲಮುನಿಯ ಶಾಪದಿಂದ ಬ್ರಹ್ಮರಾಕ್ಷಸನಾಗಿದ್ದ ಸುಮುಖನೆಂಬ ಗಂಧರ್ವನು ಆತನ ದರ್ಶನದಿಂದ ಪೂರ್ವರೂಪವನ್ನು ತಾಳಿ ನಮಿಸಿ ಬೀಳ್ಕೊಂಡು ಹೋದನು. ಈ ಪವಾಡದ ಅರ್ಥವೇನೆಂದರೆ- ಹರಿಹರೇಶನ ಗುಡಿಯನ್ನು ರಾತ್ರಿ ಪ್ರವೇಶಿಸಲು ಯಾರಿಗೂ ಧೈರ್ಯವಿರಲಿಲ್ಲ. ಅಲ್ಲಿ ಬ್ರಹ್ಮರಾಕ್ಷಸನಿರುವನೆಂದು ಎಲ್ಲರೂ ನಂಬಿದ್ದರು. ಹರಿಹರನು ರಾತ್ರಿ ಅಲ್ಲಿ ಉಳಿದುಕೊಂಡು ಮರುದಿನ ಸುಖವಾಗಿ ಪ್ರಯಾಣವಾಗುತ್ತಿದ್ದುದನ್ನು ಕಂಡು ಈಯೋಗಿಯ ಸಾಮರ್ಥ್ಯದಿಂದಲೇ ಆ ಬ್ರಹ್ಮರಾಕ್ಷಸನು ಗಂಧರ್ವನಾಗಿ ಹೋದನೆಂದು ಜನರು ಭಾವಿಸಿದರು.

ಅಲ್ಲಿಂದ ಹೊರಟು ಹರಿಹರನು ಪಯಣಗತಿಯಿಂದ ಹಂಪೆಯನ್ನು ಸಮೀಪಿಸಲು ಪಂಪಾಪತಿಯೂ (ವಿರೂಪಾಕ್ಷನು) ತನ್ನ ಸೇವೆಯೊಳಗಿರುವ ಎಪ್ಪತ್ತೆರಡು ತೆರದವರಿಗೆ ಒಂದೇ ತೆರದ ಸ್ವಪ್ನದಲ್ಲಿ " ನನ್ನ ಮಗನಾದ ಹರಿದೇವನು ಬರುತ್ತಿರುವನು. ಅವನನ್ನು ಎದುರುಗೊಳ್ಳಬೇಕು," ಎಂದುಹೇಳಿ ತನ್ನ ಪಲ್ಲಕ್ಕಿಯನ್ನು ಕಳುಹಿದನು. ಅವರೆಲ್ಲರೂ ಅದರಂತೆ ಬರಲು

. . . . . . . ಶಿವಶಿವ
ಮಹೇಶನಿಂತೆನ್ನ ನಿಮ್ಮೊಳು ದೂರಿದನೆಯುಕಟೆನುತ್ತಿತ್ತ ಶ್ರೀಮುಖವನು॥
ಶ್ರೀಶಿರದೊಳಾಂತೋದಿಕೊಂಡು ಪಲ್ಲಕ್ಕಿಯೊಳು ।
ಪೂಸರಂಗಳ ಪೊದಿಸಿ ನಲಿದಿಟ್ಟು ಪೊತ್ತು ಪಂ- ।
ಪಾಶತಕಮಂ ಮಾರ್ಗದೊಳು ಪೇಳುತಂ ಬಂದನಾ ಸುಧೀರ-
[೩೪]ಹರಿಹರಂ ॥೮೧॥

೩೪. ರಾಘವಾಂಕಚಾರಿತ್ರ ಸಂಧಿ ೧೪.

ಹರಿಹರನು ಹಂಪೆಗೆ ತಿರುಗಿ ಬಂದ ಕೂಡಲೆ ಪಂಪಾಶತಕವನ್ನು ರಚಿಸಿದ ನೆಂದು ಇಲ್ಲಿ ಹೇಳಲಾಯಿತು. ಅಂದರೆ ಪಂಪಾಶತಕದ ಕಾಲವು ೧೨೧೬ ಎಂದಂತಾಯಿತು. ಭಾರತೀಪ್ರಿಯರ ಪಂಪಾಶತಕದ ಮೇಲಿನ ಲೇಖನವು ಮುಂದೆ ಈ ಪುಸ್ತಕದಲ್ಲಿ ಬಂದಿದೆ.

ಹರಿಹರನು ವಿರುಪಾಕ್ಷನ ಗುಡಿಗೆ ಬಂದು ಆ ದೇವದರ್ಶನವನ್ನು ತೆಗೆದು ಕೊಂಡು ಸ್ತುತಿಸಿ ಸಂತೋಷದಿಂದಿರಲು ದೇವಾಲಯದ ಅಧ್ಯಕ್ಷರು ನಾಗನಾಥನ ಪುರೋವರ್ತಿಯಾದ ವಾಹನಗೃಹವನ್ನು ತೆರವುಮಾಡಿ ಮಠವೆಂದು ಹರಿಹರನಿಗೆ ಕೊಟ್ಟರು. ಆ ಮನೆಯಲ್ಲಿ ಜನಮೇಜಯನು ಬ್ರಹ್ಮರಾಕ್ಷಸನಾಗಿ ಪ್ರವೇಶಿಸಿದ ಮಾನವರನ್ನು ನುಂಗುತ್ತಿದ್ದನು. ಹರಿಹರನು ಆ ಗೃಹವನ್ನು ಪ್ರವೇಶಿಸಿದ ಮೇಲೆ ಅದಕ್ಕೆ ಆಹಾರವಿಲ್ಲದಂತಾಯಿತು. ಆದುದರಿಂದ ಒಂದು ರಾತ್ರಿ ಅದು ಘೋರವಾಗಿ ಅಳುತ್ತಿರುವುದನ್ನು ಹರಿಹರನು ಕೇಳಿ, ಅದರ ಸಮೀಪಕ್ಕೆ ಹೋಗಿ, ಎಲ್ಲ ಸಂಗತಿಗಳನ್ನು ವಿಚಾರಿಸಿ, 'ನೀನಂಜಬೇಡ, ನಿನಗೆ ಐಕ್ಯವನ್ನುಂಟುಮಾಡಿಸುವೆನು, ಮಂಟಪದಲ್ಲಿ ಮನೆಕಟ್ಟಿಕೊಂಡು ಶಿವಭಕ್ತರಿಗಂಜುತ್ತ ದುಷ್ಟರನ್ನು ಬಿಡದೆ ಕಾದುಕೊಂಡಿರು' ಎಂದು ಆಜ್ಞೆಯಿತ್ತು ಆ ಬ್ರಹ್ಮರಾಕ್ಷಸನನ್ನು ಸೇವೆಗಿಟ್ಟುಕೊಂಡನು.

ಎನೆ ಸರ್ವಭೂತಹಿತಕರ ಹರೀಶಂ ತನ್ನ ।
ಮನದಲ್ಲಿ ಕೃಪೆಹುಟ್ಟೆ ನೀನಂಜದಿರು ಪಂಪೆ- ।
ಯಿನೆಯನಂ ಬೆರಸುವಾಗಂ ಮುನ್ನ ನಿನಗೈಕ್ಯಮಂ ಕುಡುಸುವೆಂ ಮಠದೊಳು॥
ಮನೆಗಟ್ಟೆ ಶಿವಭಕ್ತ ತತಿಗಂಜುತಂ ದುಷ್ಟ- ।
ಜನರಿಲ್ಲಿ ಪೊಗದಂತೆ ಕಾಪಾಗಿ ನೆಲಿಸೆನು- ।
ತ್ತನಘಂ ನಿರವಿಸೆ ಕೈಕೊಂಡಿರ್ದನಾಬ್ರಹ್ಮರಾಕ್ಷಸಂ[೩೫] ಭೃತ್ಯನಾಗಿ॥ ೯೩

ಈ ಸಂಗತಿಯನ್ನು ಸಮಂಜಸವಾಗಿ ಹೀಗೆ ಹೇಳಬಹುದು. ಮನೆಗಳು ದೊಡ್ಡವಿದ್ದರೆ ಮತ್ತು ಅವುಗಳೊಳಗಿನ ಕುಟುಂಬಗಳು ನಿರ್ವಂಶವಾಗಿದ್ದರೆ ಅಲ್ಲಿ ಭೂತಗಳಿವೆಯೆಂದು ಹೇಳುವ ರೂಢಿಯು ಈಗಲೂ ಅಲ್ಲಲ್ಲಿ ಕಂಡುಬರುತ್ತಿದೆ. ಯೋಗಿಗಳನ್ನೂ, ಶರಣರನ್ನೂ, ಸನ್ಯಾಸಿಗಳನ್ನೂ, ಇಂತಹ ಮನೆಗಳಲ್ಲಿರಿಸಿದ

೩೫. ರಾಘವಾಂಕಚಾರಿತ್ರ ಸಂಧಿ ೧೪.

ಅನೇಕದಂತಕಥೆಗಳು ಪರಂಪರೆಯಿಂದ ಬಂದಿವೆ. ಆದುದರಿಂದ ಅಂತಹದೊಂದು ಕತೆಯು ಹರಿಹರಚರಿತ್ರೆಯಲ್ಲಿ ಅಡಕವಾಗಿದ್ದರೆ ಅದರಲ್ಲಿ ಆಶ್ಚರ್ಯವೇನಿದೆ ? ಇಂತಹ ಕಥೆಗಳು ಹರೀಶ್ವರನ ವಿಷಯವಾಗಿ ಭಾವಿಕರಲ್ಲಿ ಭಕ್ತಿಯನ್ನು ದೃಢೀಕರಿಸುತ್ತವೆ.

ಹಂಪೆಯಲ್ಲಿ ತನ್ನಿಚ್ಛಾನುಸಾರವಾಗಿ ವಿರೂಪಾಕ್ಷನನ್ನು ಪೂಜಿಸುತ್ತಿರುವಾಗ ಆತನು ಪುರಾತನರ ಮತ್ತು ಶರಣರ ರಗಳೆಗಳನ್ನು ರಚಿಸಿದನು 'ತನಗೆ ಶ್ರೀವಿರೂಪಾಕ್ಷನೊರೆದಂತೆ ಗಣಸಂತತಿಯ ಕಥೆಗಳಂ ರಘಟಾಪ್ರಬಂಧಂಗಳಿಂ ರಚಿಸು[೩೬]' ಎಂದು ಆಜ್ಞಾಪಿಸಿದಂತೆ ಅವುಗಳನ್ನು ರಚಿಸುತ್ತಿರುವಾಗ ಅವುಗಳ ಖ್ಯಾತಿಯು ಕರ್ನಾಟಕವನ್ನು ವ್ಯಾಪಿಸಿಕೊಂಡು ತೆಲುಗು ಸೀಮೆಯನ್ನು ಮುಟ್ಟಿತು. ಆದೇಶದಲ್ಲಿನ 'ತ್ಯಾಗರಾಜನ ಸೇವೆಯ ಸಾದರದ ನಾಗವಾಸದ ಮೇಳದೊಡತಿ ಮಾದೇವಿ ನಂಬಿಯಣ್ಣನ ರಗಳೆಯಂ ಕೇಳ್ದು ಮೋದದಿಂದದನುಸುರ್ದ ಹರಿಹರನ ನೋಳ್ಪೆನೆಂದಾಕ್ಷಣವೆ [೩೭]ಪಂಪೆಗೆಯ್ದಿ' ಅವನನ್ನು ಕಂಡು 'ವರಕುಮಾರನೆನಲ್ಕೆ ಬಯಸಿರ್ದ ತೆರನೊಂದು ಯೀಪುರುಷನಿರವು ಬೇರೊಂದು ಪೋರ್ದಿರಲೆಳಸಿ ಬಂದೆನಿನ್ನಾದುದಾಗಲಿ ಯೀತನೆ ಯೆನಗೆ ಗತಿಯೆನುತ್ತೆ[೩೮]' ಮನದಲ್ಲಿ ನಿಶ್ಚೈಸಿ ಆತನನ್ನು ಸ್ತುತಿಸಹತ್ತಿದಳು. ಸಜ್ಜನರ ಸ್ಥಿತಿಗತಿಯೇ ಬೇರೆ. ಪರುಷವನ್ನು ಮುಟ್ಟಿದ ಕೀಳುಧಾತುವು ಬಂಗಾರವಾಗುವಂತೆ ಅವರ ಗುಣ. ಕಾಮುಲಂಪಟೆಯಾಗಿ ಬಂದ ಮಾದೇವಿಯು ಹರಿಹರನ ರೂಪವನ್ನು ನೋಡಿ ವೈರಾಗ್ಯಪರಳಾದಳು. 'ಅವಳನ್ನು ಪಾವನೆಯ ಮಾಡುವೆನೆಂದು ಮಠ ವಿರೂಪಾಕ್ಷ-ರಾಜಾಂಗಣವನುಡುಗಿಕೊಂಡಿರುವಂತೆ ಆಜ್ಞೆಮಾಡಿದನು[೩೯].' ಅವಳು ಆತನ ಆಜ್ಞೆಯ ಮೇರೆಗೆ ನಡೆಯುತ್ತಿದ್ದಳು. ಈಕಥೆಯಲ್ಲಿ ಹರಿಹರನ ಜಿತೇಂದ್ರಿಯತ್ವಕ್ಕೆ ಮಹತ್ವಕೊಡಲಾಗಿದೆ.

ರಗಳೆಗಳನ್ನು ರಚಿಸುತ್ತ ಕಾಲಕಳೆಯುತ್ತಿರುವಾಗ ಒಂದು ದಿನ ಹರಿಹರನಿಗೆ ಶೀತಜ್ವರವು ಹಿಡಿಯಿತು. ಅದಕ್ಕೆ ಅವರು ಮಾಡಿದುದು ರಾಕ್ಷಸೀ ಉಪಾಯವು. ತುಂಗಭದ್ರೆಗೆ ಹೋಗಿ, ನದಿಯಲ್ಲಿ ಕುಳಿತು ಸ್ನಾನಮಾಡಿ,

---

೩೬. ರಾಘವಾಂಕ ಚಾರಿತ್ರ ಸಂಧಿ ೧೪, ಪದ್ಯ ೯೪. ೩೭. ಅದೇಗ್ರಂಥ ಸಂಧಿ ೧೪ ಪದ್ಯ ೯೫. ೩೮. ಅದೇಗ್ರಂಥ ಸಂಧಿ ೧೪ ಪದ್ಯ ೯೭. ೩೯. ಅದೇಗ್ರಂಥ, ಅದೇ ಸಂಧಿ, ಪದ್ಯ ೧೦೨.

ಅಲ್ಲಿಯೇ ಲಿಂಗಪೂಜೆಮಾಡುತ್ತ ಕುಳಿತುಕೊಂಡು ಮೂರು ತಿಂಗಳು ಕಳೆದರು. ಶೀತಜ್ವರವು ಬಿಟ್ಟುಹೋಯಿತು.[೪೦] ತುಂಗಭದ್ರೆಯ ಪಂಪಾತೀರವು ಶೀತಜ್ವರದ ಮೂಲಕ ಪ್ರಸಿದ್ಧವಾಗಿದೆ.

ಒಂದು ಶನಿವಾರದ ದಿನ ವಿರೂಪಾಕ್ಷನ ಗುಡಿಯಲ್ಲಿ ಬ್ರಾಹ್ಮಣರು ನೆರೆದಿದ್ದರು. ಅದೇ ಸಮಯದಲ್ಲಿ ಹರಿಹರನು ಅಲ್ಲಿಗೆ ಬಂದು ವೃಷಭನಿಗೆ ನಮಸ್ಕರಿಸಿದಾಗ ತಲೆಯ ಮೇಲಿನ ರುದ್ರಾಕ್ಷಿಭೂಷಿತಟೊಪ್ಪಿಗೆಯು ಕೆಳಕ್ಕೆ ಬಿದ್ದಿತು. ಅದನ್ನು ಕಂಡು ಬ್ರಾಹ್ಮಣರು ಮುಗುಳುನಗೆ ನಗುತ್ತ 'ಮುಡಿಗೆಯ್ಯುಂ ಸಹಿಸನೆ ಹರಿಯರಸನೇತಕಿಕ್ಕಿದನೊಯೆಂದು ತಮ್ಮೊಳಿನಲಿಂತೆದನು. ಪಂಪಾವಿರೂಪಾಕ್ಷನೆ ಪರಬ್ರಹ್ಮವೆಂದಿಕ್ಕಿದೆಂ ಮುಡಿಗೆಯ್ಯುಂ[೪೧] ತೆಗೆವರಿಲ್ಲಿಳೆಯೊಳು' ಎಂದು ಮುಡಿಯ ಅಷ್ಟಕವನ್ನು ರಚಿಸಿದನು. ಸಿದ್ಧನಂಜೇಶನು ಈ ಪದ್ಯಗಳಿಗೆ ಮೆಚ್ಚಿ ತನ್ನ ರಾಘವಾಂಕಚಾರಿತ್ರದಲ್ಲಿ ಅವುಗಳನ್ನನುಸರಿಸಿ ಎಂಟು ಪದ್ಯಗಳನ್ನು ರಚಿಸಿದ್ದಾನೆ ಅವುಗಳಲ್ಲಿ ಒಂದನ್ನು ಇಲ್ಲಿ ಉದಹರಿಸುತ್ತೇವೆ.

ಮುಡಿಗೆ ಗುರುವಿಂ ಪರಾತ್ಪರವಿಲ್ಲವೆಂಬುದಕೆ |
ಮುಡಿಗೆ ಜಂಗಮವು ಸಾಕ್ಷಾತ್ಶಂಭುವೆಂಬುದಕೆ |
ಮುಡಿಗೆ ಹರಿವಿಧಿಸುರೇಂದ್ರಾದಿಗಳು ಪಶುಗಳೆಂಬುವಕೆ ತತ್ಪಶುನಿಕರವ ||
ಮುಡಿಗೆ ಮಾಯಾಪಾಶದಿಂ ತಿರುಗಿಸುವುದಕ್ಕೆ |
ಮುಡಿಗೆ ತತ್ಪತಿ ಶ್ರೀವಿರೂಪಾಕ್ಷನೆಂಬುದಕೆ |
ಮುಡಿಗೆಯಿದ ತಪ್ಪದೆತ್ತುವರೊಳರೆ[೪೨]ದೇವಮನುಜಾಸುರರೊಳೆಂದುಸು-
ರ್ದನು || ೧೦೯ ||

ಈ ಅಷ್ಟಕದಲ್ಲಿ ಅನುಪ್ರಾಸ-ಭಾಷಾಸೌಂದರ್ಯ-ಬಂಧಗೌರವಗಳೂ ಶಕ್ತಿವಿಶಿಷ್ಟಾದ್ವೈತ ತತ್ವಗಳೂ ತುಂಬಿಕೊಂಡು ಗಂಭೀರಕಾವ್ಯವಾಗಿದೆ. ಸ್ತೋತ್ರ ಸಮಯದಲ್ಲಿ ನಿತ್ಯವೂ ಹೇಳಲು ಯೋಗ್ಯವಾದ ಅಷ್ಟಕವಿದು. ಹರಿಹರದೇವನು ಹೇಳಿದ ಈ ಅಷ್ಟಕವನ್ನು ಕೇಳಿ ಬ್ರಾಹ್ಮಣರು ಸ್ತಂಭಿತರಾದರು. ಅವರ ಬೆರಳುಗಳು ಮುರುಂಟಿದುವು. ಅವರು ಹರೀಶನಿಗೆ ಶರಣಾಗತರಾಗಿ

---

೪೦. ಅದೇಗ್ರಂಥ, ಅದೇಸಂಧಿ, ಪದ್ಯ ೧೦೩–೧೦೫. ೪೧. ರಾಘವಾಂಕಚಾರಿತ್ರ, ಸಂಧಿ, ೧೪ ಪದ್ಯ, ೧೦೭. ೪೨. ಅದೇಗ್ರಂಥ, ಅದೇಸಂಧಿ,

ಪಶ್ಚಾತ್ತಾಪಪಟ್ಟರು. ಆತನ ದಯೆಯಿಂದ ಅವರು ಮತ್ತೆ ಸ್ವಾಸ್ಥ್ಯಹೊಂದಿದರು. ವಿರೂಪಾಕ್ಷನು ಪ್ರತ್ಯಕ್ಷನಾಗಿ ಬಂದು ಮುಡಿಗೆಯನ್ನು ಹರಿಹರನ ತಲೆಯ[೪೩] ಮೇಲಿಟ್ಟನು. ಈ ಕಥೆಯಿಂದ ಪಂಪಾವಿರೂಪಾಕ್ಷನ ಮೇಲಿನ ಹರಿಹರನ ಭಕ್ತಿಯು ಬ್ರಾಹ್ಮಣರನ್ನು ಸಹ ಕಣ್ಣುಕುಕ್ಕಿಸಿತೆಂಬ ಮಾತು ನಿಜವಾಗುತ್ತದೆ.

ಈಗ ಹರಿಹರದೇವನು ವೀರಶೈವಮತತತ್ವಗಳಲ್ಲಿ ಪ್ರವೀಣನಾಗಿ, ಶಿವಯೋಗಿಯಾಗಿ, ಸಾಮರಸ್ಯಸಂಪನ್ನನಾಗಿದ್ದನು. ಆತನ ಶರಣರಗಳೆಗಳಲ್ಲಿ ಅಲ್ಲಲ್ಲಿ ಆಆಶರಣರ ವಚನಗಳು ತುಸು ಹೆಚ್ಚುಕಡಿಮೆಯಾಗಿ ಉದ್ಧೃತವಾಗಿವೆ; ಷಟ್ಸ್ಥಲ ಅಷ್ಟಾವರಣಶಾಸ್ತ್ರಗಳು ಬಹಳ ಸೂಕ್ಷ್ಮವಾಗಿ ತೇಲಿಸಿ ಹೇಳಲಾಗಿವೆ. ಇದರ ಮೇಲಿಂದ ಧಾರ್ಮಿಕ ಮತ್ತು ಆಧ್ಯಾತ್ಮಿಕ ತತ್ವಗಳನ್ನು ಸ್ಫುಟವಾಗಿ ಹೇಳಬಾರದು, ಅವುಗಳನ್ನು ಗುರುಮುಖದಿಂದಲೇ ಪಡೆಯಬೇಕೆಂಬ ಅಭಿಪ್ರಾಯವು ಹರಿಹರನದಿರಬೇಕೆಂದು ತೋರುತ್ತದೆ. ಆದಯ್ಯನ ರಗಳೆ - ಪ್ರಭುದೇವರ ರಗಳೆ-ರೇವಣಸಿದ್ಧೇಶ್ವರ ರಗಳೆ-ಶಂಕರದಾಸಿಮಯ್ಯನ ರಗಳೆಗಳು ತೀರ ಸಣ್ಣವಾಗಿವೆ, ಮಹಾದೇವಿಯಕ್ಕನ ರಗಳೆಯು ಸುಮಾರು ದೊಡ್ಡದಾಗಿದೆ. ಬಸವರಾಜದೇವರ ರಗಳೆಯು ಮಾತ್ರ ಬಹು ದೊಡ್ಡದಾಗಿದೆ. ಅದನ್ನು ಇಷ್ಟು ವಿಸ್ತಾರವಾಗಿ ಬರೆದುದು ಆಸತ್ಪುರುಷರ ಮೇಲಿನ ಭಕ್ತಿಯಿಂದ. ಬಸವಣ್ಣನೂ ಭಕ್ತಿಭಂಡಾರಿಯು, ಹರಿಹರನೂ ಭಕ್ತಿಸಂಪನ್ನನು. ಇಬ್ಬರಲ್ಲಿಯೂ ಭಕ್ತಿಯು ಸಾಮಾನ್ಯವಾಗಿದ್ದುದರಿಂದ ಬಸವನು ಹರಿಹರನಿಗೆ ಅಚ್ಚುಮೆಚ್ಚಿನವನಾಗಿದ್ದಾನೆ. ಬಸವರಾಜದೇವರ ರಗಳೆಯು ೨೫ ಸ್ಥಲಗಳಲ್ಲಿ ನಿರೂಪಿತವಾಯಿತು; ಮತ್ತು ಅದನ್ನು ವಿರೂಪಾಕ್ಷನೆಡೆಗೆ ಒಯ್ಯಲು ಅವನು 'ಮಿಗಿಲಾದುದೆಂದು ತೆಗೆದುಕೊಂಡು [೪೪]ನೆರೆ ನುಂಗಿದಂ' ಎಂಬುದೊಂದು ದಂತಕಥೆಯು ಪ್ರಚಲಿತವಾಯಿತು. ಆ ಗ್ರಂಥವು ಪಂಪಾವಿರೂಪಾಕ್ಷನಿಗೂ ಒಪ್ಪಿತವಾಯಿತೆಂದು ಅದರ ಉತ್ಕೃಷ್ಟತೆಯನ್ನು ಈ ಕಥೆಯು ಸೂಚಿಸುತ್ತದೆಯೇ ಹೊರ್ತು ಪವಾಡವನ್ನಲ್ಲ. ದುರ್ದೈವದಿಂದ ಈ ಗ್ರಂಥವು ಅಪೂರ್ಣವಾಗಿ ದೊರೆಯುತ್ತದೆ. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಪ್ರಕಟಿಸಿದ

---

೪೩. ಅದೇಗ್ರಂಥ, ಅದೇಸಂಧಿ, ಪದ್ಯಗಳು, ೧೧೮-೧೧೯. ೪೪. ರಾಘವಾಂಕಚಾರಿತ್ರ ಸಂಧಿ, ೧೪ ಪದ್ಯ ೧೨೦.

ಗ್ರಂಥದಲ್ಲಿ ೧೩ನೆಯ ಸ್ಥಲವು ಅಪೂರ್ಣವಾಗಿದೆ. ರಾವಸಾಹೇಬ ಪಿ. ಜಿ. ಹಳಕಟ್ಟಿಯವರ ಗ್ರಂಥದಲ್ಲಿ ಈ ಸ್ಥಲದ ಮುಂದೆ ಕೆಲವುಭಾಗವಿದೆ. ಅದನ್ನು ಅವರು ಶಿವಾನುಭವದಲ್ಲಿ ಪ್ರಕಟಿಸಿರುವರು. ಅದು ೧೩ನೆಯ ಸ್ಥಲದ ಭಾಗವಾಗಿರದೆ ೨೫ನೆಯ ಸ್ಥಲದ ಭಾಗವಾಗಿರಬೇಕೆಂದು ತೋರುತ್ತದೆ. ಏಕೆಂದರೆ ಅದರಲ್ಲಿ

ಶಿವದ್ರೋಹಂ ಗೈದ ಬಿಜ್ಜಳನ ಕೊಲಿಸುತುಂ
ಭವಹರನ ಶರಣಸದ್ಗೋಷ್ಠಿಯಂ ಸಲಿಸುತುಂ
ಕಪ್ಪಡಿಯ ಸಂಗಮೇಶ್ವರನಲ್ಲಿಗೈತಂದು
. . . . . . . . . . .
ನೋಡುತಿರೆ ಭಕ್ತರೆಲ್ಲರ ಮುಂದೆ ಬಸವಣ್ಣ
. . . . . . . . . . .
ಸಂತತಂ ಹಂಪೆಯ ವಿರೂಪಾಕ್ಷನೊಪ್ಪಿದಂ

—: ಶ್ರೀಬಸವೇಶ್ವರಕಥನಂ [೪೫] ಸಮಾಪ್ತಂ :—

ಎಂದಿರುವುದರಿಂದ, ಮತ್ತು 'ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ'[೪೬] ಎಂದು ಸಂಗಮೇಶ್ವರನು ಜಂಗಮಾಕಾರನಾಗಿ ಬಂದು ಬಸವಣ್ಣನಿಗೆ ೧೩ನೆಯ ಸ್ಥಲದಲ್ಲಿ ಹೇಳಿದಾಗ ಅದಕ್ಕೆ ಉತ್ತರವಾಗಿ

ಸಿಂಗಲೀಯದು ಶರಣಗೋಷ್ಠಿ ಕೇಳೆನ್ನುವಂ
ಶರಣೊಕ್ಕುದರ ಸವಿ ಕೈಲಾಸದೊಳಗುಂಟೆ
ಇಲ್ಲಿಯ ಸುಖಂ ದೇವ ಅಲ್ಲಿಯುಳ್ಳಡೆ ಲೇಸು
ಅಲ್ಲೆನ್ನೆ ಈಗಳೇ ಕೊಂಡು ಹೋಹುದು ಲೇಸು
ಎಂದು ಬಿನ್ನೈಸೆ ಬಸವಂ ಬಾರಮುದನರಿದು [೪೭]

ಎಂದು ಹರೀಶನು ಹೇಳಿರುವಾಗ ಕೂಡಲೆ ಆತನು ಸಂಗಮೇಶ್ವರನಲ್ಲಿ ಐಕ್ಯವಾದನೆಂಮ ಅದೇ ಸ್ಥಲದಲ್ಲಿ ತಾನೇ ಹೇಳುವುದು ಸರಿಯಾಗಲಾರದು. ರಾವ

೪೫. ಶಿವಾನುಭವ, ಜುಲೈ ೧೯೩೦, ಪುಟ ೧೫೧-೧೫೨. ೪೬. ಬ, ರಾ, ದೇ, ರ, ಪ್ರೊ, ಟಿ, ಎಸ್, ವೆಂಕಣ್ಣಯ್ಯನವರ ಸಂಪಾದಿತ] ಪುಟ ೯೦. ೪೭, ಅದೇಗ್ರಂಥ ಅದೇ ಪುಟ.

ಸಾಹೇಬ ಹಳಕಟ್ಟಿಯವರಾದರೂ ತಮ್ಮ ಕೈಬರಹದ ಪ್ರತಿಯಲ್ಲಿ ಅಂತ್ಯಭಾಗ ವಿದೆಯೆಂದು ಹೇಳಿದ್ದಾರೆಯೇ ಹೊರತು ಅದು ಸಂಪೂರ್ಣವಾಗಿದೆಯೆಂದು ಹೇಳಿಲ್ಲ.

ಹರಿಹರನ ಚರಿತ್ರದ ಮುಂದಿನ ಭಾಗವು ರಾಘವಾಂಕಚಾರಿತ್ರದಲ್ಲಿಲ್ಲ. ಆತನ ಸ್ತುತಿಪರವಾದ ಕೆಳಗಿನ ಪದವೊಂದಿದೆ.

ರಾಗ-ನಾಟಿ ಕುಸುಮಷಟ್ಪದಿ.

ಆವನೆನಬಹುದು ಮೌಕ್ತಾವಗಳವಟ್ಟಿಹುದು ।
ಆವನೊಳಗಿಹುದುಕ ವಿತಾನುಭಾವ ॥
ಆವನೊಳಗಾಗಿ ಸಿದ್ಧಿಪುದು ಶಿವಕವಿತೆ ಹರಿ ।
ದೇವ ಕವಿಸಮಯಕಗ್ಗಳನೆನಿಪ ಬಿರುದು ॥ ಪಲ್ಲವಪದ ॥

ವರಕವಿಕರಂಡವಾ-। ಕ್ಕವಿಕುಲಕೆ ಮಾರ್ತಂಡ ।
ನರಕವಿಕುಲಾದ್ರಿಚಯಕುಲಿಶದಂಡ ।
ನಿರುತಕವಿನಿಕರವಿಜ । ಯದ ಗಂಡ ಧರಣಿಯೊಳು ।
ವಿರಚಿಸುವ ವಿಗಡಕವಿಶರಭಭೇರುಂಡಾ ॥ ೧ ॥

ವರ್ಣಕವಿತಾಧಾರ । ವಸ್ತುಕವಿವಿಸ್ತಾರ ।
ಕರ್ನಾಟಕಾದಿಕವಿತಾವಿಹಾರಾ ॥
ನನ್ನಿ ಮಿಗಿಲೆನಿಪ ನವ । ರಸಪೂರ್ಣಕಾವ್ಯಕವಿ ।
ಕರ್ಣಸುಸುಧಾಸಾರನಸಮಧೀರಾ ॥ ೨ ॥

ನವರಸತರಂಗ ಶಿವ । ಕವಿಗಳೋತ್ತಂಗ ।
ಭುವನನುತತೇಜ ಕವಿಪಃಪತಂಗಾ ॥
ವಿವಿಧಗುಣವಿಸ್ತಾರ । ವಿಮಲಬುದ್ಧಿವಿಹಾರ ।
ಭುವನದೊಳು ಕವಿತಾಭುಜಂಗಿಭುಜಂಗಾ ॥ ೩ ॥

ತರ್ಕಕವಿಯೆದೆಗೊಂತ । ತರುಣಕವಿತಾಕಾಂತ ।
ಮೂರ್ಖಕವಿನಿಕರ ವೈಭವಜಯಂತಾ ।
ಸಕ್ಕದಕವಿತ್ವಸಿರಿವಂತ ಕವಿ-ಬಲವಂತ ।
ಮಿಕ್ಕುಳಿದ ಕವಿದಂತಿನಿಕರಚೌದಂತಾ ॥ ೪ ॥

ಸಾರದಾಂಗನೆಂಬೊಲ್ಮೆ | ಸತ್ಕಲೆಯ ಕಾದಲ್ಮೆ |
ವಾರಿಜಾಸನನ ಸಾಲಗೆಗೆ ನಲ್ಮೆ
ಧೀರಕವಿಪಂಪಾಪು | ರದ ವಿರೂಪಾಕ್ಷನ ಕು- |
ಮಾರ ಹರಿಯರಸಪೇವರ ಕೃತಿಯ ಬಲ್ಮೆ[೪೮]|| ೫ ||

ರಾಘವಾಂಕನು ತನ್ನ ಗ್ರಂಥಗಳನ್ನೆಲ್ಲ ರಚಿಸಿದ ಮೇಲೆ ಹರಿಹರನ ಹತ್ತಿರ ಶಿವೈಕ್ಯವನ್ನು ಬೇಡಿಕೊಳ್ಳಲು ಆತನು ಬೇಲೂರಲ್ಲಿರುವ ಕೆರೆಯ ಪದ್ಮರಸನನ್ನು ತೋರಿಸಿದನು. [೪೮A] ಆತನಿಂದ ರಾಘವಾಂಕನಿಗೆ ಶಿವೈಕ್ಯವಾಯಿತು. ಆತನ ಉತ್ತರಕ್ರಿಯೆಗಳ ವಿಷಯವಾಗಿ ಬ್ರಾಹ್ಮಣರಿಗೂ, ವೀರಶೈವರಿಗೂ ವ್ಯಾಜ್ಯ ವುಂಟಾಯಿತೆಂದು ರಾಘವಾಂಕಚಾರಿತ್ರದಲ್ಲಿ ಹೇಳಿದೆ. ಈವಿಷಯವೂ ಹರಿಹರರಾಘವಾಂಕರ ಆರಾಧ್ಯಬ್ರಾಹ್ಮಣ್ಯವನ್ನು ಸೂಚಿಸುತ್ತಿದೆ. ರಾವಸಾಹೇಬ ಪಿ. ಜಿ. ಹಳಕಟ್ಟಿಯವರೂ ಇದೇ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಾರೆ.

ಕೆರೆಯ ಪದ್ಮರಸನು ಕಾಶಿಗೆ ಹೋಗುವ ಪೂರ್ವದಲ್ಲಿ ಹಂಪೆಗೆ ಹೋಗಿ, ಅಲ್ಲಿ ಹರೀಶ್ವರನನ್ನು ಕಂಡು 'ಉಮಾವರಂ ನಿಮ್ಮನಿಂದಿಗೆಂಟನೆಯ ದಿನಕೆ ತನ್ನೊಳ್ನೆರಪಲಿರ್ದಪಂ' ಎಂದು[೪೯] ಹರಿದೇವನನ್ನು ಪರಿಮಿತಕೆ ಕರೆದು ಹೇಳಿದನು. 'ಅಂತರಿಂ ನೀವೀ ಮಹಾಕಾವ್ಯಮಂ ತಡೆಯದನಿತರೊಳ್ಪಾರವೆಯ್ದಿಪುದು[೫೦]' ಎಂದೂ ಸೂಚಿಸಿದನು. ಈವಿಷಯವು ಈಪೂರ್ವದಲ್ಲಿಯೇ ಚರ್ಚಿತವಾಗಿದೆ. ಈಸಂಗತಿಯು ಮತ್ತೆ ಇಲ್ಲಿ ಬರಲು ಕಾರಣವೇನೆಂದರೆ ಅದು ಸೂಚಿಸುತ್ತಿರುವ ಕೆರೆಯಪದ್ಮರಸ--ಹರಿಹರ--ರಾಘವಾಂಕರ ಅಧ್ಯಾತ್ಮಿಕ ಸಂಬಂಧವು. ಕೆರೆಯ ಪದ್ಮರಸನ ಸೂಚನೆಯಂತೆ ಎಂಟು ದಿನಗಳಲ್ಲಿ ತನ್ನ ಗ್ರಂಥವನ್ನು ಮುಗಿಸಿ ಪಂಪಾವಿರೂಪಾಕ್ಷನಲ್ಲಿ ಅಡಗಿದನು.

. . . . . ಬಳಿಕ್ಕಾಯೆಂಟನೆಯ ದಿನದೊ |
ಳರರೇ ವಿರೂಪಾಕ್ಷನಂ ಯಜಿಸಿ ಸಮುಚಿತಸ್ತೋತ್ರಮಂ ಮಾಡಿ ಮೆಚ್ಚಿ ||೭೯||
ಕರುಣದಿಂ ತನ್ನುದರಮಂ ತೆರೆದು ಸರ್ವರ |

---

೪೮. ರಾಘವಾಂಕಚಾರಿತ್ರ, ಸಂಧಿ. ೧೪ ೧೩೨ನೆಯ ಪದ್ಯದ ಮುಂದಿನ ಪದ. ೪೮(A) ಅದೇಗ್ರಂಥ, ಸಂಧಿ. ೧೯ ಪದ್ಯಗಳು ೫; ೬, ೨೧. ೪೯. ಪದ್ಮರಾಜಪುರಾಣ, ಸಂ. ೧೩ ಪ. ೭೬. ೫೦. ಅದೇಗ್ರಂಥ, ಅದೇಸಂಧಿ. ಪದ್ಯ, ೨೮.

ಚ್ಚರಿವಟ್ಟುಘೇಯುಘೇಯೆನಲಡಂಗಿಸಿದನಾ- ।
ಪರಿಯೊಳಗುಳಿದ ನಾಲ್ಕುಲಿಂಗದೊಳ್ಕಾಣಿಸಿ ಹರೀಶ್ವರಂ ಮುಕ್ತಿಸತಿಯಂ ॥
ವರಿಸಿ ಸುಖಮಿರ್ದನಿತ್ತಲ್ . . . . . ೫೧ ॥ ೩೦

ರಾಘವಾಂಕದೇವನ ಸಮಾಧಿಯು ಬೇಲೂರಲ್ಲಿದೆಯೆಂದೂ, ಹರಿಹರನ ಸಮಾಧಿಯು ಎಲ್ಲಿಯೂ ಇಲ್ಲವೆಂದೂ ಕೀರ್ತನಕೇಸರಿ ಶ್ರೀ. ಶಿವಮೂರ್ತಿಸ್ವಾಮಿಗಳವರು ತಿಳಿಸುತ್ತಾರೆ. ಇದೊಂದು ವಿಷಾದದ ಸಂಗತಿ. ಅತ್ಯುದ್ದಾಮ ಶಿವಕವಿಯೂ, ಸಾಕ್ಷಾತ್-ಪಂಪಾವಿರೂಪಾಕ್ಷ ಸುತನೂ, ಭಕ್ತಭಂಡಾರಿಯೂ, ಶಿವಯೋಗಿಯೂ ಆದ ಹರಿಹರದೇವನ ಕುರುಹು ಹಂಪೆಯಲ್ಲಿಲ್ಲದಿರುವುದು ಆವಸಾಹಿತ್ಯಭಕ್ತನಿಗೆ ಅಸಮಾಧಾನವನ್ನುಂಟುಮಾಡದು ?

(ಹರಿಹರನ ಜೀವನ-ಸ್ವಭಾವ-ಗುಣವರ್ಣನೆಗಳು ಆತನ ಕಾವ್ಯಗಳಲ್ಲಿಯೇ ಅಡಕವಾಗಿವೆ.) ಆದುದರಿಂದ ಅವುಗಳನ್ನು ಬೇರೆಬೇರೆಯಾಗಿ ಹೇಳದೆ ಆಆಸಂದರ್ಭಗಳಲ್ಲಿ ಅವುಗಳನ್ನು ತೋರಿಸಲಾಗುವದು. ಹರಿಹರನು ಉದ್ದಾಮಕವಿಯೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಆತನ ಉದ್ದಾಮತೆಯು ಎಲ್ಲಿ ಹೇಗಿದೆ ಎಂಬುದನ್ನು ತಿಳಿಯುವದು ಅವಶ್ಯ. ಕವಿಯ ಕಾವ್ಯವು, ಶಿಲ್ಪಿಯ ಮೂರ್ತಿಯು, ಚಿತ್ರಕಾರನ ಚಿತ್ರವು, ಆಕಲೆಗಾರನಿಗೂ ಅವುಗಳನ್ನು ಕೇಳುವವರಿಗೂ ನೋಡುವವರಿಗೂ ಸರಿಯಾಗಿ ಆನಂದವನ್ನುಂಟುಮಾಡಿ ಆಆಕಲೆಗಾರರ ಬಗ್ಗೆ ಆದರಸಹಾನುಭೂತಿಗಳನ್ನು ಹುಟ್ಟಿಸುತ್ತವೆ. ಹೀಗೆ ಸ್ವಾಭಾವಿಕವಾಗಿ ಆಆಗುಣಗಳು ಅಂಕುರಿಸಬೇಕಾದರೆ ಕಾವ್ಯಗಳು, ಮೂರ್ತಿಗಳು, ಮತ್ತು ಚಿತ್ರಗಳು ಸ್ಫೂರ್ತಿ ಆವೇಶಗಳ ಪರಿಣಾಮವಾಗಿರಬೇಕು. ಈತತ್ವವು ಹರಿಹರನನ್ನು ಅನ್ವಯಿಸುವುದೇ ಎಂದು ಕೇಳಿದರೆ ಅಹುದು ಎಂದು ಉತ್ತರವು ಬರುತ್ತದೆ.

ಮಹಾಕಾವ್ಯಗಳನ್ನು ಚಂಪೂರೂಪವಾಗಿ ರಚಿಸುವುದು ಕವಿಗಳಿಗೆ ಭೂಷಣವೆಂಬುದೊಂದು ಗೃಹಿಕೆಯು ೧೨ನೆಯ ಶತಮಾನದ ಮಧ್ಯದ ವರೆಗೆ ರೂಢವಾಗಿತ್ತು. ಅದರಲ್ಲಿಯೂ ದನ್ನಸಂತಹರು ಖಂಡಕಾವ್ಯಗಳನ್ನು ಚಂಪೂರೂಪವಾಗಿ ಬರೆದುದುಂಟು. ಇಬು ದಕ್ಷಿಣ ಕರ್ಣಾಟಕದಲ್ಲಿದ್ದ ಕವಿಗಳ

೫೧. ಅದೇಗ್ರಂಥ, ಅದೇಸಂಧಿ

ಪದ್ಧತಿ. ಉತ್ತರದಲ್ಲಿಯೂ ಈ ಪದ್ಧತಿಯಿದ್ದರೂ ೧೨ನೆಯ ಶತಮಾನದ ಮಧ್ಯದಲ್ಲಿ ವಚನಕಾರರು ಆಧ್ಯಾತ್ಮಿಕ ವಿಷಯಗಳನ್ನು ವಚನ ರೂಪವಾಗಿ ಬರೆದು ಸಾಹಿತ್ಯದಲ್ಲಿ ಒಂದು ಕ್ರಾಂತಿಯನ್ನುಂಟುಮಾಡಿದರು. ಇದಕ್ಕಿಂತಲೂ ತುಸು ಭಿನ್ನವಾದ ಮತ್ತೊಂದು ಕ್ರಾಂತಿಯು ಸುಮಾರು ಐವತ್ತು ವರ್ಷಗಳ ತರುವಾಯ ದಕ್ಷಿಣದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಡೆಯಿತು. ಉತ್ತರದಲ್ಲಿ ವಚನಕಾರರಾಗಿ ಹೋದರೆ ದಕ್ಷಿಣದಲ್ಲಿ ರಗಳೆಷಟ್ಪದೀಕಾರರಾದರು. ಈಪೂರ್ವದಲ್ಲಿ ರಗಳೆಗಳಿರಲಿಲ್ಲವೆಂತಲ್ಲ. ಚಂಪೂಕಾರರು ತಮ್ಮ ಕಾವ್ಯಗಳಲ್ಲಿ ವೈವಿಧ್ಯಕ್ಕೆಂದು ರಗಳೆಗಳನ್ನು ಇಟ್ಟುಕೊಂಡಿದ್ದರು. ಆದರೆ ಹರಿಹರನಂತಹ ಕ್ರಾಂತಿಕಾರಕ ಕವಿಯು ಕಥಾಪ್ರಸಂಗವನ್ನು ಸುಲಭವಾಗಿ ಹೇಳಲು ರಗಳೆಗಳು ಹೆಚ್ಚು ಅನುಕೂಲವೆಂಬುದನ್ನು ಕಂಡು ಹಿಡಿದು ಆ ರೂಪದಿಂದಲೇ ಚರಿತ್ರೆಗಳನ್ನು ರಚಿಸಿದನು. ಕಥೆಯು ಅಥವಾ ಚರಿತ್ರವು ದೊಡ್ಡದಿದ್ದಾಗ ಮಾತ್ರ ಒಂದು ಸ್ಥಲವನ್ನು ರಗಳೆ ರೂಪವಾಗಿಯೂ ಮುಂದಿನದನ್ನು ಗದ್ಯರೂಪವಾಗಿಯೂ ರಚಿಸಿದನು. ಇದರಿಂದ ವೈವಿಧ್ಯ ಸ್ವಾರಸ್ಯಗಳು ಹೆಚ್ಚುತ್ತ ಹೋಗಿವೆ. ಕನ್ನಡಸಾಹಿತ್ಯದ ಈಕ್ರಾಂತಿಯಲ್ಲಿ ಮತ್ತೊಂದು ಗುಣವು ಕಂಡು ಬರುತ್ತದೆ. ಚಂಪೂಕಾವ್ಯಗಳು ನೇಮಿಚಂದನ ಅಭಿಪ್ರಾಯದ ಮೇರೆಗೆ ಪಂಡಿತರಿಗೆ ಮಾತ್ರ ತಿಳಿಯುವಂತಿದ್ದುವು. ರಗಳೆ ಷಟ್ಪದಿಗಳು ಎಲ್ಲರಿಗೂ ಸುಲಭವಾಗಿ ತಿಳಿಯುವಂತಿದ್ದುದರಿಂದ ಉತ್ತರದಲ್ಲಿ ವಚನಗಳೂ ಜನರ ಆದರಕ್ಕೆ ಪಾತ್ರವಾದಂತೆ ದಕ್ಷಿಣದಲ್ಲಿ ರಗಳೆಷಟ್ಪದಿಗಳು ಜನಸಾಮಾನ್ಯದ ಆದರಕ್ಕೆ ಪಾತ್ರವಾದವು. ((ಉತ್ತರದಲ್ಲಿ ಬಸವಣ್ಣನವರೂ ಅವರ ಅನುಯಾಯಿಗಳೂ ಜನರನ್ನು ವೀರಶೈವಧರ್ಮದ ಕಡೆಗೆ ಎಳೆದುಕೊಂಡಂತೆ ದಕ್ಷಿಣದಲ್ಲಿ ಹರಿಹರನು ಶಿವಭಕ್ತರನ್ನು ತನ್ನೆಡೆಗೆ ಎಳೆದುಕೊಂಡನು. ಕಲ್ಯಾಣದಲ್ಲಿ ಶಿವಾನುಭವಮಂಟಪವು ಶಿವತತ್ವಚರ್ಚೆಗೆ ಸ್ಥಾನವಾದಂತೆ ಪಂಪಾ ವಿರೂಪಾಕ್ಷನ ಮಂಟಪವು ಶಿವಶರಣರ ರಗಳೆಗಳನ್ನು ಓದುವ ಪುರಾಣ ಮಂಟಪವಾಗಿದ್ದಿತು. ವಚನಕಾರರ ಮಧ್ಯದಲ್ಲಿ ಭಕ್ತಭಂಡಾರಿ ಬಸವಣ್ಣನವರು ಹೊಳೆಯುತ್ತಿದ್ದಂತೆ ಶಿವಭಕ್ತರ ಮಧ್ಯದಲ್ಲಿ ಶಿವಯೋಗಿ ಹರಿಹರನು ಹೊಳೆಯುತ್ತಿದ್ದನು.))

ಈ ಉಪಮೆಯು ಇಷ್ಟಕ್ಕೇ ಮುಗಿಯದೆ ಕಾಲಾಂತರದವರೆಗೆ ಸಾಗಿ ಗ್ರಂಥಸ್ಥವಾಗಿಯೂ ನಿಂತಿತು. ಬಸವಣ್ಣನವರು ಹರಿಹರದೇವನು ಹೇಳಿ

ದಂತೆ ವೃಷಭಮುಖನ ಅವತಾರವಾದರೆ ಹರಿಹರದೇವನು ಗಣಹರುಷನ ಅವತಾರ. ಬಸವಣ್ಣನವರು ತಮ್ಮ ಜನ್ನಿವಾರನ್ನು ಹರಿದೊಗೆದು ವೀರಶೈವರಾದರೆ ಹರಿಹರದೇವನು ಆರಾಧ್ಯಬ್ರಾಹ್ಮಣತ್ವವನ್ನು ಅಲ್ಲಗಳೆದು ವೀರಶೈವನಾದನು. ಬಸವಣ್ಣನವರು ಸಂಗಮೇಶ್ವರನ ಆಜ್ಞೆಯಂತೆ ಬಿಜ್ಜಳನ ಆಸ್ಥಾನವನ್ನು ಸೇರಿದರೆ ಪಂಪಾವಿರೂಪಾಕ್ಷನ ಆಜ್ಞೆಯಂತೆ ಹರಿಹರನು ವೀರಬಲ್ಲಾಳನ ಆಸ್ಥಾನವನ್ನು ಸೇರಿದನು. ಬಸವಣ್ಣನವರು ಪವಾಡಗಳನ್ನು ಮಾಡಿತೋರಿಸಿದಂತೆ ಹರಿಹರನೂ ಪವಾಡಪುರುಷನೆಂದು ಐತಿಹ್ಯವಿದೆ. ಬಸವಣ್ಣನವರು ಸಂಗಮೇಶ್ವರನಲ್ಲಿ ಐಕ್ಯವಾದರು; ಹರಿಹರನು ಪಂಪಾವಿರೂಪಾಕ್ಷನಲ್ಲಿ ಐಕ್ಯವಾದನು.))

ಹರಿಹರನು ಶಿವಕವಿಯು. ಶಿವನನ್ನೂ ಶಿವಗಣಗಳನ್ನೂ ಶಿವಶರಣರನ್ನೂ ಉಳಿದು ಅನ್ಯರನ್ನು ಸ್ತುತಿಸನು. ಅನ್ಯರನ್ನು ಸ್ತುತಿಸಿದುದನ್ನು ಸಹಿಸನು. ಇದಕ್ಕೆ ಉದಾಹರಣೆಯಾಗಿ ರಾಘವಾಂಕನು ಹಲ್ಲು ಕಳೆದುಕೊಂಡ ಕಥೆಯು ರೂಢವಾಗಿದೆ. ರಾಘವಾಂಕನು ಹರಿಶ್ಚಂದ್ರಕಾವ್ಯವನ್ನು ರಚಿಸಲು ಭವಿಯ ಸುತ್ತಿಮಾಡಿದನೆಂದು ಕೋಪಗೊಂಡು ಹರಿಹರನು ಅವನ ಹಲ್ಲುಗಳನ್ನು ಮುರಿದು ಕಳೆದು ಅವನಿಂದ ಐದು ಶೈವಕೃತಿಗಳನ್ನು ಮಾಡಿಸಿ ಮರಳಿ ಹಲ್ಲುಗಳನ್ನು ಕೊಟ್ಟನೆಂದು.

ಅಂತಾಗೆ ತಮ್ಮಗ್ರಜೆಯ ಸುತಂ ಕುಕವಿಹೃ- |
ತ್ಕುಂತಂ ಸುಕವಿವನವಸಂತಂ ದಲುಭಯಕವಿ- |
ಸಂತಾನ ಶರಭಭೇರುಂಡ ರಾಘವನೊರೆದ ನರನುತಿಗೆ ಮುಳಿದು ಕಳೆದು ||
ದಂತವೃದಂ ಮಗುಳೆ ಶೈವಕೃತಿಪಂಚಕವ- |
ನಂತವನಿನುಸಿರಿಸಿಯವಂ ಕೊಟ್ಟು ಪರವಾದ- |
ವಂ ತಡೆಯದಾತನಿಂ ವಾದಮುಖದಿಂ ಗೆಲಿದವನ ಕವಿತಾವ್ಯಾಜದಿಂ ||

ಈ [೫೨] ಪದ್ಯದಿಂದ ತಿಳಿದು ಬರುತ್ತದೆ. ಇದರಲ್ಲಿ ಹರಿಹರನ ಪರದೈವತಾಸಹಿಷ್ಣುತೆಯು ಪ್ರಾಮುಖ್ಯವಾಗಿ ಕಂಡುಬರುತ್ತದೆ. ಇದರ ಕೂಡ ಹರಿಹರನಲ್ಲಿ ಪರಧರ್ಮಾಸಹಿಷ್ಣುತೆಯೂ ಇದ್ದಿತು. ಕೆಳಗಿನ ಉದಾಹರಣೆಗಳನ್ನು ನೋಡಿ :

---

೫೨. ಪದ್ಮರಾಜಪುರಾಣ ಸಂಧಿ ೫ ಪದ್ಯ ೩೫.

ಹೆರುಷದಿಯವನಾ ಲಲನೆಯ ಬಸಿರೊಳು
ಅರುಹಂತನ ಪಾಪದ ಕಗ್ಗೆಸರೊಳು
ಪಂಕಜದಂತಿರೆ ಪುಟ್ಟಿದಳೊಲವಿಂ ೫೩

"ಪದ್ಮಾವತಿಯ ಪಿತನಪ್ಪ ಪಾರಿಕ್ಷಪಂಡಿತಂ ಮೇರೆಗೆಟ್ಟ ಮತಿಹೀನಂ ಕೋಪಣದಿಂ ಬಂದ ಹೊಸ ಋಷಿಯರೆನಿಪ ನೀಚರಿಗೆ ಚರಿಗೆಯಂ ಪೇಳೆ ಬರಿಯ ಭಂಡರುಂ ಲೋಚಿನಂ ತಾಲ್ಯರುಂ ಬೆತ್ತಲೆಯ ಭ್ರಷ್ಟರುಂ ಕುಂಡದ ಋೂಳರುಂ ತಟ್ಟುಗಳ ಅಜ್ಞಾನಿಗಳುಂ ನಾರುವಾಯ ನರಕಿಗಳುಂ ಸರ್ವಮಲ ಭಾಂಡರುಂ ನೆರೆದು ಬಂದು" ೫೪

ಎನುತೆ ಪಾದುಕ ಪದದಿ ಪೂಜೆಯಂ ಪರಿಹರಿಸಿ
ಅನುನಯದಿ ಮೊಗದಗ್ಗವಣಿಯೆರೆದು ಸಡಗರಿಸಿ
ಮುಡಿಯೊಳಿರ್ದಲರನೊಯ್ಯನೆ ಪೂಜೆಯಂ ಮಾಡಿ
ಕಡುನೇಹದಿಂದೆ ಪಸಿದೈ ಪಸಿದೆ ಎನೆ ನೋಡಿ. ೫೫

ನಿನಗೆ ಪೇಳ್ದಪೆನಗಜ ತಿಳಿಯ ಕೇಳಿಂದೆನುತೆ
ಪಾರ್ವನಗ್ಗವಣಿ ತಿಳಿ ಮನಕದಡು ಎಲೆಗೌರಿ
ಅವನಿಟ್ಟಭಸಿತವವನಂ ಮುಟ್ಟದೆಲೆ ಗೌರಿ
ಪಾರ್ವನರ್ಚನೆ ಇತಿನು ಮನವತಿ ವಿಷಂ ಗೌರಿ
ಅವನ ರುದ್ರಾಕ್ಷೆಯವನಂ ಪೊರ್ದದೆಲೆ ಗೌರಿ
ಬಾಯಮಂತ್ರಂ ಮನದ ಕ್ಷುದ್ರ ತಂತ್ರಂ ಸೂಸೆ
ಕಾಯ ವೇಷಂ ಮನದ ಭವಿತನವದೇಂ ಲೇಸೆ. ೫೬

ನುಡಿದಳಿಲೆ ಭವಿಯೊಡನೆ ಬೆರಸಿರಲ್ಕಾರ್ಪನೇ?
ಮೃಡಪೂಜೆಯಚಲಸುಖಮಂ ಪಿಂಗಲಾರ್ಪನೇ?
ಆನೇಕೆ ಭವಿಯೇಕೆ ಭಕ್ತರೀಮಾತೇಕೆ
ಏನೆಂದೊಡಂ ಭವಿಯನೊಲ್ಲೆನೀ ಮಾತೇಕೆ?
ಹೋಗೆಲೆ ವಸಂತಕಾ ನಿನಗೆ ಸೊಲ್ಪವರಿಲ್ಲ

೫೩. ಆದಯ್ಯನ ರಗಳೆ ಪುಟ ೭೫. ೫೪. ಆದಯ್ಯನರಗಳೆ ಪುಟ ೯೧. [ಶಿವಾನುಭವ ಪ್ರಕಟನೆ]. ೫೫. ಕಣ್ಣಪ್ಪನರಗಳೆ ಪುಟ ೧೫ (ಶಿವಾನುಭವ ಪ್ರಕಟನೆ). ೫೬. ಕಣ್ಣಪ್ಪನ ರಗಳೆ ಪುಟ ೧೦. (,,)

ನಾಗಭೂಷನ ಭಕ್ತರಿಗೆ ಭವಿಯು ಸರಿಯಲ್ಲ
ಬೆಳಗಿಂಗೆ ಕತ್ತಲೆಯು ಕೂಟಮುಂಟೇ ಮರುಳೆ
ತಿಳಿವಿಗಜ್ಞಾನದೊಳು ಸಂಗಮುಂಟೇ ಮರುಳೆ.[೫೭]

ಕೆಲವೆಡೆಯಲ್ಲಿ ಆತನ ಇಂತಹ ಉದ್ದಾಮವೃತ್ತಿಯು ಜುಗುಪ್ಸೆಯನ್ನುಂಟು ಮಾಡುವುದಾಗಿದೆ. ರೇವಣಸಿದ್ಧೇಶ್ವರ ರಗಳೆಯಲ್ಲಿ ವಿಷ್ಣುಭಕ್ತನಾದ ಚೋಳನು ರೇವಣಸಿದ್ಧೇಶ್ವರನನ್ನು ವಿಷ್ಣುಗೃಹಕ್ಕೆ ಕರೆದುಕೊಂಡು ಹೋದ ಸಮಯದಲ್ಲಿ ಆತನ ಆಚರಣೆಯನ್ನು ಕಂಡು ಚೋಳರಾಜನು ಹೇಸಿ ತಲೆ ಬಾಗಿಸಿದನು.

" ಚೋಳ ಹೇಸಿದೆ ನುಡಿಯದೀಪ್ರತಿಮೆ ಸ್ಯೆತಾಗೆ
ಎಂದೊಮ್ಮೆ ನುಡಿಯಿಸುತೆ ಚೋಳಂಗೆ [೫೮]ಬೀಳ್ಕೊಟ್ಟು"

ಭವಿಗಳು ಶಿವನ ನೈವೇದ್ಯದ ಓಗರವನ್ನು ನೋಡಬಾರದೆಂದು ಶ್ವಪಚನು ಆಪಾತ್ರೆಯನ್ನು ಎಕ್ಕಡದಿಂದ ಮುಚ್ಚಿರುವುದಾದರೂ [೫೯]ಆಮಾದರಿಯದೇ. ಪರಧರ್ಮಾಸಹಿಷ್ಣುತೆಯು ಹೀಗೆ ಅಸಹ್ಯಭಾವದ ಮರ್ಯಾದೆಯನ್ನು ಮುಟ್ಟಿಹೋಗಿದೆ. ಇದನ್ನು ಒಂದಿಲ್ಲೊಂದು ರೀತಿಯಿಂದ ತರ್ಕಶುದ್ಧವಾಗಿ ನ್ಯಾಯವೆಂದು ಹೇಳಲು ಬರುವಂತಿದ್ದರೂ ಸಾಹಿತ್ಯದೃಷ್ಟಿಯಿಂದ ಅದು ಯೋಗ್ಯವೇ ಎಂದು ಆಕ್ಷೇಪಿಸಿದಾಗ ಹತಬುದ್ಧರಾಗುವ ಸಮಯವು ಬರುತ್ತಿದೆ. ಆದರೂ ಈ ಆಕ್ಷೇಪಣೆಯಿಂದ ಪಾರಾಗಲು ಒಂದು ಬಲವಾದ ಆಧಾರವಿದೆ. ರೇವಣಸಿದ್ಧೇಶ್ವರನ ರಗಳೆಯಾಗಲಿ ಸಾಮವೇದಿಗಳ ಮಹಾತ್ಮೆಯಾಗಲಿ ಹರಿಹರ ರಚಿತವೇ ? ಎಂಬುದೊಂದು ಆಕ್ಷೇಪ. ಮೇಲಿನ ರಗಳೆಗಳ ಸಂದರ್ಭದಲ್ಲಿ ರಾವಸಾಹೇಬ ಪಿ. ಜಿ. ಹಳಕಟ್ಟಿಯವರು ಆ ಆಕ್ಷೇಪವಿವೇಚನೆಯನ್ನು ಮಾಡಿಲ್ಲ. ಎಲ್ಲ ರಗಳೆಗಳು ಅಚ್ಚಾದ ಮೇಲೆ ಮಾಡಬಹುದೆಂದು ತೋರುತ್ತದೆ. ಆವರೆಗೆ ಈವಿಷಯವನ್ನು ಇಲ್ಲಿಯೇ ನಿಲ್ಲಿಸಿಬಿಡುವುದು ಒಳ್ಳೇದು. (ಹರಿಹರನ ಹೆಸರಿನ ಅನೇಕರಗಳೆಗಳು ದೊರೆಯುತ್ತವೆ. ಅವೆಲ್ಲ ಹರಿಹರನವಲ್ಲವೆಂಬ ಸಂಗತಿಯನ್ನು ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು

೫೭. ಮಹಾದೇವಿಯುಕ್ಕನ ರಗಳೆ [ಸದ್ಧರ್ಮಗ್ರಂಥಮಾಲಾ ೧೩.] ಪುಟ ೨೫. ೫೮. ರೇವಣಶಿದ್ಧೇಶ್ವರನ ರಗಳೆ [ಶಿವಾನುಭವ ಪ್ರಕಟನೆ] ಪುಟ ೨೩. ೫೯. ಸಾಮವೇದಿಗಳ ಮಹತ್ಮೆ. [ಶಿವಾನುಭವ ಪ್ರಕಟನೆ] ಪುಟ ೨೫.

ಬಸವರಾಜದೇವರ ರಗಳೆಯ ಪೀಠಿಕೆಯಲ್ಲಿ ಹೇಳಿದ್ದಾರೆ.) ಜುಗುಪ್ಸಾತ್ಮಕ ವರ್ಣನೆಯು ಹರಿಹರನದಲ್ಲವೆಂದು ಒಂದು ವೇಳೆ ಒಪ್ಪಿದರೂ ಆತನ ಪರ ಧರ್ಮಾಸಹಿಷ್ಣುತೆಯೂ ಉದ್ದಾಮವೃತ್ತಿಯೂ ಮಾಯವಾಗುವುದಿಲ್ಲ.

ಇನ್ನೊಂದು ದೋಷವು ಈಕವಿಯಲ್ಲಿ ಕಂಡುಬರುತ್ತದೆ. ಅದೆಂದರೆ ಲೋಕಾನುಭವಾಭಾವ ಮತ್ತು ಜನಸಾಮಾನ್ಯದ ಭಾವನೆಗಳ ಬಗ್ಗೆ ಉದಾಸೀನತೆ. ಇವುಗಳ ಉದಾಹರಣೆಗಳು ಗಿರಿಜಾಕಲ್ಯಾಣದಲ್ಲಿ ಕಂಡುಬರುತ್ತವೆ. ಬ್ರಹ್ಮನ ಮಾನಸ ಪುತ್ರನೂ, ಬ್ರಹ್ಮಚಾರಿಯೂ, ಮುನಿಯೂ ಆದ ನಾರದನು ಲೋಕಕಲ್ಯಾಣಾರ್ಥವಾಗಿ ಕಲಹಪ್ರಿಯನೆಂದು ಪುರಾಣಗಳು ಹೇಳುತ್ತವೆ. ಆತನ ಬಗ್ಗೆ ಹಿಂದುಗಳಲ್ಲಿ ಆದರವಿದೆ. ಇಂತಹ ಮುನಿಪುಂಗವನನ್ನು ಚಂದ್ರಿಕಾವಿಹರಣಕ್ಕೆಂದು ಗಿರಿರಾಜನು ವೇಶ್ಯಾವಾಟಕ್ಕೆ ಕರೆದುಕೊಂಡು ಹೋಗಿದ್ದಾನೆ.

"ಅನುಕೂಲ, ದುಷ್ಟ, ಶಠನಾಯಕರೆಂಬ ರಾಜಪುತ್ರರಂ ಕೂಡಿಕೊಂಡು ಸಕಲಸುಕುಮಾರಭೋಗನಿಯೋಗನಿಕರಂ ಪಿಂತೆಬರೆ ನಾರದಮುನೀಂದ್ರಸಹಿತಂ ಗಿರಿರಾಜಂ ತನ್ನರಮನೆಯಂ ಪೊರಮಟ್ಟು[೬೦] ರಾಜವೀಧಿಯೋಳ್ಬಂದು"

" ತಿರುಗಿ ನಡೆತಂದು ಪಣ್ಯಾಂಗನಾವೀಧಿಯಂ ಪುಗುತಪ್ಪಾಗಳ್.[೬೧]"

ಎಂದು ಹೇಳಿದ ಮಾತುಗಳು ಜನಸಾಮಾನ್ಯಕ್ಕೆ ರುಚಿಸವು. ಸೀತೆಯ ಸೌಂದರ್ಯವರ್ಣನೆಯನ್ನು ಕೇಳಿ ಮೋಹಿತನಾಗಿ ನಾರದನು ಅವಳನ್ನು ನೋಡಲು ಅಂತಃಪುರವನ್ನು ಪ್ರವೇಶಿಸಿದಂತೆ ರಾಮಚಂದ್ರಚರಿತಪುರಾಣದಲ್ಲಿ ಹೇಳಿದ್ದರೂ ಅದು ಜೈನ ಪುರಾಣವು. ಜೈನಪುರಾಣಗಳಲ್ಲಿ ನಾರದನಿಗೆ ಮಹತ್ವವಿಲ್ಲ. ವಿಶ್ವಾಮಿತ್ರ ಪರಾಶರ ಮುಂತಾದ ಮುನಿಗಳು ಸ್ತ್ರೀಮೋಹಿತರಾಗಿರಬಹುದು. ಅಲ್ಲಿ ದೈವೀ ಪ್ರಭಾವವಿದೆ. ಗಿರಿಜಾಕಲ್ಯಾಣದಲ್ಲಿ ನಾರದನುಗಿರಿರಾಜನ ಕೂಡ ಸೂಳೆಗೇರಿಯ ನೋಟವನ್ನು ಕಾಣುವುದು ಮಾತ್ರ ಅಸಂಬದ್ಧವಾಗಿದೆ. ಇನ್ನೊಂದು ದೃಷ್ಟಿಯಿಂದ ಈಸಂಗತಿಯನ್ನು ನೋಡಬಹುದಾಗಿದೆ. ತಪಸ್ವಿಗಳು ಎಲ್ಲಿದ್ದರೇನು? ಅವರು ಸ್ಥಿರಚಿತ್ತರು ಎಂಬ ಸತ್ಯವನ್ನು ಒತ್ತಿ ಹೇಳಲು ಹರಿಹರನು ಹೀಗೆ ಮಾಡಿರಬಹುದೆಂದು ಕಲ್ಪಿಸುವುದಾದರೆ ಮತ್ತು ಹರಿಹರನ

---

೬೦. ಗಿರಿಜಾಕಲ್ಯಾಣ ಆಶ್ವಾಸ ೪, ೧೦೪ನೆಯ ಪದ್ಯದ ಮುಂದಿದ ವಚನ. ೬೧, ಅದೇ ಗ್ರಂಥ ಆಶ್ವಾಸ ೪, ೧೨೦ನೆಯ ಪದ್ಯದ ಮುಂದಿನ ವಚನ.

ಮನವೊಲಿಸಲು ಬಂದ ಮಹಾದೇವಿಗೆ ಆತನು ಮನಸೋಲಲಿಲ್ಲವೆಂಬುದೇ ಉದಾಹರಣೆಯು ಇದಕ್ಕೆ ಎಂದು ತಿಳಿಯುವುದಾದರೆ ಆತನು ಗಿರಿಜಾಕಲ್ಯಾಣವನ್ನು ಮುನಿಗಳ ಅಥವಾ ಯೋಗಿಗಳ ಸಲುವಾಗಿ ಬರೆದನೋ ಪ್ರಾಪಂಚಿಗಳಾದ ಜನಸಾಮಾನ್ಯದ ಸಲುವಾಗಿ ಬರೆದನೋ ಎಂಬುದೊಂದು ಆಕ್ಷೇಪಣೆಯು ತಟ್ಟನೆ ಮುಂದೆ ಬರುತ್ತದೆ. ಈದೋಷಕ್ಕೆ ಆತನ ಸ್ವೈರವೃತ್ತಿ ಅಕುಂಚಿತ ದೃಷ್ಟಿಗಳು ಕಾರಣವೆಂದು ತೋರುತ್ತದೆ.

ಗಿರಿಜಾಕಲ್ಯಾಣದೊಳಗಿನ ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ.

" ಸುಪ್ರಭಾತ-ಸಮಯ-ಸಮುಚಿತಸ್ನಾನನಾಗಿ ಕುಳ್ಳಿರ್ದು ನೆನೆದು ನೋಡಿ ನಾರದ ಮುನೀಂದ್ರನರುಪಿಪೋದುದಂ ಕುರುಹುಗೊಂಡು ಹೈಮವತಿಯಂ ಹೇಮಕೂಟದೊಳಿರ್ಪ ಪರಮಜ್ಯೋತಿಸ್ವರೂಪನಪ್ಪ ಶ್ರೀವಿರೂಪಾಕ್ಷನಲ್ಲಿಗೆ ಸಮರ್ಪಿಸಲೆಂಬ ಮನಂದಂದೋಲಗಮಂ ಪರೆಯಲ್ವೇಳ್ದು,[೬೨]"

" ಮಾತೆಯ ಮಾತಿಗೊಡಂಬಟ್ಟು ವಿನಯವಿನಮಿತೆಯಾದ ಪಾರ್ವತಿಯಂ ಪರ್ವತರಾಜಂ ಪುಷ್ಪಕದೊಳ್ಬಿಜಯಂಗೆಯ್ಸಿ ತಾನಂ ಕುಳ್ಳಿರ್ದು[೬೩]"

ಪರಮೇಶ್ವರನು ತಪಶ್ಚರ್ಯೆ ಮಾಡುವಲ್ಲಿಗೆ ಅವಳನ್ನು ಕರೆದುಕೊಂಡು ಬಂದು ಅಲ್ಲಿ ಅವಳನ್ನು ಬಿಟ್ಟು

" ಮತ್ತಂ ಮತ್ತಪ್ಪಿ ಪರಸಿ ಗಿರಿಪತಿ ಪೋದಂ ||"[೬೪]

ಎಂದು ಹೇಳಿದ ಮಾತು ಪ್ರಪಂಚದೊಳಗಿನ ಹೆಣ್ಣುಮಕ್ಕಳನ್ನು ಹಡೆದ ತಂದೆ ತಾಯಿಗಳಿಗೆ ಒಪ್ಪಿತವಾಗಬಹುದೇ? ಪ್ರಾಚೀನ ಕಾಲದಲ್ಲಿ ಮದುವೆಯ ಪೂರ್ವದಲ್ಲಿ ಪ್ರಿಯಾರಾಧನೆಗೆಂದು ತರುಣಸ್ತ್ರೀಪುರುಷರನ್ನು ಒಂದೆಡೆಯ ಏಕಾಂತದಲ್ಲಿರಿಸುವ ಪದ್ಧತಿಯಿರಲಿಲ್ಲವಲ್ಲ? ಎಂದು ಒಂದು ಆಕ್ಷೇಪಣೆಯು. ಒಂದುವೇಳೆ ಗಿರಿರಾಜಮೇನೆಯರು ದೇವಲೋಕದವರೆಂದು ಭಾವಿಸಿದರೂ ಇಂತಹ ಸಂದರ್ಭವು ಒಪ್ಪಿಗೆಯಾಗುವಂತಿಲ್ಲ. ಇದೊಂದು ಗಿರಿಜಾಕಲ್ಯಾಣದೊಳಗಿನ ದೋಷವೆಂದು ತಿಳಿಯಬೇಕೇ?

---

೬೨. ಗಿರಿಜಾಕಲ್ಯಾಣ ಆಶ್ವಾಸ ೫, ೯ನೆಯ ಪದ್ಯದ ಮುಂದಿನ ವಚನ. ೬೩. ಅದೇ ಗ್ರಂಥ ಆಶ್ವಾಸ ೧೨ನೆಯ ಪದ್ಯದ ಮುಂದಿನ ಗದ್ಯ. ೬೪. ಅದೇಗ್ರಂಥ ಅದೇಆಶ್ವಾಸಪದ್ಯ ೪೬.

ಹರಿಹರದೇವನು ಉದ್ದಾಮಕವಿಯು. ತನ್ನ ಕಾವ್ಯದಲ್ಲಿ ದೋಷವನ್ನೆಂದೂ ಉಳಿಯಗೊಡನು ಹಾಗಾದರೆ ಈಸಂಗತಿಯ ಸಮನ್ವಯವಾಗುವುದೆಂತು? ಅದನ್ನು ವಿಮರ್ಶಿಸಬೇಕಾದರೆ ಆಕಾವ್ಯದ ಹಿಂದಿರುವ ಹರಿಹರದೇವನ ಮನೋರಚನೆಯನ್ನು ನಾವು ಪರೀಕ್ಷಿಸಬೇಕು. ಆತನ ಮನಸ್ಸು ಜನಸಾಮಾನ್ಯದ ಮನಸ್ಸಲ್ಲ. ಕವಿ ಸಾಂಪ್ರದಾಯಕ್ಕೆ ಕಟ್ಟು ಬಿದ್ದ ಮನಸ್ಸಲ್ಲ. ಅದು ಸ್ವೈರವೃತ್ತಿಯದು. ಸಂಸ್ಕೃತಿ ಪರಂಪರೆಗಳಿಗೆ ಒಳಪಟ್ಟು ಮಾರ್ಪಾಟುಗೊಂಡ ಮನಸ್ಸಲ್ಲ. ಸಂಸ್ಕೃತಿ ಪರಂಪರೆಗಳಿಗೆ ಒಳಪಟ್ಟು ಮಾರ್ಪಾಟು ಹೊಂದಿದ ಮನಸ್ಸು ಅಂದವಾಗಿ ಓರಣವಾಗಿ ಗಿಡಹೂಬಳ್ಳಿಗಳನ್ನು ನೆಟ್ಟು ಬೆಳಸಿದ ಕೃತ್ರಿಮ ಉದ್ಯಾನದ ಶೋಭೆಯನ್ನು ಅನುಕರಿಸುವುದು. ಇವುಗಳಿಗೆ ಒಳಪಡದ ಮನಸ್ಸು ಸ್ವೈರವಾಗಿ ಬೆಳೆದ ಗಿಡಬಳ್ಳಿಗಳಿಂದ ಮನೋಹರವಾದ ಅರಣ್ಯದ ಶೋಭೆಯಂತೆ. ಇಂತಹ ಮನೋರಚನೆಯ ಹರಹರನು ಪ್ರಪಂಚದಲ್ಲಿ ಇದ್ದದನ್ನು ಇದ್ದಂತೆ ವರ್ಣಿಸಿದ್ದರೆ ಆತನು ಕವಿಯಾಗುತ್ತಿರಲಿಲ್ಲ. ಅಲ್ಲಿ ನಾವು ನೋಡುತ್ತಿರುವ ದೃಶ್ಯವು ನಮಗೆ ಪ್ರತ್ಯಕ್ಷ. ನಮ್ಮ ಜ್ಞಾನೇಂದ್ರಿಯಗಳು ಆದೃಶ್ಯದ ಸಾಕ್ಷಿಯನ್ನು ಹೇಳುತ್ತವೆ. ಸಾಹಿತ್ಯಪ್ರಪಂಚವು ಇದಕ್ಕಿಂತ ಭಿನ್ನ. ಅಲ್ಲಿನ ದೃಶ್ಯಗಳು ಪ್ರಕೃತಿಗೆ ಒಳಪಟ್ಟದ್ದರೂ ಪ್ರತ್ಯಕ್ಷ್ಯವಲ್ಲ. ಆದುದರಿಂದ ಸಾಹಿತ್ಯದಲ್ಲಿ ಪ್ರತ್ಯಕ್ಷತೆಯ ಅಭಾವವನ್ನು ಅನ್ಯಮಾರ್ಗದಿಂದ ಕವಿಗಳು ತುಂಬಿಕೊಡಬೇಕಾದುತ್ತದೆ. ಈ ಸಂಗತಿಯನ್ನೇ ಕುರಿತು ನೇಮಿಚಂದ್ರನು 'ರವಿಕಾಣದುದಂ ಕವಿಕಾಣ್ಬಂ' ಎಂದೂ ಪಾಶ್ಚಾತ್ಯರು ಕಾವ್ಯಸೃಷ್ಟಿಯೆಂದೂ ಹೇಳುತ್ತಾರೆ. ಹರಿಹರದೇವನು ಪಾರ್ವತಿಯು ಪರಮೇಶ್ವರನ ಸಾನ್ನಿಧ್ಯದಲ್ಲಿ ಮದುವೆಯ ಪೂರ್ವದಲಿ ನಿಂತುಕೊಳ್ಳುವಂತೆ ಮಾಡಿರುವುದರಲ್ಲಿ ಸ್ವಾರಸ್ಯವಿದೆ, ಸೌಂದರ್ಯವಿದೆ, ಅದ್ಭುತರಮ್ಯತೆಯಿದೆ, ಕಾರ್ಯಸಾಧನೆಯಿದೆ. ಪಾರ್ವತಿಯು ಅದ್ಭುತಪ್ರೇಮವು ಪರಮೇಶ್ವರನಲ್ಲಿದೆ, ಅವನಬಗ್ಗೆ ಅಭಿಮಾನವಿದೆ, ಮೇನೆಗಿರಿರಾಜರಲ್ಲಿ ಅವರಿಬ್ಬರ ಪ್ರೇಮಕ್ಕೆ ಒಪ್ಪಿಗೆಯಿದೆ. ಪಾರ್ವತಿಯಲ್ಲಿ ಅವರ ವಿಶ್ವಾಸವಿದೆ· ಈ ಸಂತಿಯು ತಿಳಿಯಿತೆಂದರೆ ಆಸನ್ನಿವೇಶವು ಅಯೋಗ್ಯವೆಂದು ಯಾರೂ ಹೇಳರು.

ಹರಿಹರದೇವನು ವೇದವೇದಾಂಗನಾಟಕೇತಿಹಾಸ ಪುರಾಣಕಾವ್ಯಾಲಂಕಾರವ್ಯಾಕರಣಗಳಲ್ಲಿ ಅದ್ವಿತೀಯ ಪಂಡಿತನಾಗಿದ್ದರೂ ಆತನಿಗೆ ದುರ

ಭಿಮಾನವಿಲ್ಲ. ಜೈನಕವಿಗಳು ಕೆಲಮಟ್ಟಿಗೆ ಈ ಅಭಿಮಾನವನ್ನು ತೋರಿಸುತ್ತಾರೆ. ಧಾರ್ಮಿಕ ಸಂದರ್ಭಗಳಲ್ಲಿ ಸಹ ವ್ಯವಹಾರದಲ್ಲಿರುವ ಪಾರಿಭಾಷಿಕ ಶಬ್ದಗಳನ್ನು ದಾಟಿ ಜನಸಾಮಾನ್ಯಕ್ಕೆ ತಿಳಿಯದಂತಹ ಗೂಢವಾದ ಶಬ್ದಗಳನ್ನು ಆತನು ಎತ್ತುವುದಿಲ್ಲ. ಆತನು ಸಂಗೀತದಲ್ಲಿಯೂ ಕೆಲಮಟ್ಟಿಗೆ ಪ್ರಾವೀಣ್ಯವನ್ನು ಸಂಪಾಸಿದ್ದನೆಂದು ಕೆಳಗಿನ ಅವತರಣದ ಮೇಲಿಂದ ತಿಳಿಯುಬಹುದಾಗಿದೆ.

ತಂದೋಂ ಧಿತ್ತೋಂ ಧೋಮೆಂದೆನುತಂ
ದಿಂ ದಿಂ ಧಿಮಿಧೀ ಧಿಮಿತೆಂದೆನುತಂ
ದುಮು ದುಮು ತತ್ತೋಂ ತತ್ತೋಂಗೆನುತಂ
ಚಮಕಂ ತಕನಕ ತಕಎಂದೆನುತುಂ
ಝುಂ ಝುಂ ಝುಂ ಝುಂ ತಕತಕ ಎನುತುಂ
ಝುಂ ಝುಂ ದಿಕ್ಕಟತಕ್ಕಟ ಎನುತುಂ
ಝೂಂದ್ರುಂಕಟ ಝೊಂದ್ರೊಂಕಟ ಎನುತುಂ
ಸಂಗೀತಧ್ವನಿ ಯುಮ್ಮಳಿಸುತ್ತಲ್
ಜಂಗಮನಾದಂ ನಭಮಂ ಮುಟ್ಟಲ್.[೬೫]

ಕರಿಕಾಲಮ್ಮೆಯ ರಗಳೆಯಲ್ಲಿ ಶಂಕರತಾಂಡವವಿದೆ.[೬೬]

ನವರಸಗಳನ್ನು ಪರಿಪಕ್ವಗೊಳಿಸಿ ಕಾವ್ಯಸೌಂದರ್ಯವನ್ನು ಎಲ್ಲೆ ಮೀರಿಸುವಲ್ಲಿ ಈತನು ಅಸದೃಶನು. ಅದರಲ್ಲಿಯೂ ಶಾಂತರಸ ಕರುಣರಸಗಳು ಈತನಿಗೆ ಕರತಲಾಮಲಕ. ಯೋಗಿಯೇ ಆಗಿರುವುದರಿಂದ ಶಾಂತರಸಪೂರ್ಣನಿಗೆ ಶಿವಪೂಜೆ ಶಿವಸ್ತೋತ್ರಗಳನ್ನು ರಚಿಸುವಾಗ ತನ್ನ ಅಂತಃಕರಣವನ್ನೇ ಆಆಸನ್ನಿವೇಶಗಳಲ್ಲಿ ತುಂಬಿದ್ದಾನೆ. ಆದುದರಿಂದಲೇ ಆಭಾಗಗಳನ್ನು ಓದುವವರು ಅಲ್ಲಿ ತನ್ಮಯರಾಗುತ್ತಾರೆ. ಕಣ್ಣಪ್ಪನ ಶಿವಪೂಜೆ, ಕಾರಿಕಾಲಯಮ್ಮೆ ಶಿವಪೂಜೆ, ಪ್ರಭುದೇವರ ಶಿವಪೂಜೆ, ಚೆನ್ನಯ್ಯಗಳ ಶಿವಪೂಜೆ ಶಿವಸ್ತುತಿ ಮುಂತಾದವುಗಳು ಇದಕ್ಕೆ ಉದಾಹರಣೆಗಳು.

---

೬೫. ತಿರುನಾಳ್ವೊವರ ಮಹಾತ್ಮೆ-ಶಿವಾನುಭವ ಗ್ರಂಥಮಾಲಾ ನಂ. ೩೭ – ಪುಟ ೩೩.

೬೬. ಅದೇಗ್ರಂಥ ಪುಟ ೧೦.

ಸೃಷ್ಟಿಯು ಪ್ರೇಮಮಯವಾಗಿದೆ. ಅದರ ಪರಿಣಾಮವು ಆನಂದ. ಆಪ್ರೇಮವು ಸಂಕುಚಿತವಾಗಿ ಸ್ವಾರ್ಥರೂಪವಾಗಿ ದೇಹವನ್ನವಲಂಬಿಸಿ ಭೋಗನಿಷ್ಠವಾದರೆ ಅದು ಅನುರಾಗವು; ಭೋಗದಾಸೆಯಿಲ್ಲದಿದ್ದರೆ ಅದು ವಾತ್ಸಲ್ಯ; ದೇಹಾಪೆಕ್ಷೆಯಿಲ್ಲದೆ ಅದು ಅಂತರ್ಮುಖವಾಗಿ ಆತ್ಮೋನ್ನತಿಯ ಕಡೆಗೆ ಒಲೆಯಿತೆಂದರೆ ಭಕ್ತಿ. ಆತರುವಾಯ ಮನಸ್ಸು ಪರಮಾತ್ಮನ ಕಡೆಗೆ ಹೆಚ್ಚು ಹೆಚ್ಚು ಒಲೆಯುತ್ತ ತಿಳಿಯಾಗಿ ಜೀವಾತ್ಮನು ತನ್ನ ಮೂಲ ಆನಂದ ವನ್ನು ತಾಳಿ ಪರಮಾತ್ಮನಲ್ಲಿ ಬೆರೆತು ಹೋಗುವುದು ಐಕ್ಯ, ಸಾಮರಸ್ಯ. ಹರಿಹರನು ಭೋಗಾಪೇಕ್ಷೆಯಿಲ್ಲದೆ ಬ್ರಹ್ಮಚಾರಿಯಾಗಿ ಶಿವಭಕ್ತನಾಗಿ ಉನ್ನತೋನ್ನತಿಯನ್ನು ಹೊಂದಿ ಪಂಪಾ-ವಿರೂಪಾಕ್ಷನನ್ನು ಮೆಚ್ಚಿಸಿ, ಆತನಿಂದ ತಲೆಯ ಮೇಲೆ ಮುಡಿಗೆಯನ್ನಿರಿಸಿಕೊಂಡು, ಪುರಾತನರ ಮತ್ತು ಶರಣರ ರಗಳೆಗಳು ಉತ್ಕೃಷ್ಟವಾದವುಗಳೆಂದು ಆತನಿಂದ ಹೊಗಳಿಸಿಕೊಂಡು ಕೊನೆಗೆ ಆತನಲ್ಲಿ ಐಕ್ಯನಾದನು. ಆತನ ಶಿವಭಕ್ತಿಯು ಅಪೂರ್ವವಾಗಿದೆ. ಎಲ್ಲೆಲ್ಲಿಯೂ ಪರಮೇಶ್ವರನನ್ನೇ ಸ್ತುತಿಸುತ್ತಾನೆ.

ಅರಿವುದುಂ ನಮಃಶಿವಾಯ ಮರೆವುದುಂ ನಮಃಶಿವಾಯ
ಉರಿವುದುಂ ನಮಃಶಿವಾಯ ಮಹಿಮೆಯುಂ ನಮಃಶಿವಾಯ
ಮನದೊಳುಂ ನಮಃಶಿವಾಯ ಬುದ್ಧಿಯೊಳು ನಮಃಶಿವಾಯ
ನುಡಿವುದುಂ ನಮಃಶಿವಾಯ ಉಣ್ಬುದುಂ ನಮಃಶಿವಾಯ

. . . . . . . . . . . . . . . . . . . . .

ಕೆಲದೊಳುಂ ನಮಃಶಿವಾಯ ಬಲದೊಳುಂ ನಮಃಶಿವಾಯ
ನೆಲದೊಳುಂ ನಮಃಶಿವಾಯ ನಭದೊಳುಂ ನಮಃಶಿವಾಯ
ಕಾಯಮುಂ ನಮಃಶಿವಾಯ ನಿತ್ಯಮುಂ ನಮಃಶಿವಾಯ
ಸತ್ಯಮುಂ ನಮಃಶಿವಾಯ ಶಬ್ದಮುಂ ನಮಃಶಿವಾಯ
ಚಿತ್ತಮುಂ ಚರಿತ್ರಮುಂ ವಿಚಿತ್ರಮುಂ ನಮಃಶಿವಾಯ
ಸಂಜೆಯುಂ ಸಮಾಧಿಯುಂ ಸ್ವರೂಪಮುಂ ನಮಃಶಿವಾಯ
ರಂಜಿಸಿರ್ಪ ಮಂಗಳಂ ಮನೋರಥಂ ನಮಃಶಿವಾಯ
ಕಾಮಮುಂ ನಮಃಶಿವಾಯ ಕೋಪಮುಂ ನಮಃಶಿವಾಯ
ನೇಮಮುಂ ನಮಃಶಿವಾಯ ನಿತ್ಯಮುಂ ನಮಃಶಿವಾಯ

ಉಗ್ರಮುಂ ನಮಃಶಿವಾಯ ಶಾಂತಮುಂ ನಮಃಶಿವಾಯ
ಸ್ವರ್ಗಮುಂ ನಮಃಶಿವಾಯ ಮೋಕ್ಷಮುಂ ನಮಃಶಿವಾಯ[೬೭]

ಎಂದು ಹೇಳುತ್ತಿರುವಾಗ ತ್ಯಾಗಿಯಾಗಿ ಸರ್ವಸ್ವವನ್ನೂ ಆಪರಮೇಶ್ವರನಿಗೆ ಅರ್ಪಿಸಿಬಿಡುತ್ತಾನೆ. ಹೀಗೆ ದೃಢವಾದ ಗಾಢವಾದ ಆಳವಾದ ಭಕ್ತಿಯಿಂದ ಆಪರಶಿವನಲ್ಲಿ ಐಕ್ಯವಾಗುವುದು ಹರಿಹರದೇವನ ಜೀವನದ ರಹಸ್ಯ. ಈ ಸಂದರ್ಭದಲ್ಲಿ ಮತ್ತೊಂದು ಸಂಗತಿಯನ್ನು ಉಲ್ಲೇಖಿಸಬಹುದಾಗಿದೆ. ಹರಿಹರದೇವನ ರಗಳೆಗಳಲ್ಲಿ ಷಟ್‌ಸ್ಥಲಶಾಸ್ತ್ರ-ಅಷ್ಟಾವರಣವಿವೇಕಗಳು ಬಹು ಸೂಕ್ಷ್ಮವಾಗಿ ಹೇಳಲಾಗಿವೆ. ಅವುಗಳ ಆಚರಣೆಯಿಂದ ಪಡೆದ ಅನುಭವ ಶಾಂತಿ-ಸಮಾಧಾನಗಳು ಮಾತ್ರ ವಿಸ್ತಾರವಾಗಿ ವರ್ಣಿತವಾಗಿವೆ. ಗುರುವಿನಿಂದ ಪಡೆದ ದೀಕ್ಷೆ ಮಂತ್ರಗಳು ಗೂಢವಾದವುಗಳು ಅವು ಜನಸಾಮಾನ್ಯಕ್ಕೆ ತಿಳಿಯಲಾರವು; ಒಂದುವೇಳೆ ಅವುಗಳನ್ನು ಹೇಳಿಬಿಟ್ಟರೆ ಅವುಗಳ ದುರುಪಯೋಗವಾಗಿ ಮರುಳ ವೇದಾಂತಿಗಳ ಸುಳಿದಾಟವು ಹೆಚ್ಚಾದೀತೆಂಬ ಭಾವನೆಯು ಆತನದೆಂದು ತೋರುತ್ತದೆ.

ಇವಲ್ಲದೆ ಯೋಗೀಶ್ವರರಿಗೆ ಯೋಗ್ಯವಾದ ಗುರುಭಕ್ತಿ, ನಿಷ್ಕಾಮ, ಅರಿವು, ಆಚಾರ, ನೀತಿ, ದಯೆ, ಜಂಗಮಪ್ರೇಮ, ಶಮೆ, ಶಾಂತಿ, ದಾಂತಿ, ಚಾತುರ್ಯ, ಔದಾರ್ಯ, ನಿಷ್ಠೆ, ಸಾಮರ್ಥ್ಯ ಮುಂತಾದ ಸದ್ಗುಣಗಳೆಲ್ಲ ಆತನಲ್ಲಿ ಪರಿಪೂರ್ಣವಾಗಿದ್ದುವೆಂದು ರಾಘವಾಂಕನು ಹೇಳುತ್ತಾನೆ. ಇಂತಹ ಮಹಾನುಭಾವನನ್ನು ಹೊಗಳದವರಾರು ?

ಹರಿಹರನ ಗ್ರಂಥಗಳ ವಿಮರ್ಶೆಯಲ್ಲಿ ಆತನ ಗುಣಸ್ವಭಾವಗಳು ಅಡಕವಾಗಿರುವುದರಿಂದ ಅವುಗಳನ್ನು ವಿವೇಚಿಸುತ್ತ ತುಸು ಅಡ್ಡದಾರೀ ಹಿಡಿಯಬೇಕಾಯಿತು. ಇನ್ನು ಮೇಲೆ ಆತನ ಗ್ರಂಥಗಳ ಕಡೆಗೆ ತಿರುಗುವ, ಗಿರಿಜಾಕಲ್ಯಾಣದ ಕಥಾಸಂವಿಧಾನವು ತೀರ ಸುಲಭವಾಗಿದೆ. ನೇಮಿಚಂದ್ರನಲೀಲಾವತಿಯ ಮುಖ್ಯ ಕತೆಗೆ ಸಂಬಂಧವಿಲ್ಲದೆ ಬಂದಿರುವ ಸನ್ನಿವೇಶಗಳಂತೆ ಇದರಲ್ಲಿಲ್ಲ. ಗಿರಿಜಾಕಲ್ಯಾಣವೆಂದ ಕೂಡಲೆ ಕಥಾವಸ್ತುವು ಎಲ್ಲರಿಗೂ ತಿಳಿಯುವಂತಿದೆ. ಶಿವಕಾಮರಯುದ್ಧ, ರತಿವಿಲಾಪ, ಪಾರ್ವತಿಯ ತಪಸ್ಸು, ಪರಮಾತ್ಮಪ್ರತ್ಯಕ್ಷ, ಶಿವಪಾರ್ವತಿಯರ ವಿವಾಹ ಮುಂತಾದ ವಿಷಯಗಳು

೬೭. ಪುರಘರ ಮಹಾತ್ಮೆ-ಶಿವಾನುಭವ ಗ್ರಂಥಮಾಲಾ ನಂ. ೩೭, ಪುಟ ೫೩.

ಬೇರೆಬೇರೆ ಸನ್ನಿವೇಶಗಳು. ಈಕಾವ್ಯದಲ್ಲಿ ಹರಿಹರದೇವನು ಅದ್ಭುತರಮ್ಯತೆಗೆ ಮೆಚ್ಚಿದವನೆಂದು ಮೇಲೆಯೇ ಹೇಳಿದೆ. ಇದರ ಮತ್ತೊಂದು ಉದಾಹರಣೆಯು ಪರಮಾತ್ಮಪ್ರತ್ಯಕ್ಷ. ಈಸನ್ನಿವೇಶದಲ್ಲಿ ಮಾತುಗಾರಿಕೆ, ಆತಿಥ್ಯ, ಮುಗ್ಧೆಯಲ್ಲಿರುವ ವಿನಯಅಭಿಮಾನಗಳು, ಲಜ್ಜೆ ಮುಂತಾದ ವಿಷಯಗಳನ್ನು ಹರೀಶ್ವರನು ಎತ್ತಿದಂತೆ ಮತ್ತಾರೂ ಎತ್ತಿಲ್ಲ. ಸುಮಾರು ಮುನ್ನೂರು ವರ್ಷಗಳ ತರುವಾಯ ರತ್ನಾಕರವರ್ಣಿಯು ಮಾತ್ರ ತನ್ನ ಭರತೇಶವೈಭವದಲ್ಲಿ ಈತನ ಈ ಎಲ್ಲ ಗುಣಗಳನ್ನು ಸರಿಗಟ್ಟುತ್ತಾನೆ. ವರ್ಣನಾವಿಷಯಗಳು ಯೋಗ್ಯ ಮರ್ಯಾದೆಯನ್ನು ಮಿಕ್ಕದೆ ಅಲ್ಲಲ್ಲಿ ಹೆರಣವಾಗಿವೆ. ಶೈಲಿಯು ಮಾತ್ರ ಸಂಪೂರ್ಣ ಬೆಳವಣಿಗೆಗೊಂಡು ರೂಪುಗೊಂಡಿರಲಿಲ್ಲವೆಂದು ತೋರುತ್ತದೆ. ಅಲ್ಲಲ್ಲಿ ಸಂಸ್ಕೃತಮಯವಾಗಿ, ನಡುನಡುವೆ ಕನ್ನಡಮಯವಾಗಿ, ಕೆಲವೆಡೆಯಲ್ಲಿ ಸಂಸ್ಕೃತಕನ್ನಡಮಿಶ್ರವಾಗಿ ಪಂಡಿತವಾಣಿಯಾಗಿದೆ. ಅಂತ್ಯದಲ್ಲಿ ಮಾತ್ರ ರಗಳೆಯ ಭಾಷಾಶೈಲಿಯನ್ನು ಹೋಲುವ ಒಂದು ವಿಧವು ರೂಪುಗೊಳ್ಳುತ್ತಿರುವಂತೆ ತೋರುತ್ತದೆ. ರಗಳೆಗಳ ವಿಷಯವಾಗಿ ಇಲ್ಲಿ ವಿಮರ್ಶೆಯನ್ನು ಸಂಕ್ಷೇಪವಾಗಿ ಬರೆಯುವುದಕ್ಕಿಂತ ಪ್ರೊ. ಟಿ. ಎಸ್, ವೆಂಕಣಯ್ಯನವರು ಪ್ರಕಟಿಸಿದ ಬಸವರಾಜದೇವರ ರಗಳೆಯ ಪೀಠಿಕೆಯ XII–XXIX ಪುಟಗಳನ್ನು ನೋಡಬಹುದು. "ರಗಳೆಗಳನ್ನು ಬರೆದದ್ದಕ್ಕಾಗಿ ಹರಿಹರನು ತಲೆಬಗ್ಗಿಸಬೇಕಾದದ್ದೇನೂ ಇರಲಿಲ್ಲ. ಒಂದು ವೇಳೆ ಆತನು ಗಿರಿಜಾಕಲ್ಯಾಣವನ್ನು ರಚಸದೆಯೇ ಹೋಗಿದ್ದರೂ ಆತನಿಗೆ ಕನ್ನಡ ಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿ ಬರುತ್ತಿರಲಿಲ್ಲ. ಸಾಹಿತ್ಯದೃಷ್ಟಿಯಿಂದ ಈ ರಗಳೆಗಳು ಅನೇಕಚಂಪೂಗ್ರಂಥಗಳಿಗಿಂತಲೂ ಹೆಚ್ಚು ಆದರಣೀಯವೂ ಗೌರವಾರ್ಹವೂ ಆಗಿವೆ.೬೮" ಎಂಬ ಅವರ ಒಂದೇ ಒಂದು ಅವತರಣದಿಂದ ಈ ವಿಷಯವನ್ನು ಇಲ್ಲಿ ಮುಗಿಸುತ್ತೇವೆ.

(ಹರಿಹರನ ರಗಳೆಗಳಲ್ಲಿ ಕೆಲವು ಐತಿಹಾಸಿಕ ಸಂಗತಿಗಳು ದೊರೆಯುತ್ತವೆ. | ಬಸವರಾಜದೇವರ ರಗಳೆಯಂತೂ ಐತಿಹಾಸಿಕ ಗ್ರಂಥವಾಗಿದೆ.

೬೮. ಬಸವರಾಜದೇವರ ರಗಳೆ–ಪ್ರೊ. ಟಿ. ಎಸ್' ವೆಂಕಣ್ಣಯ್ಯನವರ ಪ್ರಕಟನೆ, ಪೀಠಿಕೆ ಪುಟ XXI.

ಕೆಲವು ಐತಿಹಾಸಿಕ ಸಂಗತಿಗಳ ಬಗ್ಗೆ ಆಕ್ಷೇಪವಿದ್ದಂತೆ ತೋರುತ್ತದೆ. ಅವುಗಳನ್ನು ಇಲ್ಲಿ ತುಸು ವಿವೇಚಿಸುವುದು ಯೋಗ್ಯವಾಗಿದೆ.

೧. ''ಎಲ್ಲೈ ಮಗನೆ ಬಸವ ಬಸವಣ್ಣ ಬಸವಿದೇವ, ನಿನ್ನಂ ಮಹೀತಳದೊಳು ಮೆರೆದಪೆವು. ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು''[೧೯] ಈ ವಾಕ್ಯದಿಂದ ಮಂಗಳವಾಡವು ಬಿಜ್ಜಳನ ರಾಜಧಾನಿಯಾಗಿತ್ತೆಂದು ಸಿದ್ಧವಾಗುತ್ತದೆ. ಇದಕ್ಕೆ ಶಾಸನಗಳ ಆಧಾರವೂ ದೊರೆಯುತ್ತದೆ. ಭಿವಘಾಟದ ಶಿಲಾಶಾಸನದಲ್ಲಿ ರಾಯಮುರಾರಿಸೋವಿದೇವನು ( ಕಲಚೂರಿ ಬಿಜ್ಜಳನ ಮಗನು ) ಮಂಗಳವಾಡದ ಸ್ಥಿರಶಿಬಿರದಲ್ಲಿದ್ದನೆಂದು ಹೇಳಿದೆ. ಶಕ ೧೦೬೯ ರ ಮ್ಹಸವಾಡದ ಶಿಲಾಶಾಸನದಲ್ಲಿಯೂ ಮಂಗಳವೇಡವು ಬಿಜ್ಜಳನ ಸ್ಥಿರಶಿಬಿರವಾಗಿತ್ತೆಂದು ಉಲ್ಲೇಖವಿದೆ.[೨೦]

೨. ಪ್ರಭುದೇವರು ಬಸವಣ್ಣನಲ್ಲಿಗೆ ಬಂದು ಆತನನ್ನು ಕಂಡು

'' ಹರನ ನಿಲವಿನ ಪರಿಯನೊಲ್ಮೆಯಿಂ ತೋರುತುಂ ''

ಎಂದು ಪ್ರಭುದೇವರ ರಗಳೆಯಲ್ಲಿ ಪುಟ ೧೪ ಹೇಳಿರುವುದರಿಂದ ಇದು ಬಸವಣ್ಣನವರ ಅಂತ್ಯಕಾಲದಲ್ಲಿ ಅವರಿಗೆ ಮಾಡಿದ ಉಪದೇಶವೆಂದು ತೋರುತ್ತದೆ. ಏಕೆಂದರೆ ಅಲ್ಲಿಂದ ಅವರು ಸೊನ್ನಲಿಗೆಗೆ ಹೋಗಿ, ಸಿದ್ಧರಾಮನನ್ನು ಕಂಡು ಶ್ರೀಪರ್ವತಾಭಿಮುಖರಾದರೆಂದು ಅದೇ ಪುಟದಲ್ಲಿ ಹೇಳಿದೆ. ಶ್ರೀಗುರುವು ಮಹಾದೇವಿಯಕ್ಕನಿಗೆ ದರ್ಶನವಿತ್ತ ಕೂಡಲೆ ಭವಿಯ ಸಂಗವನ್ನು ತ್ಯಜಿಸಿ ವಿರಕ್ತೆಯಾದಂತೆ ಮಹಾದೇವಿಯಕ್ಕನರಗಳೆಯಲ್ಲಿ ಹೇಳಿದೆ.[೨೧] ಈ ಶ್ರೀಗುರುವು ಪ್ರಭುದೇವರೇ ಆಗಿರಬೇಕು. ಅವರು ಶ್ರೀಪರ್ವತದ ಕದಳೀವನಕ್ಕೆ ಬಂದಮೇಲೆ

. . . . . . ಸಂಸೃತಿಯ ಕಟ್ಟೆಯಂ
ಮುರಿದಿರ್ದ ಹಾವುಗಳ ಬಳ್ಳಿಯಂ ದಾಂಟುತುಂ
ಘರಿಘಿರಿಲನರಿವ ಬಾಳೆಗಳನಲ್ಲಾಡುತುಂ
. . . . . . . .

---

೧೯. ಅದೇಗ್ರಂಥ ಪುಟ ೩೧. ೨೦. ಭಾರತ ಇತಿಹಾಸ ಸಂ. ಮಂ. ತ್ರೈಮಾಸಿಕ, ಚೈತ್ರ ೧೮೫೬ [ಕ್ರಿ. ಶ. ೧೯೩೪] ನೆಯ ಸಂಚಿಕೆ ಪುಟ ೨೩. ೨೧. ಮಹಾದೇವಿಯಕ್ಕನ ರಗಳೆ [ಸದ್ಧರ್ಮಗ್ರಂಥಮಾಲಾ ೧೩] ಪುಟ ೫೫.

ಬಂದೊಡ್ಡಿದಾಯುಧಂಗಳನೊಡೆದು ಮುರಿವುತುಂ
ಮಾನಿಸರ ಮೋರೆಯಾನೆಯ ದೇಹದವರ್ಗಳಂ

. . . . . . . .

ಪೇಳಬಾರದ ಭಯಾನಕಮುಮಂ ಕಾಣುತುಂ
ಪೊಸತೆನುತ್ತಲ್ಲಮಪ್ರಭು ನಡೆದು ಬರುತಿರ್ದ.೭೨

ಇಲ್ಲಿ ಪ್ರಭುದೇವರನ್ನು ಶ್ರೀಪರ್ವತಕ್ಕೆ ಹಿಂಬಾಲಿಸಿದ ಭಕ್ತಮಾಹೇಶ್ವರರನ್ನು ಬೆನ್ನಟ್ಟಿದ ರಾಯಮುರಾರಿಸೋವಿದೇವನ ಒಂದು ಸೈನ್ಯದ ಕೂಡ ಆದ ಯುದ್ಧವನ್ನು ವ್ಯಂಗ್ಯವಾಗಿ ಹರಿಹರನು ವರ್ಣಿಸಿದಂತೆ ತೋರುತ್ತದೆ.]

೩. ರೇವಣಸಿದ್ಧೇಶ್ವರನು ಜಯಂತಿಗೆ (ಬನವಾಸಿಗೆ) ಹೋಗಿ, ಅಲ್ಲಿ ವಿಕ್ರಮಾದಿತ್ಯನಿಗೆ "ಕೈಯ್ಯ ಕಠಾರಿಯುಂ ತೋರಿಸುತ್ತಿಂತೆಂದಂ. ಉಡುವೊಡೆ ದಿವ್ಯವಸ್ತ್ರಂ, ತೊಡುವೊಡೆ ದಿವ್ಯಾಭರಣಂ, ಉಣ್ಬೊಡಮೃತಾನ್ನಂ, ಏರುವೊಡೆ ವಾಹನಂ, ಕುಡುವೊಡೆ ದೇವಾಂಗನೆ, ಕಾದುವೊಡೆ ನಿಶಿತಾಯುಧಂ ಒಪ್ಪುದಿಂತಿದಂ ಕುಡಲ್ಬಂದೆನೆಂದು ಮತ್ತಾ ಕಠಾರಿಯಂ ಕರುಣಿಸಿ ಕೊಟ್ಟಂ೭೩" ಹಾನಗಲ್ಲಿನ ಕದಂಬರಾಜರಲ್ಲಿ ಜಯಸಿಂಹನು ಚಾಲುಕ್ಯರ ೬ನೆಯ ವಿಕ್ರಮಾದಿತ್ಯನ ತಂಗಿ ಅಕ್ಕಾದೇವಿಯನ್ನು ಮದುವೆಯಾಗಿದ್ದನು. ಈ ಜಯಸಿಂಹನ ಮಕ್ಕಳು ಮಯೂರವರ್ಮ, ತೈಲ, ಶಾಂತಿವರ್ಮ, ಚೋಕಿದೇವ ವಿಕ್ರಮ ಎಂದು ಐವರು. ಕಾದಂಬ ವಿಕ್ರಮನು ಪಟ್ಟವೇರಿದಂತೆ ಐತಿಹಾಸಿಕ ಆಧಾರಗಳು ದೊರೆಯುವುದಿಲ್ಲ. ಹರಿಹರದೇವನಾದರೊ ವಿಕ್ರ ವಿಕ್ರಮಾದಿತ್ಯನು ಅರಸನಾಗಿದ್ದಂತೆ ಹೇಳುತ್ತಾನೆ. ಆದುದರಿಂದ ಈತನು ೬ನೆಯ ಅಥವಾ ೫ನೆಯ ಚಾಲುಕ್ಯ ವಿಕ್ರಮನಾಗಿರಬಹುದೋ. ೫ನೆಯ ವಿಕ್ರಮನಾಗಿರುವುದೇ ಹೆಚ್ಚು ಸಂಭವವಿರಬಹುದೋ? ಏಕೆಂದರೆ ವಿಕ್ರಮಾದಿತ್ಯನು ೧೧೨೬ರ ವರೆಗೆ ಆಳಿದ್ದಾನೆ. ಮತ್ತೆ ರೇವಣಸಿದ್ಧೇಶ್ವರನು ಮುಂದೆ

. . . . . ಮಂಗಳವಾಡದೊಳ್ಪೊಕ್ಕು
ಸಂತತಂ ಬಿಜ್ಜಳನ ಸಭೆಯೊಳ್ಮನಂ ಮಿಕ್ಕು
ಪಾಣಿಪಾತ್ರೆಯನಾಂತು ನಿಂದಿರ್ಪ ಸಮಯದೊಳ್ ೭೪

---

೭೨. ಹರಿಹರನ ರಗಳೆಗಳು—ಶಿವಾನುಭವಗ್ರಂಥಮಾಲಾ—ಭಾಗ ೨; ಪುಟ ೧೫.

೭೩. ,, ,, ,, ,, ೨೫.

೭೪. ಹರಿಹರನ ರಗಳೆಗಳು ಬಾಗ ೨. ಶಿವಾನುಬವಗ್ರಂಥಮಾಲಾ ಪುಟ ೨೯

ಎಂದು ಹೇಳಿರುವುದರಿಂದ ರೇವಣಸಿದ್ಧೇಶನು ಬಿಜ್ಜಳನ ಸಮಕಾಲೀನವಾಗುತ್ತಾನೆ. ಇದಲ್ಲದೆ ಚಾಲುಕ್ಯರಲ್ಲಿ ಬನವಾಸಿಯನ್ನು ರಾಜಧಾನಿಯನ್ನು ಮಾಡಿಕೊಂಡ ಮೊದಲನೆಯ ಚಕ್ರವರ್ತಿಯಂದರೆ ೩ನೆಯ ತೈಲಪನು. ಈತನಿಗೆ ನೂರ್ಮಡಿ ತೈಲ, ತ್ರೈಲೋಕ್ಯಮಲ್ಲ ಎಂಬ ಬಿರುದುಗಳಿದ್ದುವು. ಬಹುತರವಾಗಿ ಹರಿಹರದೇವನು ಈತನನ್ನೇ ವಿಕ್ರಮನೆಂದು ಸಂಬೋಧಿಸಿರುವ ಸಂಭವವು ಹೆಚ್ಚಿದೆ. ಬಿಜ್ಜಳನು ೧೧೫೬ ರಲ್ಲಿ ತನ್ನದೊಂದು ಶಕವನ್ನು ಆರಂಭಿಸಿರುವುದರಿಂದ ಆಸುಮಾರಿಗೆ ಆತನು ತ್ರೈಲೋಕ್ಯಮಲ್ಲನನ್ನು ಮೂಲೆಗೊತ್ತಿ ಚಾಲುಕ್ಯರಾಜ್ಯವನ್ನು ಆಕ್ರಮಿಸಿರಬೇಕೆಂದು ಇತಿಹಾಸಪಂಡಿತರ ಅಭಿಪ್ರಾಯವಿದೆ. ತ್ರೈಲೋಕ್ಯಮಲ್ಲನೂ ಬಿಜ್ಜಳನೂ ಸಮಕಾಲೀನರಾಗಿರುವುದರಿಂದ ಇಲ್ಲಿ ಹರಿಹರದೇವನು ೫ನೆಯ ಅಥವಾ ೬ನೆಯ ವಿಕ್ರಮಾದಿತ್ಯನ ಹೆಸರು ಸೂಚಿಸಿರುವನೆಂದು ಊಹಿಸುವುದಕ್ಕಿಂತ ತ್ರೈಲೋಕ್ಯಮಲ್ಲನಿಗೆ ವಿಕ್ರಮಾದಿತ್ಯನೆಂದಿದ್ದಾನೆಂದು ಊಹಿಸುವುದು ಸಯುಕ್ತಿಕವಾಗಿದೆ. ರೇವಣಸಿದ್ಧೇಶ್ವರಪುರಾಣದಲ್ಲಿಯೂ "ಚಾಳೂಕ್ಯವಿಕ್ರಮ"ನ ಹೆಸರು ಬಂದಿದೆ

೪. ರೇವಣಸಿದ್ಧರು ಮುಂದೆ ಕೊಲ್ಲಾಪುರಕ್ಕೆ ಹೋಗಿ ಅಲ್ಲಿ ಪ್ರಸಿದನಾದ ಗೋರಕನಾಥನೆಂಬ ಯೋಗಿಯನ್ನು ಕಂಡು ಆತನನ್ನು ಪವಾಡದಿಂದ ಸೋಲಿಸಿದು.[೭೫]

ಉತ್ತಮಾಂಗಸ್ಥಲ ಶಿವಲಿಂಗ ಸಪನ್ನೆ [೭೬]

ಎಂಬ ಕೊಲ್ಲಾಪುರದ ಮಹಾಲಕ್ಷ್ಮಿಯ ವರ್ಣನೆ, ಗೋರಕನಾಥನ ಗುಡಿ, ಅಳತಿಗೆಯ ಗುಡ್ಡದ ಮೇಲಿನಪ್ರಭುದೇವರ ಗುಡಿ ಮುಂತಾದ ಕುರುಹುಗಳು ಇದಕ್ಕೆ ಸಾಕ್ಷಿಯಾಗಿವೆ,

೫. ರೇವಣಸಿದ್ಧೇಶ್ವರನು "ಚೋಳದೇಶಮಂ ಪೊಕ್ಕು ರಾಜೇಂದ್ರಚೋಳನಂ ಕಾಣಿಸಿಕೊಂಡು ಕರುಣಮನಿತ್ತು ಘನವಿಸ್ತರಮಪ್ಪ ನಿಳಯದ ಸಿಂಹವಿಷ್ಟರಕ್ಕೆ ಬಿಜಯಂಗೈದು ಚೋಳನ ಕುಮಾರಿಯ ವಿವಾಹಮಾಗೆ ಚೋಳಮಹಾರಾಜನಿಂ ಪೊಡಮಡಿಸಿಕೊಳುತ್ತಂ . . . . ಮಂಗಳವಾಡಕ್ಕೆ ಮರಳಿ ಬರ್ಪಾಗಳ್[೭೭]" ಎಂದು ಹರೀಶ್ವರನು ಹೇಳುತ್ತಾನೆ. ಇಲ್ಲಿ ಉಕ್ತ

---

೭೫, ಅದೇಗ್ರಂಥ ಪುಟ ೩೦, ೭೬ ಅದೇಗ್ರಂಥ ಪುಟ ೩೧ ೭೭. ಅದೇಗ್ರಂಥ ಪುಟ ೩೬,

ನಾದ ರಾಜೇಂದ್ರ ಚೋಳನು ಮೊದಲನೆಯ ಮತ್ತು ಇಮ್ಮಡಿ ರಾಜೇಂದ್ರ ಚೋಳರಾಗಿರದೆ ಇಮ್ಮಡಿ ರಾಜರಾಜನಾಗಿರಬೇಕೆಂದು ತೋರುತ್ತದೆ. ಈತನೇ ಬಿಜ್ಜಳನ ಸಮಕಾಲೀನನು. ಇವನ ತಂದೆ ವಿಕ್ರಮ ಚೋಳನು ಧರ್ಮಸಹಿಷ್ಣುವಾಗಿದ್ದನು. ಇವನಕಾಲದ ಕಂಜೀವರಂದೊಳಗಿನ ಗುಡಿಯೊಳಗಿನ ಪುಡುತ್ತಾಳ್ವಾರ್ ಮತ್ತು ಪೊಯ್ಗೈಯಾಳ್ವಾರ್ ಎಂಬ ಇಬ್ಬರು ವೈಷ್ಣವಆಳ್ವಾರರ ವರ್ಧಂತಿಯ ಉತ್ಸವಕ್ಕೆಂದು ದತ್ತಿಗಳು ಬಿಡಲಾಗಿವೆ. ಒಬ್ಬ ಚೋಳರಾಜನು ವಿಷ್ಣುಪ್ರತಿಮೆಯನ್ನು ಮಾಡಿಸಿ ಪ್ರತಿಷ್ಠೆಯುದೆಸೆಯಿಂದ ರೇವಣಸಿದ್ಧೇಶ್ವರನನ್ನು ಕೇಳಿಕೊಂಡಂತೆ ಹೇಳಿದೆ[೭೮]. ಇಲ್ಲಿ ಉಕ್ತನಾದ ಚೋಳರಾಜನು ವಿಕ್ರಮಚೋಳನೋ ಏನೋ ತಿಳಿಯದು. ಇಮ್ಮಡಿ ರಾಜರಾಜಚೋಳನ ಅಣ್ಣ ಇಮ್ಮಡಿ ಕುಲೋತ್ತುಂಗನಕಾಲದಲ್ಲಿ ಸೆಕ್ಕಿಲಾರ್ ಎಂಬ ಹೆಸರಿನ ಕವಿಯು "ಪೆರಿಯಪುರಾಣಂ" ಎಂಬ ಅರವತ್ತು ಮೂವರು ಪುರಾತನರ ಚರಿತ್ರಗ್ರಂಥವನ್ನು ಬರೆದನು. ಈ ಪುರಾತನರು ವೀರಶೈವರಿಗೂ ಪೂಜ್ಯರು. ಆದುದರಿಂದ ಧರ್ಮಸಹಿಷ್ಣುವಾದ ವಿಕ್ರಮಚೋಳನ ಬಗ್ಗೆ ಅನಾದರವನ್ನೂ ಕುಲೋತ್ತುಂಗ ಚೋಳನ ಬಗ್ಗೆ ಆದರವನ್ನೂ ಹರಿಹರದೇವನು ವ್ಯಕ್ತಗೊಳಿಸಿರಬಹುದೋ ಎಂಬುದೊಂದು ಸೂಕ್ಷ್ಮವಾದ ಸಂದೇಹವು ಉಂಟಾಗುತ್ತದೆ. ಏನೇ ಇರಲಿ. ಚೋಳರಾಜ ಕುಮಾರಿಯ ಮದುವೆಯು ರೇವಣಸಿದ್ಧೇಶ್ವರನ ಕೂಡ ಆದ ಸಂಗತಿಯು ಶಿಲಾಶಾಸನಗಳಲ್ಲಿ ಬಂದಿಲ್ಲ.

೬. ಬಸವರಾಜದೇವರ ರಗಳೆಯಲ್ಲಿ ಬಸವಣ್ಣನವರ ಸಮಕಾಲೀನರಾದ ಶಿವಶರಣರ ಹೆಸರುಗಳು ಬಂದಿವೆ. ಅವುಗಳನ್ನು ಕೆಳಗೆ ಕೊಟ್ಟಿದೆ

"ಕಂಬಳಿಯನಾಗಿದೇವನೆಂಬ ಹಿರಿಯ ಮಾಹೇಶ್ವರನ ಮನೆಯಂ ಪೊಕ್ಕು[೭೯]".

ಎಸೆವ ಕಿನ್ನರಿಬೊಮ್ಮತಂದೆಗಳು ಬರುತಮಿರ್ಪ[೮೦]
. . . . . . ನಡೆತಂದನಲ್ಲಮಂ
ಕಂತುಹರನವತಾರನ ತಾತನಲ್ಲಮಂ,

---

೭೮. ರೇವಣಶಿದ್ಧೇಶ್ವರ ರಗಳೆ ಪುಟ ೨೧. ೭೯. ಪುಟ ೬೭. ೮೦. ಪುಟ ೭೨ ೮೧. ಪುಟ ೮೯.

ಲೆಂಕರಸನೆಂಬ ಭಕ್ತಂ ಕಂಡು;[೮೧]
ಬಿಚ್ಚಿ ಬಾಚಯ್ಯಂಗಳೊಲಿದು ಬರೆ ಕಾಣುತಂ,
ಕಕ್ಕಯ್ಯನೆಸೆವ ಭಕ್ತಿಯನೊರೆದು ನೋಡುತಂ,
ಮೋಳಿಗೆಯ ಮಾರಯ್ಯಗಳ ಮನವ ನೋಡುತಂ,[೮೨]
ಮಡಿವಾಳ ಮಾಚಯ್ಯನುರವಣೆಯನಾನುತಂ.[೮೩]

ಇವುಗಳಲ್ಲದೆ ಕರಿಕಾಳಚೋಳನ ಹೆಸರು ಬಂದಿದೆ. ಅದನ್ನು ಇತಿಹಾಸ ಪಂಡಿತರು ಒಪ್ಪುವುದಿಲ್ಲ.[೮೪] ಬಸವರಾಜದೇವರ ರಗಳೆಯಲ್ಲಿ (ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು. ಇದು ಅಪೂರ್ಣಗ್ರಂಥ) ಬಸವಣ್ಣನವರ ಚರಿತ್ರಕ್ಕೆ ಸಂಬಂಧಪಟ್ಟ ಅನೇಕ ಹೊಸ ಸಂಗತಿಗಳು ಹೇಳಲಾಗಿವೆ. ಅವುಗಳನ್ನೆಲ್ಲ ಇಲ್ಲಿ ತೋರಿಸಿಕೊಡುವುದೆಂದರೆ ವಿಸ್ತಾರಭಯವನ್ನುಂಟುಮಾಡುತ್ತಿದೆ.

ಈಚಿಕ್ಕ ಪ್ರಬಂಧದಲ್ಲಿ ಹರಿಹರದೇವನ ಚರಿತ್ರವನ್ನು ಸಂಕ್ಷೇಪವಾಗಿ ಹೇಳಲು ಪ್ರಯತ್ನ ಮಾಡಿದ್ದಾಗಿದೆ. ಹರಹರಭಕ್ತರಾರಾದರೂ ಆತನ ಚರಿತ್ರವನ್ನು ವಿಸ್ತಾರವಾಗಿ ಬರೆದು ಕನ್ನಡಸಾಹಿತ್ಯಭಕ್ತರ ಕುತೂಹಲವನ್ನು ದೂರಮಾಡಬೇಕೆಂಬುದೊಂದು ನಮ್ರ ವಿಜ್ಞಾಪನೆನನ್ನದು ಅವರಲ್ಲಿ.

**ಕೆ. ಜಿ. ಕುಂದಣಗಾರ.**



೮೨. ಪುಟ ೯೧. ೮೩. ಬಸವರಾಜದೇವರ ರಗಳೆ ಪುಟ ೯೧. ೮೪. Mysore Gazetter, vol. II, Part II P. 1142 Edited by C. Hayavadana Rao in 1930.



ಹಂಪಿಯಲ್ಲಿರತಕ್ಕ ಹೇಮಕೂಟದ ದೃಶ್ಯ

# ಹರಿಹರದೇವನ ಕಾಲ.



ಶ್ರೀ. ಕೆ. ಜಿ. ಕುಂದಣಗಾರ. ಶ್ರೀ. ಎಸ್. ಎಸ್. ಮೂಳವಾಡ

ಕನ್ನಡಸಾಹಿತ್ಯದ ಇತಿಹಾಸದಲ್ಲಿ ಅನೇಕ ಸಂದಿಗ್ಧ ವಿಷಯಗಳಿವೆ. ಅದರ ಫಲವಾಗಿ ಕನ್ನಡ ಕವಿಪುಂಗವರನೇಕರ ಕಾಲವನ್ನು ನಿರ್ದುಷ್ಟವಾಗಿ ನಿರ್ದೇಶಿಸಲು ಸಾಧ್ಯವಿಲ್ಲದಾಗಿದೆ. "ಸರಸ-ಮೃದುಮಧುರೋಪಮೆಗಳಿಂದ ವಸ್ತುಕ-ವರ್ಣಕದಿಂದ ಶಿವನಂ, ಶಿವಗಣಂಗಳನು ರಗಳೆಗಳಿಂದ ನುತಿಸಿ ವಚನದ ರಚನೆ ಹೆಚ್ಚುವಂತೆ ಗಿರಿಜಾಕಲ್ಯಾಣವಂ ರಚಿಸಿದ" ಶಿವಯೋಗ ಚಕ್ರೇಶ್ವರನಾದ ಹರಿಹರನೂ ಅಂತಹರಲ್ಲಿ ಒಬ್ಬನು. ಈತನ ಕಾಲದ ವಿಷಯವಾಗಿ ಅನೇಕ ಚರ್ಚೆ ಪ್ರತಿಚರ್ಚೆಗಳು ನಡೆದುವು, ಇನ್ನೂ ನಡದಿವೆ. ಹರಿಹರನ ಕಾಲದ ವಿಷಯವಾಗಿರುವ ಭಿನ್ನಾಭಿಪ್ರಾಯಗಳು ಹೀಗೆ:—

| | | |
|---|---|---|
| ೧. | ಕಿಟೆಲ್ | ೧೨೯೦ |
| ೨. | ಆರ್. ನರಸಿಂಹಾಚಾರ್ಯ | ೧೧೬೫ |
| ೩. | ವೆಂಕಟಸುಬ್ಬಯ್ಯ | ೧೨೬೦ (೧೩೦೦) |
| ೪. | ಬುದ್ಧಯ್ಯ ಪುರಾಣಿಕ | ೧೨೦೦ |

೧. ಕಿಟೆಲ್ ಸಾಹೇಬರು ಛಂದೋಂಬುಧಿಯ ಉಪೋದ್ಘಾತದಲ್ಲಿ ಹರಿಹರನ ಕಾಲದ ಪ್ರಸ್ತಾಪವೆತ್ತಿದ್ದಾರೆ.[೧] ಅವರ ವಾದವಿಷ್ಟು:— ರಾಘವಾಂಕಚಾರಿತ್ರದ ಆಧಾರದಿಂದ ಹರಿಹರ-ರಾಘವಾಂಕ-ಕೆರೆಯ ಪದ್ಮರಸರು ಸಮಕಾಲೀನರೆಂದು ಸಿದ್ಧವಾಗುತ್ತದೆ. ಅಲ್ಲದೆ ಆಕಾಲಕ್ಕೆ ಪಂಪಾಪುರದಲ್ಲಿ ದೇವರಾಜನೂ ಓರುಗಲ್ಲಿನಲ್ಲಿ ಕಾಕತೀಯ ರುದ್ರನೂ ಬೇಲೂರಿನಲ್ಲಿ ನರಸಿಂಹ ಬಲ್ಲಾಳನೂ ಅರಸರಾಗಿದ್ದರೆಂದು ತಿಳಿಯುತ್ತದೆ. ಏಕೆಂದರೆ ರಾಘವಾಂಕನು ದೇವರಾಜನ ಸಭೆಯಲ್ಲಿ ಹರಿಶ್ಚಂದ್ರಕಾವ್ಯವನ್ನು ಓದಿದನು; ಕಾಕತೀಯ ರುದ್ರನ ಆಸ್ಥಾನದಲ್ಲಿ ವೀರೇಶಚರಿತೆಯನ್ನು ಓದಿ ಕುಕವಿಗಳನ್ನು ಸೋಲಿಸಿ

೧. ನಾಗವರ್ಮನ ಕನ್ನಡಛಂದಸ್ಸು ಪು. ೫೩ ಕಿಟೆಲ್ ಸಾಹೇಬರ ಪ್ರತಿ, ೧೮೭೫.

ದನು; ನರಸಿಂಹಬಲ್ಲಾಳನ ಮಂತ್ರಿಯಾದ ಕೆರೆಯ ಪದ್ಮರಸನನ್ನು ಕಾಣಲು ಬೇಲೂರಿಗೆ ಹೋದನು. ರಾಘವಾಂಕನು ಹರಿಹರನ ಸೋದರದಳಿಯನು. ರಾಘವಾಂಕಚಾರಿತ್ರದ ಈಕಥೆಯ ಆಧಾರದಿಂದ ಕಿಟೆಲ್‌ಸಾಹೇಬರು ಮೇಲೆ ಉಕ್ತರಾದ ಮೂವರು ರಾಜರಿಗೂ ಅನ್ವಯಿಸುವ ಒಂದು ಕಾಲವನ್ನು ಊಹಿಸುತ್ತಾರೆ. ಹಂಪೆಯ ದೇವರಾಜ ( ೧೨೮೬–೧೩೨೮ ), ಓರುಗಲ್ಲಿನ ಕಾಕತೀಯರುದ್ರ ( ೧೨೯೨–೧೩೩೫ ), ಇವರಿಗೆ ಸಮಕಾಲೀನನಾದ ನರಸಿಂಹಬಲ್ಲಾಳನೆಂದರೆ ೧೨೮೩ ರಿಂದ ರಾಜ್ಯಭಾರಮಾಡಿದ ನರಸಿಂಹಬಲ್ಲಾಳನಾಗಿರಬೇಕು. ಇವರ ಕಾಲಕ್ಕೆ ಹರಿಹರನು ಕರಣಿಕನಾಗಿರಬೇಕು. ಆದುದರಿಂದ ಹರಿಹರನ ಕಾಲ ಸುಮಾರು ೧೨೯೦.

೨. ಮಹಾಮಹೋಪಾಧ್ಯಾಯ, ರಾವ್-ಬಹಾದ್ದೂರ್ ಆರ್. ನರಸಿಂಹಾಚಾರ್ಯರವರು ಈ ವಿಚಾರಸರಣಿಯನ್ನು ಒಪ್ಪುವುದಿಲ್ಲ. ಏಕೆಂದರೆ ಹರಿಹರಕವಿಯ ಗಿರಿಜಾಕಲ್ಯಾಣದ ಅನೇಕ ಪದ್ಯಗಳನ್ನು ಮಲ್ಲಿಕಾರ್ಜುನನು ತನ್ನ ಸೂಕ್ತಿಸುಧಾರ್ಣವದಲ್ಲಿ ಉದ್ಧರಿಸಿ ಬರೆದಿದ್ದಾನೆ. ಮಲ್ಲಿಕಾರ್ಜುನನ ಕಾಲ ಸು. ೧೨೪೫. ಅರ್ಥಾತ್ ಹರಿಹರನು ೧೨೪೫ಕ್ಕೆ ಮೊದಲು ಇದ್ದಿರಬೇಕು. ಅಲ್ಲದೆ ಸೋಮರಾಜನು ತನ್ನ ಉದ್ಭಟಕಾವ್ಯದಲ್ಲಿ ಹರಿಹರನನ್ನೂ ಕೆರೆಯ ಪದ್ಮರಸನನ್ನೂ ಸ್ತುತಿಸಿದ್ದಾನೆ. ಸೋಮರಾಜನಕಾಲ ೧೨೨೨. ಆದುದರಿಂದ ಹರಿಹರಪದ್ಮರಸರು ೧೨೨೨ಕ್ಕೆ ಮೊದಲು ಇದ್ದಿರಬೇಕು. ಅದಕ್ಕೆ ಮೊದಲು ಇದ್ದಿರಬಹುದಾದ ನರಸಿಂಹಬಲ್ಲಾಳನ ಆಸ್ಥಾನದಲ್ಲಿ ಈ ಕವಿಗಳು ಇದ್ದಿರಬೇಕು. ಹೊಯ್ಸಳಪರಂಪರೆಯಲ್ಲಿ ೧೨೨೨ಕ್ಕೆ ಮೊದಲು ಇದ್ದ ನರಸಿಂಹಬಲ್ಲಾಳನೆಂದರೆ ೧೧೪೧ ರಿಂದ ೧೧೭೩ ವರೆಗೆ ಆಳಿದ ನರಸಿಂಹಬಲ್ಲಾಳನೇ ಸರಿ. ಹರಿಹರನು ನರಸಿಂಹಬಲ್ಲಾಳನಲ್ಲಿ ಕರಣಿಕನಾಗಿದ್ದನೆಂದು ಪದ್ಮರಾಜಪುರಾಣ, ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ ಮತ್ತು ರಾಘವಾಂಕಚಾರಿತ್ರ ಈ ಗ್ರಂಥಗಳಿಂದ ತಿಳಿಯುತ್ತದೆ. ಈ ನರಸಿಂಹನ ಕಾಲಕ್ಕೆ ಅಂದರೆ ಸುಮಾರು ೧೧೬೫ ರಲ್ಲಿ ಹರಿಹರ ಮೊದಲಾದವರು ಇದ್ದಿರಬೇಕು. ಇದೇ ಸುಮಾರಿಗೆ ಕಾಕತೀಯ ರುದ್ರನೆಂಬ ಅರಸನಿದ್ದುದ್ದ

---

೨. ಕರ್ಣಾಟಕ ಕವಿಚರಿತೆ (೧೯೨೪) ಭಾಗ ೧, ಪುಟ ೨೨೪–೨೨೫.

(೧೧೬೨) ಶಾಸನಗಳಿಂದ ತಿಳಿಯುತ್ತದೆ. ಅವನಲ್ಲಿಗೆ ರಾಘವಾಂಕನು ಹೋಗಿರಬೇಕು. ರಾಘವಾಂಕಕವಿಯ ಕಾಲಕ್ಕೆ ಪಂಪಾಪುರದಲ್ಲಿ ದೇವರಾಜನಿದ್ದಂತೆಯೂ ಆತನು ೧೨೮೬ ರಿಂದ ೧೩೨೮ ರ ವರೆಗೆ ರಾಜ್ಯವಾಳಿದಂತೆಯೂ ಕಿಟೆಲ್‌ಸಾಹೇಬರು ಬ್ರೌನ್-ಸಾಹೇಬರ ಆಧಾರದ ಮೇಲೆ ಹೇಳಿದ್ದು ಸರಿಯಾಗಲಾರದು. ಏಕೆಂದರೆ ಆಕಾಲಕ್ಕೆ ಹಂಪೆಯಲ್ಲಿ ದೇವರಾಜನೆಂಬ ಅರಸನು ಇದ್ದನೆಂಬುದಕ್ಕೆ ಆಧಾರಗಳು ಇಲ್ಲ. ಆದುದರಿಂದ ಹರಿಹರನು ನರಸಿಂಹಬಲ್ಲಾಳನ (೧೧೪೩-೭೩) ಕಾಲದಲ್ಲಿ ಇದ್ದಿರಬೇಕು. ಕೆರೆಯ ಪದ್ಮರಸನು ಅದೇ ಅರಸನ ಮಂತ್ರಿಯಾಗಿರಬೇಕು. ಅದೇ ಕಾಲಕ್ಕೆ ಇದ್ದ ಕಾಕತೀಯ ರುದ್ರನ ಆಸ್ಥಾನಕ್ಕೆ ರಾಘವಾಂಕನು ಹೋಗಿರಬೇಕು. ಆದುದರಿಂದ ಹರಿಹರ ಮೊದಲಾದವರ ಕಾಲವನ್ನು ಸುಮಾರು ೧೧೬೫ ಎಂದು ಇಟ್ಟುಕೊಳ್ಳಬೇಕು.

೩. (ಅ) ಡಾ. ವೆಂಕಟಸುಬ್ಬಯ್ಯನವರು ಆಚಾರ್ಯರ ಮೇಲಿನ ಅಭಿಪ್ರಾಯವನ್ನು ಹೀಗೆ [೩]ಖಂಡಿಸುತ್ತಾರೆ:— ಹರಿಹರನನ್ನು ಸ್ತುತಿಸಿದ ಸೋಮರಾಜನ ಕಾಲವು ೧೫೨೨, ೧೨೨೨ ಅಲ್ಲ. ಆದುದರಿಂದ ಆಚಾರ್ಯರ ಮುಖ್ಯ ಆಧಾರವೇ ನಿರ್ಬಲವಾಗುತ್ತದೆ. **ಕೆರೆಯ ಪದ್ಮರಸ-ರಾಘವಾಂಕರು ಹರಿಹರನ** ಸಮಕಾಲೀನರೆಂದು ಹೇಳಲು ಬರುವುದಿಲ್ಲ. ಪದ್ಮರಾಜಪುರಾಣದಲ್ಲಿ ಉಕ್ತನಾದ ನರಸಿಂಹಬಲ್ಲಾಳನೆಂದರೆ **ನರಸಿಂಹಪುತ್ರನಾದ** ಮೂರನೆಯ ಬಲ್ಲಾಳನು. ಇವನ ಕಾಲ ೧೨೯೧ ರಿಂದ ೧೩೪೨. ಇವನ ಕಾಲಕ್ಕೆ ಕೆರೆಯ ಪದ್ಮರಸನು ಮಂತ್ರಿಯಾಗಿರಬೇಕು. ಆದರೆ ಹರಿಹರನು ಮಾತ್ರ ಸುಮಾರು ೧೨೬೦ ರಿಂದ ೧೨೭೦ ರ ವರೆಗೆ ತನ್ನ ಗ್ರಂಥಗಳನ್ನು ಬರೆದಿರಬೇಕು. ಏಕೆಂದರೆ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಗಿರಿಜಾಕಲ್ಯಾಣದೊಳಗಿನ ಪದ್ಯಗಳು ಉದ್ಧೃತವಾಗಿವೆ. ಮಲ್ಲಿಕಾರ್ಜುನನ ಕಾಲವು ಸುಮಾರು ೧೨೬೩. ವೀರಶೈವ ಪುರಾಣಗಳಲ್ಲಿ ಹೇಳಿರುವುದನ್ನೆಲ್ಲ ಸತ್ಯವೆಂದು ನಂಬಲು ಬರುವುದಿಲ್ಲ. ಆದುದರಿಂದ ಹರಿಹರನಿಗೆ ಕೆರೆಯ ಪದ್ಮರಸ, ರಾಘ

೩. ಡಾ. ವೆಂಕಟಸುಬ್ಬಯ್ಯನವರ ಕೆಲವು ಕನ್ನಡಕವಿಗಳ ಜೀವನಕಾಲವಿಚಾರ ಎಂಬ ಗ್ರಂಥದ ೨೬೨ರಿಂದ ಮುಂದಿನ ಪುಟಗಳು.

ವಾಂಕರಿಗೆ ಭಿನ್ನವಾದ ಕಾಲವನ್ನು ಅಂದರೆ ಸುಮಾರು ೧೨೬೦ ರಿಂದ ೧೨೭೦ ಎಂದು ಇಟ್ಟುಕೊಳ್ಳುವುದು ಉಚಿತವಾಗಿದೆ.

(ಬ) ಡಾ. ವೆಂಕಟಸುಬ್ಬಯ್ಯನವರ ಮೇಲಿನ ವಾದವನ್ನು ಮಹಾ ಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರವರು ಚರ್ಚಿಸಿ ಅದಕ್ಕೆ ಉತ್ತರ ಕೊಟ್ಟಿದ್ದಾರೆ.[೪] ಆಚಾರ್ಯರ ಕವಿಚರಿತೆಕಾರರ ಮುಖ್ಯವಾದವು ಸೋಮರಾಜನ ಕಾಲವನ್ನು ಅವಲಂಬಿಸಿದೆ. ಅಯ್ಯನವರು ಸೋಮರಾಜನ ಕಾಲವನ್ನು ೧೫೨೨ ಎಂದು ಹೇಳುವುದು ಸರಿಯಲ್ಲ. "ಸಾಸಿರದ ನಾನೂರ್ಸಂದ ನಾಲ್ವತ್ತು ನಾಲ್ಕು" ಎಂಬ ಪ್ರಯೋಗವನ್ನು ಅನುಸರಿಸಿ ಅಯ್ಯನವರು ವಾದ ಬೆಳಿಸಿದ್ದಾರೆ. ಇದೇ ಅಭಿಪ್ರಾಯವನ್ನು ಸಮರ್ಥ ಸಂಶೋಧಕರಾದ ಗೋವಿಂದಪೈಗಳವರೂ ಸಮರ್ಥಿಸುತ್ತಾರೆ. ಆದರೆ ಈ ಸಂದರ್ಭದಲ್ಲಿ ಕವಿಚರಿತೆಕಾರರು ಕೊಟ್ಟ ಉತ್ತರವು ಬಲವತ್ತರವಾಗಿದೆ. "ನಾನೂರ್ಸಂದ" ಎಂಬ ಪ್ರಯೋಗವು ವ್ಯಾಕರಣವಿರೋಧವಾಗಿದೆ. ಅದು "ನೂಱುಂ ಸಂದ" ಎಂಬುದಾಗಿ ಇರಬೇಕೆಂದು ಹೇಳಿ ಅವರು ಸೋಮರಾಜನ ಕಾಲವನ್ನು ೧೨೨೨ ಎಂದೇ ಇಟ್ಟುಕೊಳ್ಳಬೇಕೆಂದು ಅಭಿಪ್ರಾಯಪಡುತ್ತಾರೆ. ಹಾಗೂ ಅಯ್ಯನವರ ಇನ್ನುಳಿದ ಆಕ್ಷೇಪಣೆಗಳಿಗೂ ಸಮಾಧಾನ ಹೇಳಿದ್ದಾರೆ.

(ಕ) ಮೇಲಿನ ವಾದಕ್ಕೆ ಪ್ರತ್ಯುತ್ತರವಾಗಿ ಅಯ್ಯನವರು ಪ್ರಬುದ್ಧ ಕರ್ಣಾಟಕದಲ್ಲಿ ಬೇರೊಂದು ಲೇಖವನ್ನು ಪ್ರಕಟಿಸಿದ್ದಾರೆ.[೫] ಅದರಲ್ಲಿ ಅವರು ಆಚಾರ್ಯರ ವಾದವನ್ನು ಪುನಃ ಖಂಡಿಸಲು ಪ್ರಯತ್ನ ಮಾಡಿದ್ದಾರೆ. ಆದರೆ ಅದರಲ್ಲಿ ಹರಿಹರನಿಗೆ ಅನ್ವಯಿಸಬಹುದಾದ ಮಾತುಗಳು ಹೆಚ್ಚಾಗಿಲ್ಲ. ರಾಘವಾಂಕನ ಸಂಬಂಧದಲ್ಲಿ ಉಕ್ತನಾದ ಪ್ರತಾಪರುದ್ರನ ಪ್ರಸ್ತಾಪವೇ ಹೆಚ್ಚಿದೆ. ಅವನು ೧೨೯೨ ರಿಂದ ೧೩೩೫ರ ವರೆಗೆ ಆಳಿದವನೇ ಆಗಿರಬೇಕು. ಆದುದರಿಂದ ಅವನ ಆಸ್ಥಾನಕ್ಕೆ ಹೋದ ರಾಘವಾಂಕನೂ ಅವನ ಮಾವನಾದ ಹರಿಹರನೂ ಸುಮಾರು ೧೩೦೦ ರಲ್ಲಿ ಇರಬೇಕಾಗುತ್ತದೆ.

---

೪. ಕರ್ಣಾಟಕ ಕವಿಚರಿತೆ ಭಾಗ ೩ರ ಅವತರಣಿಕೆಯಲ್ಲಿ ಡಾ. **ವೆಂಕಟಸುಬ್ಬಯ್ಯನವರ ಆಕ್ಷೇಪಣೆಗಳು** ಎಂಬ ಶೀರ್ಷಿಕೆಯ ಕೆಳಗೆ ಹರೀಶ್ವರ ರಾಘವಾಂಕ ಕೆರೆಯಪದ್ಮರಸರ ವಿಷಯ, ಪುಟ LXV. ೫. ಪ್ರಬುದ್ಧ ಕರ್ಣಾಟಕ ಸಂಪುಟ ೧೨ ಸಂಚಿಕೆ ೨ರಲ್ಲಿ "ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ. ಆಕ್ಷೇಪಗಳಿಗೆ ಪ್ರತ್ಯುಕ್ತಿ."

೪. ಮ|| ಪುರಾಣಿಕ ಬುದ್ಧಯ್ಯನವರು ಬೇರೊಂದು ರೀತಿಯಲ್ಲಿ ಹರಿಹರನ ಕಾಲವನ್ನು ಚರ್ಚಿಸಿದ್ದಾರೆ.[೬] ಅವರ ಅಭಿಪ್ರಾಯವಿಷ್ಟು:- ವೀರಶೈವ ಪುರಾಣಗಳು ವಿಶ್ವಾಸಾರ್ಹವಾಗಲಾರವೆಂದು ಅವುಗಳನ್ನು ಏಕಪಕ್ಷೀಯವಾಗಿ ಅಲ್ಲಗಳೆಯುವ ಡಾ. ವೆಂಕಟಸುಬ್ಬಯ್ಯನವರ ಸಾಹಸವು ಯೋಗ್ಯವಾದುದಲ್ಲ. ಹರಿಹರನ ಕಾಲವನ್ನು ಚರ್ಚಿಸುವಾಗ ಆತನ ಗುರುವಾದ ಮಾಯಿದೇವನ ಕಾಲವನ್ನು ಗೊತ್ತುಪಡಿಸಬೇಕು. ಮಾಯಿದೇವನ ಕಾಲವು ಸುಮಾರು ೧೨೦೦ ಆಗಿರಬೇಕೆಂದು ಊಹಿಸುವುದಕ್ಕೆ ಕೆಲವು ಕಾರಣಗಳಿವೆ. ಅವುಗಳ ಆಧಾರದಿಂದ ಹರಿಹರನ ಕಾಲವಾದರೂ ಸುಮಾರು ೧೨೦೦ ಆಗಿರಬೇಕು.

ಹರಿಹರದೇವನ ಕಾಲದ ವಿಷಯವಾಗಿ ಹೀಗೆ ನಾಲ್ಕು ಅಭಿಪ್ರಾಯಗಳಿವೆ. ಇವುಗಳ ತಿರುಳನ್ನು ಸಂಕ್ಷಿಪ್ತವಾಗಿ ಅರಿತುಕೊಂಡ ಮೇಲೆ ನಾವು ಈಗ ಅವುಗಳ ನಿಜಾಂಶಗಳನ್ನು ಕೊಂಚ ಚರ್ಚಿಸಬಹುದು.

ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವದಲ್ಲಿ ಗಿರಿಜಾಕಲ್ಯಾಣದೊಳಗಿನ ಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ **ಕಿಟೆಲ್ ಸಾಹೇಬರ** ವಾದವು ನಿಂತುಬಿಡುತ್ತದೆ. ಮಲ್ಲಿಕಾರ್ಜುನನ ಕಾಲ ಸುಮಾರು ೧೨೪೫ ( ಕ. ಕವಿಚರಿತೆ ಭಾಗ ೧, ಪುಟ ೩೬೯). ಅಯ್ಯನವರ ಅಭಿಪ್ರಾಯವನ್ನು ಒಪ್ಪಿದರೂ ಅದು ೧೨೬೩ಕ್ಕೆ ನಿಲ್ಲುವುದು. ಅಂತೂ ಹರಿಹರನು ೧೨೬೩ಕ್ಕೆ ಹಿಂದೆ ಇದ್ದಿರಬೇಕೆಂಬಲ್ಲಿ ಯಾರ ಭಿನ್ನಾಭಿಪ್ರಾಯವೂ ಇರಲಾರದು. ಅಂದಮೇಲೆ ಹರಿಹರನ ವಿಷಯದಲ್ಲಿ ೧೨೮೩ ರಿಂದ ರಾಜ್ಯವಾಳಿದ ಮೂರನೆಯ ಬಲ್ಲಾಳನ ಸಂಬಂಧವೇನೂ ಇಲ್ಲದಂತಾಯಿತು. ಅರ್ಥಾತ್ ಕಿಟೆಲ್ ಸಾಹೇಬರ ವಾದವು ಮುಗಿದು ಹೋಯಿತು. ಇನ್ನು ಕವಿಚರಿತೆಕಾರರ ವಾದವನ್ನು ಕೊಂಚ ಬದಿಗಿರಿಸಿ ಡಾ. ವೆಂಕಟಸುಬ್ಬಯ್ಯನವರ ಅಭಿಪ್ರಾಯವನ್ನು ಚರ್ಚಿಸುವ.

ವೀರಶೈವಪುರಾಣಗಳಲ್ಲಿ ಹೇಳಿರುವ ಸಂಗತಿಗಳೆಲ್ಲ ಇತಿಹಾಸದೃಷ್ಟಿಯಿಂದ ನಿಜವೆಂದು ಹೇಳಲಾಗುವುದಿಲ್ಲವೆಂಬುದೇನೋ ಸರಿ. ಆದರೆ ಅವೆಲ್ಲ ಪೊಳ್ಳು ಕಥೆಗಳೆಂದೂ ಯಾವ ರೀತಿಯಿಂದಲೂ ವಿಶ್ವಾಸಾರ್ಹವಲ್ಲವೆಂದೂ ಏಕ

---

೬ ಶಿವಾನುಭವದ ೯ನೆಯ ಸಂಪುಟ ೨ನೆಯ ಸಂಚಿಕೆಯಲ್ಲಿ "ಹರಿಹರನ ಕಾಲ"ವೆಂಬ ಲೇಖ

ಪಕ್ಷೀಯವಾಗಿ ಅವುಗಳನ್ನು ತಿರಸ್ಕರಿಸುವುದು ಮಾತ್ರ ಸಮಂಜಸವಲ್ಲ. ಅವು ಗಳಲ್ಲಿ ಅತಿಶಯೋಕ್ತಿ ಇದ್ದಿರಬಹುದು; ಆದರೂ ಅವು ಪರಂಪರಾಗತವಾದ ಐತಿಹಾಸಿಕ ಸಂಗತಿಗಳು. ಅವುಗಳಲ್ಲಿ ಸತ್ಯಾಂಶವು ಇಲ್ಲದೇ ಇಲ್ಲ. ಅವುಗ ಳನ್ನು ಶೋಧಿಸಿ ಅಭ್ಯಾಸಮಾಡಿದರೆ ಕರ್ಣಾಟಕದ ಇತಿಹಾಸಕ್ಕೆ ಮತ್ತು ಕನ್ನಡಸಾಹಿತ್ಯದ ಇತಿಹಾಸಕ್ಕೆ ಸಹಾಯವಾಗುವಂತಿದೆ. ಕನ್ನಡಸಾಹಿತ್ಯದ ಇತಿಹಾಸವನ್ನು ನಿರ್ದುಷ್ಟವಾಗಿ ಅರಿಯುವುದಕ್ಕೆ ಸಾಧನಗಳ ಅಭಾವವಿರು ವಾಗ ವೀರಶೈವಪುರಾಣಗಳಂತಹ ಸಾಧನಗಳನ್ನು ನಿರಾಕರಿಸುವುದು ಸರಿ ಯಾಗಲಾರದು. ಪುರಾಣಗಳಲ್ಲಿ ಅನೇಕ ಸಲ ಅತ್ಯುಕ್ತಿಗಳು ಬಂದರೂ ಕೂಡ ಹರಿಹರ-ರಾಘವಾಂಕರ ಮಾವ-ಅಳಿಯರ ಸಂಬಂಧವನ್ನು ಸುಳ್ಳೆಂದು ಏಕೆ ತಿಳಿಯಬೇಕೋ ! ಕವಿಚರಿತೆಕಾರರ ಅಭಿಪ್ರಾಯದೊಳಗಿನ ತಪ್ಪನ್ನು ತೋರಿಸುವುದಕ್ಕೆಂದು ಹರಿಹರನ ಕಾಲವನ್ನು ೧೩೦೦ಕ್ಕೆ ಎಳೆದು ತರುವಲ್ಲಿ ಔಚಿತ್ಯವೇನೂ ಇಲ್ಲ. ಏಕೆಂದರೆ ಅಯ್ಯನವರ ಅಭಿಪ್ರಾಯದಂತೆ ಮಲ್ಲಿಕಾ ರ್ಜುನನ ಕಾಲವನ್ನು ಅನುಸರಿಸಿಯೂ ಹರಿಹರನು ೧೨೬೩ಕ್ಕೆ ಹಿಂದಿನವ ನಾಗುತ್ತಾನೆ. ಅಂದಮೇಲೆ ೧೨೮೩ ರಿಂದ ರಾಜ್ಯವಾಳಿದ ಮೂರನೆಯ ಬಲ್ಲಾ ಳನ ಆಸ್ಥಾನದಲ್ಲಿ ಹರಿಹರನು ಕರಣಿಕನಾಗಿರಲಾರನು. ಹಾಗೂ ಮೂರನೆಯ ಬಲ್ಲಾಳನು ಹರಿಹರನನ್ನು ಹಂಪೆಗೆ ಕಳುಹಿರಲಾರನು. ಆನರಸಿಂಹನು ಬೇರೊಬ್ಬನಾಗಿರಬೇಕು. ( ಅವನು ಯಾರಾಗಿರಬಹುದೆಂಬುದನ್ನು ಮುಂದೆ ಸಕಾರಣ ಚರ್ಚಿಸಿದ್ದೇವೆ.) ಇನ್ನು ಉದ್ಭಟಕಾವ್ಯದ ಕರ್ತೃವಾದ ಸೋಮ[೯] ರಾಜನ ಕಾಲವು ೧೫೨೨ ಆಗಿರಬೇಕೆಂಬುದೇ ಸರಿ ಎಂದು ಸಮರ್ಥಿಸುವ ಡಾ. ವೆಂಕಟಸುಬ್ಬಯ್ಯನವರೂ[೭] ಹಾಗೂ ಶ್ರೀಮಾನ್ ಗೋವಿಂದ ಪೈಗಳ ವರೂ[೮] "ನೂರ್ಸಂದ" ಎಂಬ ವ್ಯಾಕರಣವಿರೋಧ ಪ್ರಯೋಗವನ್ನು ಕೂಡ ಒಪ್ಪುತ್ತಾರೆ. ವ್ಯಾಕರಣ ದೋಷಗಳು ಬಹುಶಃ ಎಲ್ಲ ಕಡೆಗೂ ದೊರೆಯು ವುವೆಂಬ ಕಾರಣದಿಂದ ಇದನ್ನು ಸಮರ್ಥಿಸುವುದಕ್ಕಿಂತ ವ್ಯಾಕರಣಕ್ಕೆ ಸರಿ ಯಾಗಿರುವ ಹಾಗು ಕವಿಚರಿತೆಕಾರರು ಪ್ರಾಮಾಣಿಕವಾಗಿ ಉದ್ಧರಿಸಿದ ಶುದ್ಧಪ್ರಯೋಗವನ್ನು ಒಪ್ಪುವುದು ಉಚಿತವಾಗಿದೆ. ಆಮೇಲೆ ಕವಿಚರಿತೆ

---

೭. ಪ್ರಬುದ್ಧಕರ್ಣಾಟಕ ಸಂಪುಟ ೧೨ ಸಂಚಿಕೆ ೨, ಪುಟ ೪೨. ೮. ಸುಬೋಧ ೧೯೨೦, ನವ್ಹೆಂಬರದ ಸಂಚಿಕೆ. ೯. ಕರ್ಣಾಟಕ ಕವಿಚರಿತೆ ಭಾಗ ೩, ಅವತರಣಿಕೆ ಪುಟ xiii.

ಕಾರರ ಅಭಿಪ್ರಾಯದಂತೆ ಸೋಮರಾಜನ ಕಾಲವನ್ನು ೧೨೨೨ ಎಂದು ತಿಳಿಯಬೇಕಾಗುತ್ತದೆ. ಹಾಗಾದ ಪಕ್ಷದಲ್ಲಿ ಹರಿಹರನು ೧೨೨೨ಕ್ಕೆ ಮೊದಲಿನವನಾಗುತ್ತಾನೆ. ಈ ಅಭಿಪ್ರಾಯವು ಹೆಚ್ಚು ಸಮಂಜಸವಾಗಬಹುದೆಂಬುದನ್ನು ಮುಂದಿನ ವಿವರಣೆಯಲ್ಲಿ ಕಂಡುಕೊಳ್ಳಬಹುದು.

ಇನ್ನು ಪುರಾಣಿಕ ಬುದ್ಧಯ್ಯನವರ ವಾದ:— ಗುರುವಿನ ಕಾಲವನ್ನು ನಿಶ್ಚಯಿಸಿದ ಮೇಲೆ ಶಿಷ್ಯನ ಕಾಲವನ್ನು ಅರಿತುಕೊಳ್ಳುವುದು ಸುಲಭವೇ ಆದೀತು. ಶ್ರೀಮಾನ್ ಬುದ್ಧಯ್ಯನವರ ಈಯುಕ್ತಿವಾದವನ್ನು ನಾವು ಒಪ್ಪಬಹುದು. ಆದರೆ ಹರಿಹರನ ಗುರುವಿನ ಕಾಲವನ್ನು ನಿರ್ಧರಿಸಲು ಅವರು ಮಂಡಿಸಿರುವ ಕಾರಣಗಳು ಅಷ್ಟೊಂದು ಸ್ಪಷ್ಟವಾಗಿಲ್ಲ; ಬಲವತ್ತರವೂ ಆಗಿಲ್ಲೆಂದು ಒಪ್ಪಬೇಕಾಗುತ್ತದೆ. "ಹರಿಹರ" ಎಂಬ ಹೆಸರಿನ ಮೇಲೆ ಕಥೆಯೊಂದನ್ನು ಕಲ್ಪಿಸಿಕೊಂಡು ಆಕಥೆಗೆ ಅನ್ವಯಿಸುವಂತೆ ಸ್ಥೂಲವಾಗಿ ಕಾಲವನ್ನು ಚರ್ಚಿಸಿ ಅದು ೧೨೦೦ ಆಗಿರಬೇಕೆಂದು ಪ್ರತಿಪಾದಿಸಿರುವುದು ಅಷ್ಟೊಂದು ತರ್ಕಶುದ್ಧವಾಗಿಲ್ಲ. ಶಿವಾನುಭವ ಸಂಪುಟ ೯ ಸಂಚಿಕೆ ೨ರ ೮೮ನೆಯ ಪುಟದ ಕೊನೆಯಲ್ಲಿ "ಈಕಾರಣಗಳ ಮೇಲಿಂದ ಹರಿಹರನ ಕಾಲವು ಸುಮಾರು ಕ್ರಿ. ಶ. ೧೨೦೦ ಆಗಬಹುದೆಂದು ತೋರುತ್ತದೆ," ಎಂಬ ವಾಕ್ಯವಿದೆ. ಆದರೆ ಆವಾಕ್ಯದ ಹಿಂದೆ ನಿರ್ದುಷ್ಟವಾದ ಆಧಾರಗಳು ನಿರೂಪಿಸಲ್ಪಟ್ಟಿಲ್ಲ. ಇವರು ತೋರಿಸಿದ ಆಧಾರಗಳು ಹೇಗೆಯೇ ಇದ್ದರೂ ನಿರ್ಣಯವು ಸುಮಾರು ಸರಿಯಾಗಿದೆ.

ಶ್ರೀಮನ್ ಬುದ್ಧಯ್ಯನವರ ಈವಾದದಲ್ಲಿ ಇನ್ನೊಂದು ಮಹತ್ವದ ತಪ್ಪು ಕಂಡುಬರುತ್ತದೆ. ಹರಿಹರನ ಗುರು ಮಗ್ಗೆಯ ಮಾಯಿದೇವನಾಗಿರಬೇಕೆಂದು ಅವರು ಊಹಿಸುತ್ತಾರೆ. ಅದು ಹಾಗಲ್ಲ. ಈವಿಷಯವನ್ನು ಇಲ್ಲಿ ಕೊಂಚ ಚರ್ಚಿಸುವ:- ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರವನ್ನು ಆಧಾರವಾಗಿಟ್ಟುಕೊಂಡು ಕವಿಚರಿತೆಯಲ್ಲಿ[೧೦] ಹೀಗೆ ಬರೆದಿದೆ; "ಪಂಪಾಕ್ಷೇತ್ರದಲ್ಲಿ ಒಪ್ಪುವ ಹಂಪೆಯ ಶಂಕರಾಚಾರ್ಯನ ಮಗನು ಮಾದರಸನು. ಅವನ ಮಗ ಹಂಪೆಯ ಹರೀಶ್ವರನು. ಈತನ ಗುರುವು ಮಾಯಿದೇವಾಚಾರ್ಯನು." ಇದರಿಂದ ಹರಿಹರನ ಗುರುವು ಮಾಯಿದೇವನೆಂಬುದಂತೂ ಸಿದ್ಧ

೧೦. ಕ. ಕವಿಚರಿತೆ ಭಾಗ ೧, ಪುಟ ೨೨೫.

ವಾಗುತ್ತದೆ. ಆದರೆ ಈಮಾಯಿದೇವನು ಮಗ್ಗೆಯ ಮಾಯಿದೇವನೆಂಬುದಾಗಿ ಬುದ್ಧಯ್ಯನವರು ತಪ್ಪಾಗಿ ತಿಳಿದುಕೊಂಡಿದ್ದಾರೆ. ತನ್ನ ಗುರುಪರಂಪರೆಯ ವಿಷಯವಾಗಿ ಹರಿಹರನೇ ಸ್ಪಷ್ಟವಾಗಿ ತನ್ನ ಗ್ರಂಥಗಳಲ್ಲಿ ಹೇಳಿರುವಾಗ ಈ ರೀತಿಯ ತಪ್ಪು ಗ್ರಹಿಕೆಗೆ ಆಸ್ಪದವೇ ಉಳಿಯುವುದಿಲ್ಲ. ಹರಿಹರನ ಹೇಳಿಕೆಯನ್ನು ಅನುಸರಿಸುವುದಾದರೆ—ಅನುಸರಿಸಲೇ ಬೇಕು - ಆತನ ಗುರುವು ಹಂಪೆಯ ಮಾಯಿದೇವನು ಎಂದು ತಿಳಿಯುತ್ತಿದೆ. ಗಿರಿಜಾಕಲ್ಯಾಣದ ಪ್ರಥಮಾಶ್ವಾಸದ ಮೂವತ್ತೈದರಿಂದ ನಾಲ್ವತ್ತೊಂದರ ವರೆಗಿನ ಪದ್ಯಗಳಲ್ಲಿ ಹರಿಹರನು ತನ್ನ ಗುರು ಪರಂಪರೆಯನ್ನು ಹೇಳಿಕೊಳ್ಳುತ್ತಾನೆ.[೧೧] ಅದರಲ್ಲಿಯ ಅವಶ್ಯವಾದ ಮಾತುಗಳನ್ನು ಇಲ್ಲಿ ಉದ್ಧರಿಸುವುದು ಅಪ್ರಸ್ತುತವಾಗಲಾರದು:

ಆತನ (ಹರಿಹರನ) ಗುರುಕುಲನತಿ ವಿ- |
ಖ್ಯಾತಂ . . . . . . . . . || ೩೫ ||
. . . . . ಮನೋಹರಮೂರ್ತಿ ಚಂದ್ರಶೇ- |
ಖರಶಿವಮೂರ್ತಿ ಕೀರ್ತಿಪತಿ ಹಂಪೆಯ ಶಂಕರದೇವರೊಪ್ಪುವರ್ ||೩೬||

ಆಶೈವಾಗಮಸಿದ್ಧನಪ್ಪ ಪರಮಶ್ರೀಶಂಕರಾಚಾರ್ಯರಿಂ |
ಪಾಶಚ್ಛೇದನಮಿಂಬುಗೊಂಡು ಮೆರೆವಂ . . . .
. . . . . . ಶ್ರೀಮಾದಿರಾಜಾಹ್ವಯಂ || ೩೭ ||

ಇಂತಿಂತೊಪ್ಪುವ ಮಾದಿರಾಜನ ಮನೋದುಗ್ಧಾಬ್ಧಿ ಚಂದ್ರಂ ಶಿವಂ |
ಶಾಂತಂ ಶಾಶ್ವತಮೂರ್ತಿಶೈವಸುಭಗಂ ಸಾಕಾರಸರ್ವೇಶ್ವರಂ ||
ಸಂತೋಷಾಭರಣಂ ಪ್ರಸನ್ನಕರಣಂ ಪ್ರತ್ಯಕ್ಷಪಂಚಾನನಂ |
ಸಂತಂ ಹಂಪೆಯ ಮಾಯಿದೇವನೆಸೆದಿರ್ಪಂ ಶೈವಸಾರೋದಯಂ || ೩೮ ||

ಧರೆಯೊಳಗಾಮಾಯ್ದೇವರ ವರ |
ಕರುಣಂಬಡೆದು ಮೆರೆವನುನ್ನತಮಹಿಮಂ ||
ಗುರುಪದಭಕ್ತಂ ಹಂಪೆಯ |
ಹರಿದೇವಂ ಕವಿಕಳಾವಿಶಾರದರರಸಂ || ೪೧ ||

---

೧೧. ಬೆಂಗಳೂರು ಲಕ್ಷ್ಮೀವಿಲಾಸ ಪ್ರೆಸ್ಸಿನಲ್ಲಿ ೧೮೮೬ರಲ್ಲಿ ಮುದ್ರಿತವಾದ ಪ್ರತಿಯ ೭ನೆಯ ಪುಟ.

ಇದರಿಂದ ಹರಿಹರನ ಗುರುಪರಂಪರೆಯು ಹಂಪೆಗೆ ಸೇರಿದ್ದೆಂದು ತಿಳಿದು ಬರುತ್ತದೆ. ಹಂಪೆಯ ಶಂಕರದೇವ, ಹಂಪೆಯ ಮಾದಿರಾಜ, ಹಂಪೆಯ ಮಾಯಿದೇವ, ಹಂಪೆಯ ಹರಿಹರದೇವ ಎಂದು ಸ್ಪಷ್ಟವಾದ ಉಲ್ಲೇಖವಿದೆ. ಹರಿಹರನಿಂದಲೇ ರಚಿತವಾದ ಮಹಾದೇವಿಯಕ್ಕನ ರಗಳೆಯಲ್ಲಿಯೂ ಗುರುಪರಂಪರೆಯು ಉಕ್ತವಾಗಿದೆ.

ಹಂಪೆಯ ಶಂಕರದೇವಂ |
ಹಂಪೆಯ ಗುರು ಮಾದಿರಾಜದೇವರ ಮತ್ತಾ
ಹಂಪೆಯ ಮಾದರಸರ ದಯೆ |
ಯಿಂ ಪೇಳ್ದಂ ರಸಿಕಚಕ್ರಿ ಹರಿಹರದೇವಂ[೧೨] ||

ಇಲ್ಲಿ ಹೆಸರಿನಲ್ಲಿ ತುಸು ವ್ಯತ್ಯಾಸವಿದ್ದರೂ ಗುರುಪರಂಪರೆಯು ಹಂಪೆಯದೇ ಆಗಿದೆ. ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ ಕೂಡ ಹಂಪೆಯ ಶಂಕರಾಚಾರ್ಯನ ಉಲ್ಲೇಖವಿದೆ. ಆದರೆ ಆಗುರುಪರಂಪರೆಯು ಕೊಂಚ ಭಿನ್ನವಾಗಿದೆ. ಆದರೂ ಹರಿಹರನ ಸ್ಪಷ್ಟವಾದ ಹೇಳಿಕೆಯ ಮೇಲಿಂದ ಯಾವ ಸಂಶಯಕ್ಕೂ ಆಸ್ಪದವಿಲ್ಲ. ವಾದಿಗಳನ್ನು ಗೆದ್ದು, ಜಯಸ್ತಂಭ ವನ್ನು ನೆಟ್ಟು "ಕುಮತವಿಭೇದಿ ಷಟ್‌ಸ್ಥಲಬ್ರಹ್ಮವಾದಿ" ಎಂದು ಹೊಗಳಿಸಿ ಕೊಂಡವನೂ, ವಿರಕ್ತತೋಂಟದಾರ್ಯ (೧೫೬೦), ವಿರೂಪಾಕ್ಷಪಂಡಿತ (೧೫೮೮), ಸಿದ್ಧನಂಜೇಶ (೧೬೫೦), ಶಾಂತಲಿಂಗದೇಶಿಕ (೧೭೯೨) ಮುಂತಾ ದವರಿಂದ ಉಕ್ತನಾದವನೂ ಮಗ್ಗೆಯ ಮಾಯಿದೇವನು. ಹಾಗೂ ಈತನು ತನ್ನ ಇಷ್ಟಲಿಂಗವಾದ ಐಪುರದ (ಐಹೊಳೆಯ) ಸೋಮನಾಥನಲ್ಲಿ ಐಕ್ಯವಾದ ನೆಂದು ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಿಂದ ತಿಳಿದು ಬರುವುದ ರಿಂದ ಈತನು ಹಂಪೆಯ ಮಾಯಿದೇವನೂ ಆಗಲಾರನು; ಹರಿಹರನ ಗುರುವೂ ಆಗಲಾರನು. ಆದುದರಿಂದ ಶ್ರೀಮಾನ್ ಬುದ್ಧಯ್ಯನವರು ಹೇಳುವ "ಇದೇ (ಮಗ್ಗೆಯ) ಮಾಯಿದೇವನು ಹಂಪೆಗೆ ಹೋಗಿ ಹರಿಹರನಿಗೆ ವೀರಶೈವದೀಕ್ಷೆ ಯನ್ನು ಕೊಟ್ಟು ಆತನಿಗೆ ಗುರುವಾದರೂ ಆಗಿರಬಹುದೆಂದೂ ಸಹಜ ಸಿದ್ಧ ವಾಗುವುದು,"[೧೩] ಎಂಬ ಅಭಿಪ್ರಾಯವು ಸರಿಯಾಗಲಾರದು. ಮಾಯಿದೇ

---

೧೨. ಸದ್ಧರ್ಮಗ್ರಂಥಮಾಲೆಯ ಉದುತಡಿಯ ಮಹಾದೇವಿಯಕ್ಕನ ರಗಳೆ (ಹಾವೇರಿ ೧೯೩೩) ಪುಟ ೧ ಪದ್ಯ ೩. ೧೩. ಶಿವಾನುಭವ ೯-೨ ಪುಟ ೯೩.

ವನು ಹಂಪೆಗೆ ಹೋದವರೂ ಕೂಡ ಅಲ್ಲಿ ಮುಗ್ಗಿಯ ಮಾಯಿದೇವನೆಂದು ಅಥವಾ ಐಪುರಿ ಮಾಯಿದೇವನೆಂದು ಕರೆಯಲ್ಪಡಬೇಕೇ ಹೊರ್ತು ಹಂಪೆಯ ಮಾಯಿ ದೇವನೆಂದಲ್ಲ. ಇದು ಶ್ರೀಮಾನ್ ಬುದ್ಧಯ್ಯನವರ ಊಹೆಯೇ ಹೊರ್ತು ಸಾಧಾರವಾದ ಸಿದ್ಧಾಂತವಲ್ಲ. ಅಲ್ಲದೆ ಮುಗ್ಗಿಯ ಮಾಯಿದೇವನ ಕಾಲ ವಿಜ ಯನಗರದ ಪ್ರೌಢದೇವರಾಯನ ಕಾಲ (ಸು. ೧೪೩೦) ಎಂದು ಚೆನ್ನಬಸವಪು ರಾಣದಲ್ಲಿ ಹೇಳಿದೆ:—

. . . . ಪ್ರೌಢನಿಂ ಪೂಜೆಯಂ ಕೊಂಡು

. . . . . . . . . . . . . .

. ಮುಗ್ಗಿಯ ಮಾಯಿದೇವಪ್ರಭುವರನಿರದೆ ಮುಕ್ತನಹನು ||

ಕಾಂಡ ೫, ಸಂಧಿ ೧೦, ಪದ್ಯ ೩೮.

ಆದುದರಿಂದ ಮುಗ್ಗಿಯ ಮಾಯಿದೇವನು ಹೊಯ್ಸಳ ಬಲ್ಲಾಳರಾಜನ ಕಾಲದ ವನಲ್ಲವೆಂಬುದು ಸಿದ್ಧವಾಗುತ್ತದೆ.

ಆದುದರಿಂದ ಮುಗ್ಗಿಯ ಮಾಯಿದೇವನ ಕಾಲವನ್ನು ಆಧಾರವಾಗಿಟ್ಟು ಕೊಂಡು ಹರಿಹರನ ಕಾಲವನ್ನು ನಿಶ್ಚಯಿಸಹೋಗುವ ಶ್ರೀಮಾನ್ ಬುದ್ಧ ಯ್ಯನವರ ವಾದವು ಸರಿಯಲ್ಲವೆಂದು ಒಪ್ಪಿಬಿಡಬಹುದು. ಆದರೆ ಶ್ರೀಮಾನ್ ಬುದ್ಧಯ್ಯನವರು ತಮ್ಮ ಊಹೆಯನ್ನು ಪ್ರಾಮಾಣಿಕವಾಗಿ ನಂಬುತ್ತಾರೆಂದು ತಿಳಿಯಕೂಡದು. ಚರ್ಚೆಗೆಂದು ಒಂದು ವಿಷಯನ್ನು ಕೊಟ್ಟಿದ್ದಾರೆ ಮಾತ್ರ.

ಇನ್ನುಳಿಯಿತು ಮಹಾಮಹೋಪಾಧ್ಯಾಯ ರಾವ್-ಬಹಾದ್ದೂರ್, ಆರ್. ನರಸಿಂಹಾಚಾರ್ಯರ ಅಭಿಪ್ರಾಯ. ಕೆಳಗೆ ನಿರೂಪಿಸಿದ ಕಾರಣಗ ಳಿಂದ ಅದು ತುಸು ಮಾರ್ಪಾಟುಗೊಳ್ಳಬೇಕಾಗಿದೆ.

ಹರಿಹರನು ೧೨೬೩ಕ್ಕೆ ಮೊದಲು ಇದ್ದನೆಂಬುದಂತೂ ನಿರ್ವಿವಾದವಾದ ಸಂಗತಿಯಷ್ಟೇ. ಆತನು ನರಸಿಂಹಬಲ್ಲಾಳನಲ್ಲಿ ಕರಣಿಕನಾಗಿದ್ದನೆಂದು ಪದ್ಮರಾಜಪುರಾಣ-ರಾಘವಾಂಕಚಾರಿತ್ರ-ಭೈರವೇಶ್ವರಕಾವ್ಯದ ಕಥಾಸೂತ್ರ ರತ್ನಾಕರಗಳಿಂದ ತಿಳಿದು ಬರುತ್ತದೆ. ಹರಿಹರನು ಕರಣಿಕನಾಗಿದ್ದನೆಂಬು ದನ್ನು ಆತನ ಮಾತುಗಳಿಂದಲೂ ಕಂಡುಕೊಳ್ಳಬಹುದಾಗಿದೆ. ಬಸವರಾಜ ದೇವರ ರಗಳೆಯಲ್ಲಿ ಆತನು ಕರಣಶಾಲೆ-ಕರಣಿಕರನ್ನು ವಾಸ್ತವವಾಗಿ ಬಣ್ಣಿಸಿ ದುದನ್ನೂ, ಉಚಿತವಾದ ಪಾರಿಭಾಷಿಕ ಶಬ್ದಗಳನ್ನು ಪ್ರಯೋಗಿಸಿದುದನ್ನೂ,

ಅಲ್ಲಿಯ ಸ್ಥಿತಿಗಳನ್ನು ಹೇಳಿದುದನ್ನೂ ನೋಡಿದರೆ[೧೪] ಆತನು ಕರಣಿಕನಾಗಿದ್ದಿರಬೇಕೆಂಬ ಸಂಗತಿಯು ಸ್ಪಷ್ಟವಾಗುತ್ತದೆ. [೧೫]ಪದ್ಮರಾಜಪುರಾಣದಲ್ಲಿ ಹೀಗೆ ಹೇಳಿದೆ:—

ಶ್ರೀವಿಪುಳನರಸಿಂಹಬಲ್ಲಾಳಭೂಮಿಪಂ |
ಕೋವಿದಂ ಯುವರಾಜಪಟ್ಟಾನ್ವಿತಂ ಬಿಟ್ಟ |
ದೇವರಾಯನೆನಿಪ್ಪ ಪುತ್ರಸಹಿತಂ ಯಾದವಾನ್ವಯೋದ್ಧರಣನಾದ || ೩–೨೪
ಈನರಸಿಂಹಬಲ್ಲಾಳನ ಆಶ್ರಯದಲ್ಲಿ
ಷೋಡಶಪ್ರತಿಯ ಕರಣಿಕರೊಳಗ್ರಣಿಯೆನಿಪ |
ಆಡಲೇಂ ವಿಷಮಸಂಸಾರವಾರ್ಧಿಪ್ರಬಲ-
ಬಾಡಬಂ ಗುರುಲಿಂಗಜಂಗಮ ಸಪರ್ಯೆಯಂ
ಮಾಡಿ ತಣಿಯದ ತವಕದಿಂದುರ್ವಿ ಕೊರ್ವಿ ನಲಿದಾಡುವನುಪಮ ಚರಿತ್ರಂ||
|| ೫–೬ ||
ಅರರೆ ಹಂಪೆಯ ಮಹಾದೇವರ ಜಠರಸುಧಾ- |
ಶರಧಿಸಂಭವಸುಧಾಕರನಖಿಲಶಿವಭಕ್ತ- |
ಕರುಣಾಕಟಾಕ್ಷಪ್ರಭಾಪುಂಜರಂಜಿತಾಂಗಂ . . . ||೫–೭||

. . . . . . . . . . .

ಚದುರಿಂಪುಸೊಂಪಲಂಕೃತಿಚಮತ್ಕೃತಿರೀತಿ |
ಮೃದುಮಧುರಸರಸೋಪಮಾದ್ಯಖಿಲಲಕ್ಷಣಾ- |
ಭ್ಯುದಿತವಸ್ತುಕವರ್ಣಕಂಗಳಿಂ ಶಿವನಂ ಶಿವೈಕ್ಯರಂ ನುತಿಸುತಿರ್ಪಾ ||೫–೯||
. . . . . . ಸಕಲಕುಧರಮ- |
ಧ್ಯದೊಳೆಸೆವ ಹೇಮಾದ್ರಿಯಂತೆ ಕರಣಿಕರ ಮ- |
ಧ್ಯದೊಳೆಸೆವುತೆಮ್ಮ ಹಂಪೆಯ ಹರೀಶ್ವರನಧಿಕತೇಜದಿಂದೋಜಿವೆತ್ತು ||
|| ೫–೧೦ ||

---

೧೪. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಪ್ರಕಟಿಸಿದ ಬಸವರಾಜದೇವರ ರಗಳೆ ಸ್ಥಲ ೫.

೧೫. ೧೯೦೯ರಲ್ಲಿ ಒಕ್ಕಲಿಗರ ಸಂಘದ ಮುದ್ರಾಲಯದಲ್ಲಿ ಪ್ರಕಟವಾದ ಪದ್ಮರಾಜಪುರಾಣ. ಪುಟ ೩೨.

ರಾಘವಾಂಕಚಾರಿತ್ರವೂ ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರವೂ ಈ ಸಂಗತಿಯನ್ನು ಸಮರ್ಥಿಸುತ್ತವೆ. ಆದರೆ ಹರಿಹರನಿಗೆ ಆಶ್ರಯಕೊಟ್ಟ ಆನರಸಿಂಹಬಲ್ಲಾಳನು ಯಾರಾಗಿರಬಹುದೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳುಂಟಾಗಿವೆ. ನಾವೀಗ ಆನರಸಿಂಹನು ಯಾರು ಎಂಬುದನ್ನು ಚರ್ಚಿಸುವ.

(ಅ.) ನರಸಿಂಹಬಲ್ಲಾಳನು (೧೧೪೧–೭೩) ಅತಿವಿಷಯಿಯಾಗಿದ್ದನೆಂದು ಬೇಲೂರು ೧೪೪ ಮತ್ತು ೧೯೩ನೆಯ ಶಾಸನಗಳಲ್ಲಿ ಹೇಳಿದೆ. ಇದೇ ಸಂಗತಿಯನ್ನು ಅನುಸರಿಸಿ ಶ್ರೀಮಾನ್ ಸಿ. ಹಯವದನರಾಯರು ತಮ್ಮ ಮೈಸೂರ/ಗ್ಯಾಝಟೀಯರದ ಸಂಪುಟ ಭಾಗ ೨ ಪುಟ ೧೩೫೫ರಲ್ಲಿ ಹೀಗೆ ಹೇಳಿದ್ದಾರೆ: "**Narasimha, however, eventually lapsed into a voluptuary.**[೧೬]" ಉಡುತಡಿಯ ಮಹಾದೇವಿಯಕ್ಕನನ್ನು ಮೋಹಿಸಿದವನು ಈತನೇ ಎಂದೂ, ಹರಿಹರನು ಮಹಾದೇವಿಯಕ್ಕನ ರಗಳೆಯನ್ನು ಈತನ ಹೆಸರನ್ನು ಮರೆಮಾಡಿ ಕೌಶಿಕನೆಂದಿಟ್ಟುಕೊಂಡು ಬರೆದುದರಿಂದ ಅರಸನು ಸಿಟ್ಟಾಗಿ ಆತನನ್ನು ಹಂಪೆಗೆ ಕಳುಹಿದನೆಂದೂ ಕೆಲವರು ಊಹಿಸುತ್ತಾರೆ. ನಾಮಚಾರಿತ್ರ್ಯಗಳ ಸಾದೃಶ್ಯದ ಹೊರ್ತು ಇದರಲ್ಲಿ ವಿಶ್ವಾಸಾರ್ಹವಾದ ಸಂಗತಿಯಿಲ್ಲ. ಈನರಸಿಂಹನಿಗೆ ಬಿಟ್ಟದೇವನೆಂಬ (ಯುವರಾಜ ಪಟ್ಟಾನ್ವಿತಂ ಬಿಟ್ಟದೇವರಾಯನೆನಿಪ್ಪ ಪುತ್ರಸಹಿತಂ) ಯುವರಾಜ ಪಟ್ಟಾನ್ವಿತಪುತ್ರನಿದ್ದನೆಂದು ಶಾಸನಗಳಲ್ಲಿ ಉಕ್ತವಾಗಿಲ್ಲ. ಈವರೆಗೆ ಪ್ರಕಟವಾದ ಶಾಸನಗಳಲ್ಲಿ ನರಸಿಂಹನ ಮಗನು ೧೧೭೩–೧೨೨೦ ರ ವರೆಗೆ ಆಳಿದ ವೀರಬಲ್ಲಾಳನೆಂದು ಹೇಳಿದೆ ಮಾತ್ರ. ಆದುದರಿಂದ ನರಸಿಂಹನ ಸಂಬಂಧವಾದ ಮೇಲಿನ ಊಹೆಯನ್ನು ನಾವು ಒಪ್ಪುವುದಿಲ್ಲ.

(ಬ) ಪದ್ಮರಾಜಪುರಾಣದಲ್ಲಿ ಪದ್ಮರಸನ ವಂಶಾವಳಿಯು ಹೇಳಲಾಗಿದೆ

ಗುರುಮಲ್ಲಿಕಾರ್ಜುನ
|
ಸಕಲೇಶಮಾದರಸ
|
ಮಾಯಿದೇವ=ಮಂಗಳಾದೇವಿ
|
ಕೆರೆಯ ಪದ್ಮರಸ

---

೧೬. Epigraphia Carnatica Vol. V Part II Pp. 238-39; and Mys. Gay. Vol II Part II P. 1355.

ಕೆರೆಯ ಪದ್ಮರಸನ ಮುತ್ತಜ್ಜನಾದ ಸಕಲೇಶಮಾದರಸನ ಕಾಲವನ್ನು ಕವಿ ಚರಿತೆಕಾರರು ಸುಮಾರು ೧೧೫೦ ಆಗಿರಬಹುದೆಂದು ಊಹಿಸುತ್ತಾರೆ. ಒಂದು ತಲೆಗೆ ೨೫ ವರುಷಗಳಂತೆ ಲೆಕ್ಕ ಮಾಡುತ್ತ ಹೋದರೆ ಕೆರೆಯ ಪದ್ಮರಸನ ಕಾಲವು ಸುಮಾರು ೧೨೦೦ ಆಗುತ್ತದೆ. ಆಗ ೧೧೭೩-೧೨೨೦ ರ ವರೆಗೆ ಆಳಿದ ವೀರಬಲ್ಲಾಳನು ಅರಸನಾಗಿದ್ದನೇ ಹೊರ್ತು ಆತನ ತಂದೆ ನರಸಿಂಹನಲ್ಲ. ಮತ್ತೆ ಕೆರೆಯ ಪದ್ಮರಸನು ರಾಘವಾಂಕನಿಗೆ ಸಮಾಧಿದೀಕ್ಷೆಯನ್ನು ಕೊಟ್ಟನೆಂದು ರಾಘವಾಂಕಚಾರಿತ್ರದಲ್ಲಿ ಹೇಳಿರುವುದರಿಂದ ಹರಿಹರ-ರಾಘವಾಂಕ-ಕೆರೆಯ ಪದ್ಮರಸರು ಸಮಕಾಲೀನರೆಂಬ ಮಾತು ಪರಂಪರೆಯಿಂದ ಬಂದಿರುವುದರಿಂದ ಇದನ್ನು ಒಪ್ಪಲೇ ಬೇಕಾಗುತ್ತದೆ. ಆದುದರಿಂದ ಹರಿಹರನು ವೀರಬಲ್ಲಾಳನ ಕಾಲದಲ್ಲಿದ್ದನೆಂದು ತಿಳಿಯುವುದು ಸಮಂಜಸವಾಗುತ್ತದೆ.

ಇಲ್ಲಿ ಇನ್ನೊಂದು ಸಂಗತಿಯನ್ನು ಹೇಳಬೇಕಾಗುತ್ತದೆ. ಈ ವೀರಬಲ್ಲಾಳನಿಗೆ ಅನೇಕರು ಹೆಂಡಂದಿರು. ಅವರಲ್ಲಿ ಉಮಾದೇವಿಯ ಮಗನು ಹೊಡೆಯ ಬಿಟ್ಟಯ್ಯನೆಂದು ಅರಸಿಕೇರಿಯ[೧೨] ೪೦ ಮತ್ತು ೮೫ ನೆಯ[೧೩] ಶಾಸನಗಳಲ್ಲಿ ಹೇಳಿವೆ. ಈ ಬಿಟ್ಟಯ್ಯನ ಹೆಸರು ಮುಂದೆ ಶಾಸನಗಳಲ್ಲಿ ಬಾರದೆ ಇರುವುದರಿಂದ ಇವನು ಅಕಾಲಮೃತ್ಯುವಿಗೆ ಒಳಗಾಗಿರಬೇಕೆಂದು ತೋರುತ್ತದೆ.

ಕ್ರಿ. ಶ. ೧೧೮೪ನೆಯ ವರ್ಷದ ಶಿಕಾರಪುರದ ೧೮೫ನೆಯ[೧೯] ಶಾಸನದಲ್ಲಿ ಗೋಪರಸನು ಪ್ರಧಾನನೂ ದಂಡನಾಯಕನೂ ಆಗಿ ಬನವಾಸಿಯಲ್ಲಿ ಆಳುತ್ತಿದ್ದನೆಂದು ಹೇಳಿದೆ. ೧೧೯೩ನೆಯ ವರ್ಷದ ಶಿಕಾರಪುರದ[೨೦] ೧೦೫ನೆಯ ಶಾಸನದಲ್ಲಿ ಎರೆಯಂಗನು ದಂಡನಾಯಕನಾಗಿ ಬನವಾಸಿಯಲ್ಲಿ ಆಳುತ್ತಿದ್ದನೆಂದಿದೆ. ಮುಂದಿನ ವರುಷ ಅಂದರೆ ೧೧೯೪ರ ಶಿಕಾರಪುರದ[೨೧] ೧೩೮ನೆಯ ಶಾಸನದಲ್ಲಿ ಕುಮಾರಪದ್ಮಿಯು ಬನವಸೆಯಲ್ಲಿ ಆಳುತ್ತಿದ್ದನೆಂದು ಹೇಳಿದೆ. ಇವನೇ ಕೆರೆಯ ಪದ್ಮರಸನೆಂದು ಕೆಲವರು ಸಂಶಯಪಡಬಹುದು.

---

೧೨, ೧೩. Epigrophia Carnatica Vol V.

೧೯. Ibid Vol VII.

೨೦, ೨೧. Ibid Vol VII.

ಹಾಗೆ ಊಹಿಸುವುದು ಸರಿಯಲ್ಲವೆಂದು ಕೆಳಗಿನ ಆಶಾಸನದ ಅವತರಣದಿಂದ ಸ್ಪಷ್ಟವಾಗುತ್ತದೆ.

19. . . . . . . . . . . ತಸ್ಯ ವಿಶ್ವಾಮಿತ್ರಗೋತ್ರಪವಿ

20. ತ್ರ ಚಾವಣದಂಡಾಧಿಪತೇಶ್ಚೆಂದಲದೇಬ್ಯಾಂ ಪ್ರಾಚ್ಯಾಮಹಸ್ಕರಯಿವ ಸಮುತ್ಪನ್ನಃ ಸಕಳಕಮುಳಾಪತಿಃ ಪ್ರಖ್ಯಾತ

21. ರಾಯದಣ್ಡನಾಥಗಣ್ಡಪೆಣ್ಡಾರಲಾಂಛನಃ ದ್ವಾಸಪ್ತತೌಯೋಗನಿ- ಪುಣಃ ಪದ್ಮಿದೇವಶೂರಾಣಾಮಗ್ರಣೀಗ್ಗಾ೯ಯಕ್ಯೈರಿತ್ಥಂ ಗೀ

22. ಯತೇ೨೨ |

| ಕೆರೆಯ ಪದ್ಮರಸ | ಕುಮಾರಪದ್ಮಿ |
|---|---|
| ಗೋತ್ರ — | ವಿಶ್ವಾಮಿತ್ರ |
| ತಂದೆ — ಮಾಯಿದೇವ | ಚಾವಣದಂಡಾಧಿಪತಿ |
| ತಾಯಿ — ಮಂಗಳಾದೇವಿ | ಚೆಂದಲದೇವಿ |
| ಶಿವಯೋಗಿ | ದ್ವಾಸಪ್ತತೌಯೋಗನಿಪುಣಃ |

ಆದುದರಿಂದ ಶಾಸನೋಕ್ತ ಪದ್ಮಿದೇವನು ಕೆರೆಯ ಪದ್ಮರಸನಾಗಲಾರ. ವೀರ ಬಲ್ಲಾಳನ ಮಂತ್ರಿದಂಡನಾಯಕರು ಉಕ್ತರಾಗಿರುವಾಗ ಕೆರೆಯ ಪದ್ಮರಸನು ಶಾಸನಗಳಲ್ಲಿ ಹೇಗೆ ಉಕ್ತನಾಗಲಿಲ್ಲವೋ ತಿಳಿಯದು. ಶ್ರೀಬಸವಣ್ಣನವರೂ ಸಮಕಾಲೀನ ಶಾಸನಗಳಲ್ಲಿ ಉಕ್ತರಾಗಿಲ್ಲ. ಅದರಂತೆ ಕೆರೆಯ ಪದ್ಮರಸರ ಉದಾಹರಣೆಯೆಂದು ತಿಳಿಯಬೇಕಾಗಿದೆ.

(ಕ) ನರಸಿಂಹ ಬಲ್ಲಾಳನು ಯಾರೆಂಬುದನ್ನು ಖಂಡಿತವಾಗಿ ಹಿಡಿಯಲು ಒಂದು ಆಧಾರವಿದೆ. ಅದು ರಾಘವಾಂಕಚಾರಿತ್ರದಲ್ಲಿ ಉಕ್ತವಾಗಿದೆ. ಆಗ್ರಂಥದೊಳಗೆ ಉಕ್ತವಾದ "ಹಂಪೆಯ ವಿರೂಪಾಕ್ಷದೇವಾಲಯದೊಳಗೆ ಉರಿಯುತ್ತಿರುವ ತೆರೆಯನ್ನು ಹರಿಹರನು ಆರಿಸಿದನು" ಎಂಬ ಸಂಗತಿಯನ್ನು ಮಾತ್ರ ಎಲ್ಲರೂ ಹೇಳುತ್ತಾರೆ. ಅದರ ಮುಂದೆಯೇ ಆ ತೆರೆಯು ಉರಿದ ಮತ್ತು ಹರಿಹರನು ಅದನ್ನು ಆರಿಸಿದ ಕಾಲವು ಉಕ್ತವಾಗಿದೆ. ಅದು ಎಲ್ಲರ ಕಣ್ಣುತಪ್ಪಿ ಉಳಿದಿದೆ. ಆ ಕಾಲವನ್ನು ಹೇಳುವ ಪದ್ಯಗಳನ್ನು ಇಲ್ಲಿ ಉದಹರಿಸುತ್ತೇವೆ.

---

೨೨. Epigraphia Carnatica Vol VII, Shikarpur 138.

ಭೂವರಂ ಬಲ್ಲಾಳರಾಯಂಗೆ ಶ್ರೀಮುಖಂ |
ಪಾವನೇಶ್ವರವತ್ಸರದ ಮಾರ್ಗಶಿರ ದಸ- |
ಮೀ ವಿಧುವಾಸರದೊಳು ಮಧ್ಯಾಹ್ನದವಸರದ ನೈವೇದ್ಯಕಾಲದಲ್ಲಿ[೨೩] ||
ರಾಘ. ಚಾ. ೧೪—೫೮ ||

ತೆರೆಯ ಮರೆಯೊಳು ಸಮರ್ಪಿಸಿದ ಧೂಪಾರತಿಯ |
ನಿರಸಲ್ತದಂಗಾರಸಂಸ್ಪರ್ಶನದಿ ತಿರ- |
ಸ್ಕರಣಿ ಬೇವುತ್ತಿರಲ್ಕಾಸಮಯದೊಳಗೆಮ್ಮ ಸುತ ಹರಿಹರಂ ನಂದಿಸಿ ||
ಪೊರಮಟ್ಟು ಪೋದಪುದಂ ಪೂಜಕರ್ಕಂಡರೀ

ತೆರನ ನಿನಗರುಪುವಡೆ . . . . . . || ೧೪- ೫೯ || ರಾಘ. ಚಾ.

ತೆರೆಯು ಉರಿದ ಕಾಲವು ಈಶ್ವರಸಂವತ್ಸರದ ಮಾರ್ಗಶಿರ ದಶಮಿ ಸೋಮವಾರ ಮಧ್ಯಾಹ್ನ ನೈವೇದ್ಯಕಾಲವೆಂದಾಯಿತು. ಈಸಂಗತಿಯು ನರಸಿಂಹನ ಕಾಲದಲ್ಲಿ ನಡೆದು ಹೋಗಿದ್ದರೆ ಅದು ೧೧೫೭ರಲ್ಲಿ ನಡೆದಿರಬೇಕು. ಏಕೆಂದರೆ ಈಶ್ವರಸಂವತ್ಸರವು ಆ ಇಸ್ವಿಯಲ್ಲಿ ನಡೆಯುತ್ತಿದೆ. ಪಕ್ಷವು ಹೇಳಲಾಗದಿರುವುದರಿಂದ ಎರಡೂ ಪಕ್ಷಗಳನ್ನು ನೋಡಬೇಕಾಗುತ್ತದೆ. ಶ್ರೀಮಾನ್ ಪಿಳ್ಳೆಯವರ ಪಂಚಾಂಗದ ಮೇರೆಗೆ—

೧. [ಅ] ಮಾರ್ಗಶಿರ ಶುದ್ಧ ೧೦ ತಿಥಿಯು ಬುಧವಾರ ನವ್ಹೆಂಬರ ೧೩;
[ಬ] ,, ವದ್ಯ ,, ,, ಗುರುವಾರ ,, ೨೮.

ಆದರೆ ಶಾಸನಗಳಲ್ಲಿಯೂ ಹಸ್ತಲಿಖಿತ ಪುಸ್ತಕಗಳಲ್ಲಿಯೂ ಹಸ್ತದೋಷದಿಂದ ವರ್ಷವು ಹಿಂದುಮುಂದಾದ ಉದಾಹರಣೆಗಳಿರುವುದರಿಂದ ೧೧೫೬, ಮತ್ತು ೧೧೫೮ ವರ್ಷಗಳನ್ನು ಪರೀಕ್ಷಿಸಬೇಕು.

೧೧೫೬ ರಲ್ಲಿ—

೨. [ಅ] ಮಾರ್ಗಶಿರ ಶುದ್ಧ ೧೦ ಯು ನವ್ಹೆಂಬರ ೨೪ ಶನಿವಾರ;
[ಬ] ,, ವದ್ಯ ,, ದಿಶೆಂಬರ ೯ ರವಿವಾರ
ಸಂಜೆಯ ೫ ಗಂಟೆ ೪೫ ನಿಮಿಷಮಾತ್ರ

---

೨೩. ಗೋಕಾಕದಲ್ಲಿ ದೊರೆತ ರಾಘವಾಂಕಚಾರಿತ್ರದ ಹಸ್ತಲಿಖಿತ ಕಾಗದಪ್ರತಿ; ಪುಟ ೧೫೩.

೧೧೫೮ ರಲ್ಲಿ—

೩. [ಅ] ಮಾರ್ಗಶಿರ ಶುದ್ಧ ೧೦ ಯು ಮಂಗಳವಾರ ದಿಶೆಂಬರ ೨ ಕ್ಕೆ ಸಂಪೂರ್ಣವಾಗಿದೆ.

[ಬ] ,, ವದ್ಯ ,, ಬುಧವಾರ ದಿಶೆಂಬರ ೧೭

ಸಾರಾಂಶವೇನಂದರೆ ಮಾರ್ಗಶಿರ ೧೦ ಸೋಮವಾರವು ೧೧೫೬ ರಿಂದ ೧೧೫೮ ವರೆಗೆ ಯಾವ ವರ್ಷದಲ್ಲಿಯೂ ಸರಿ ಹೋಗುವುದಿಲ್ಲ. ಈಶ್ವರಸಂವತ್ಸರವು ಪುನಃ ೬೦ ವರ್ಷಗಳ ತರುವಾಯ ಅಂದರೆ ೧೨೧೭ ರಲ್ಲಿ ಬರುತ್ತದೆ. ಆಗ–

೪. [ಅ] ಮಾರ್ಗಶಿರ ಶುದ್ಧ ೧೦ ಯು ಶುಕ್ರವಾರ ನವ್ಹೆಂಬರ ೧೦;

[ಬ] ,, ವದ್ಯ ,, ಶನಿವಾರ ,, ೨೫

೫. ೧೨೧೬ ರಲ್ಲಿ—

[ಅ] ಮಾರ್ಗಶಿರ ಶುದ್ಧ ೧೦ ಯು ರವಿವಾರ ನವ್ಹೆಂಬರ ೨೦ ಕ್ಕೆ ೩೯ ಗಳಿಗೆ ಮಾತ್ರ ಅಂದರೆ ೯ ಗಂಟೆಗೆ ೩೫ ನಿಮಿಷಗಳವರೆಗೆ ಆತರುವಾಯ ೧೧ ತಿಥಿಯು

[ಬ] ಮಾರ್ಗಶಿರ ವದ್ಯ ೧೦ ಯು ಸೋಮವಾರ ದಿಸೆಂಬರ ೯ ಕ್ಕೆ ಮಧ್ಯಾಹ್ನದ ೧೨ ಗಂಟೆ ೧೫ ನಿಮಿಷಗಳಿಗೆ ಸರಿಯಾಗಿ ಬರುತ್ತದೆ

ಆದುದರಿಂದ ಮಾರ್ಗಶಿರವದ್ಯ ದಶಮಿ ಸೋಮವಾರ ಮಧ್ಯಾಹ್ನದ ನೈವೇದ್ಯ ಕಾಲದಲ್ಲಿ ಅಂದರೆ ೧೨೧೬ ದಿಶೆಂಬರಕ್ಕೆ ತೆರೆಗೆ ಉರಿಯು ತಗಲಿತೆಂದಾಯಿತು. ಕಾರ್ಯಕ್ಕೆ (ವಿಧಿಗೆ) ಸರಿಯಾಗಿ ತಿಥಿಯು ಬಂದಿರುವುದರಿಂದ ಅದು ಕರ್ಮ ಕಾಲವ್ಯಾಪಿನಿಯೆಂದು ಶ್ರೀಮಾನ್ ರಾಜಪುರೋಹಿತರು ಹೇಳುತ್ತಾರೆ. ಈಶ್ವರ ಸಂವತ್ಸರವನ್ನು ಬಿಟ್ಟು ಒಂದು ವರುಷ ಹಿಂದೆ ಅಂದರೆ ಧಾತೃ ಸಂವತ್ಸರಕ್ಕೆ ಹೋದುದನ್ನು ಓದುಗರು ಆಕ್ಷೇಪಿಸಬಹುದು. ಆದರೆ " ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಕೊಟ್ಟಿರುವ ಕಾಲದಲ್ಲಿ ಹೀಗೆ ಒಂದು ವರ್ಷ ಹಿಂದುಮುಂದಾಗುವುದು ಬಹಳ ಸಾಧಾರಣವಾಗಿದೆ," ಎಂದು ಕವಿಚರಿತೆಕಾರರು ಅಪ್ಪಣೆ ಕೊಡಿಸಿದ್ದಾರೆ.[೨೪] ಆ ಆಧಾರದ ಮೇಲಿಂದ ೧೨೧೬ ಸರಿಯಾದ ಕಾಲವೆಂದು ನಂಬಲು ಆತಂಕವಿಲ್ಲ.

---

೨೪. ೯. ಕವಿಚರಿತೆ ಭಾಗ ೩. ಅವತರಣಿಕೆ ಪುಟ ixv ಮತ್ತು ಆಪುಟದೊಳಗಿನ ಕೆಳಟಿಪ್ಪಣೆ.

ಈ ಸಂದರ್ಭದಲ್ಲಿ ಒಂದು ಆಕ್ಷೇಪಣೆಯಿದೆ. ಪದ್ಮರಾಜಪುರಾಣದಲ್ಲಿ ಈ ಕಾಲವು ರವಿವಾರವೆಂದು ಹೇಳಿದೆ.

. . . . . . . . ಮೇಲ್ಕಟ್ಟು ಗಂ |
ಡೆಂದರರ್ಚಕನ ನಿರೀಕ್ಷಿಸುತಿದೇಂ ಕಾರಣಂ |
ಬೆಂದು ಸರಿಯುಳಿದುದೆನೆ ಹೋದ ರವಿವಾರಮಧ್ಯಾಹ್ನದವಸರದೊಳೊಲವಿಂ ||

ಇಂದುಜಟಂಗಾರತಿಯನೆತ್ತುತಿರೆಯುದರ |
ಹೆಂದದಾಜ್ವಾಲೆಯಾವರಿಸಿ ಬೇವಲ್ಲಿಯೋ |
ರ್ವ೯ಂ ದಯಾರಸಭರಿತಲೋಚನಂ ದಾಕ್ಷಿಣ್ಯವಿಲಸಿತಮುಖಂ ಸುಶೀಲಂ||೫-೧೫

ಉಸಿರಲೇಂ ಸಾತ್ವಿಕೋದಯಶರೀರಂ ತನ್ನ |
ಪೆಸರಂ ಬೆಸಗೊಳಲ್ಕೆ **ಹರಿಗನೆನು**ತುಂ . . || ೫–೧೬.

ಆದುದರಿಂದ ಸೋಮವಾರವೆಂದು ನಂಬುವುದು ಹೇಗೆ? ಇದಕ್ಕೆ ಉತ್ತರ ವಿಷ್ಟೇ. ತೆರೆಯು ಉರಿದುದೂ ಅದನ್ನು ಹರಿಗನು ಆರಿಸಿದುದೂ ನಿಜವೆಂದು ಎಲ್ಲರೂ ಒಪ್ಪಬೇಕಾದ ಮಾತು. ಏಕೆಂದರೆ ಹರಿಹರನ ಚರಿತ್ರೆಯಲ್ಲಿ ಅದು ಪವಾಡರೂಪವಾಗಿ ಪರಂಪರೆಯಿಂದ ಸಿದ್ಧನಂಜೇಶನ ವರೆಗೆ ಬಂದಿದೆ. ಆಕಥೆ ಯಲ್ಲಿ ತಿಥಿ-ವಾರ-ಪಕ್ಷ-ಮಾಸ-ಸಂವತ್ಸರಗಳು ಅಡಕವಾಗಿದ್ದುವು; ಬರಬರುತ್ತ ಸಿದ್ಧನಂಜೇಶನ ಕಾಲದಲ್ಲಿ ಪಕ್ಷವು ಮಾಯವಾಗಿತ್ತು. ಪದ್ಮಣಾಂಕನು ತಿಥಿ ಪಕ್ಷಮಾಸವತ್ಸರಗಳನ್ನು ಕೊಡದೆ ಇರುವುದರಿಂದ ಆಪರಂಪರೆಯ ಕಥೆಗೆ ಆತನು ಗಮನಕೊಟ್ಟಿಲ್ಲವೆಂದಂತಾಗುತ್ತದೆ.

ಆದುದರಿಂದ ಕ್ರಿ. ಶ. ದ ೧೨೧೬ ರಲ್ಲಿ ಆಳುತ್ತಿದ್ದ ಹೊಯ್ಸಳ ರಾಜನು ವೀರಬಲ್ಲಾಳನು. ಮತ್ತೆ ಹೊಡೆಯ ಬಿಟ್ಟಯ್ಯನು ಅಥವಾ ಬಿಟ್ಟಿದೇವನು (ಉಮಾದೇವಿಯ ಮಗನು) ಇವನ ಮಗನೆಂದು ಪದ್ಮರಾಜಪುರಾಣದಲ್ಲಿ ಹೇಳಿರುವ ಸಂಗತಿಯು ನಮ್ಮ ಅಭಿಪ್ರಾಯಕ್ಕೆ ಪುಷ್ಟಿಕರವಾಗಿದೆ.

ಹರಿಹರದೇವನ ಬಸವರಾಜದೇವರ ರಗಳೆ, ಪ್ರಭುದೇವರ ರಗಳೆ, ಮಹಾದೇವಿಯಕ್ಕನ ರಗಳೆ ಮುಂತಾದ ಗ್ರಂಥಗಳಲ್ಲಿ ಅವರವರ ವಚನಗಳ ನ್ನುದಹರಿಸಿದುದು ಕಂಡುಬರುತ್ತದೆ.

"ಬೇಡಿ ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲ ಸಂಗ, ಅವಧಾರು"[೨೫]

ಇದಕ್ಕೆ ಸರಿಯಾದ ವಚನವು ರಾ. ಸಾ. ಹಳಕಟ್ಟಿಯವರು ಪ್ರಕಟಗೊಳಿಸಿದ "ಬಸವೇಶ್ವರನ ವಚನಗಳು" ಎಂಬ ಪುಸ್ತಕದ ೧೦೮ನೆಯ ಪುಟದೊಳಗಿನ ನಾಲ್ಕನೆಯದು.

"ನೀಂ ಪೊಕ್ಕಲ್ಲಿ ಪೊಕ್ಕವರೊಕ್ಕುದಂ ಕೊಂಡೆ ನೀನಿರ್ದ ಕುಲವೆ ಸತ್ಕುಲಂ. ನಿನ್ನಿಂದ ನಾಂ ಕುಲಜನೆ, ಕೂಡಲಸಂಗ, ಕರುಣಿಸು- ಎಂದು ಗೀತಮಂ ಪಾಡುತಂ"[೨೬]

ಇದಕ್ಕೆ ಸರಿಯಾದ ವಚನವು ಬಸವೇಶ್ವರನ ವಚನಗಳು ಪುಟ ೧೧೧ ರೊಳಗಿನ ೪ನೆಯದು. ಹೀಗೆ ಆತನು ವಚನಶಾಸ್ತ್ರವನ್ನು ಅಭ್ಯಾಸಮಾಡಿ ವಚನಗಳನ್ನು ಉದಹರಿಸಿದುದೂ, ಅಷ್ಟಾವರಣಗಳನ್ನು ಸೂಕ್ಷ್ಮವಾಗಿ ಹೇಳಿದುದೂ ಆತನ ಕಾಲನಿರ್ಣಯಕ್ಕೆ ಅಪ್ರತ್ಯಕ್ಷವಾಗಿ ಸಹಾಯಕವೇ ಆಗಿವೆ. ಏಕೆಂದರೆ ಆತನು ೧೧೬೫ ರಲ್ಲಿದ್ದಿದ್ದರೆ ಬಸವಣ್ಣನವರ ಶಿವಾನುಭವ ಮಂಟಪವನ್ನು ಅಲಂಕರಿಸಿದ ಹೊರ್ತು ಅಷ್ಟಾವರಣಷಟ್‌ಸ್ಥಲಗಳ ಮರ್ಮವು ತಿಳಿಯುತ್ತಿರಲಿಲ್ಲ; ಮತ್ತು ವಚನಗಳನ್ನೂ ಉದಹರಿಸುತ್ತಿರಲಿಲ್ಲ ತನ್ನ ಕಾವ್ಯಗಳಲ್ಲಿ. ಆತನು ಶಿವಾನುಭವಮಂಟಪದಲ್ಲಿರಲಿಲ್ಲವೆಂದು ಒಪ್ಪುತ್ತಿರುವಾಗ ವಚನಗಳ ಮತ್ತು ವೀರಶೈವಧರ್ಮದ ಪ್ರಚಾರವಾಗಬೇಕಾದರೆ ಕಾಲಾವಧಿಯು ಬೇಕು. ಆ ಕಾಲಾವಧಿಗನುಸರಿಸಿ ೧೩ನೆಯ ಶತಮಾನದ ಆರಂಭವೆಂದರೆ ಸಾಕಾಗುವುದು, ಮತ್ತು ೧೨೧೬ ಎಂದು ಮೇಲೆ ಹೇಳಿದ ಕಾಲವೂ ಇದನ್ನು ಅನ್ವಯಿಸುವುದು. ಈವಿಚಾರಸರಣಿಯನ್ನನುಸರಿಸಿ ನರಸಿಂಹಬಲ್ಲಾಳನೆಂದರೆ ೧೧೭೩ರಿಂದ ೧೨೨೦ರ ವರೆಗೆ ಆಳಿದ ವೀರನರಸಿಂಹನೆಂದು ಸಿದ್ಧವಾಗುತ್ತಿರುವುದರಿಂದ ನರಸಿಂಹಬಲ್ಲಾಳನೆಂದರೆ ನರಸಿಂಹನ ಮಗ ಬಲ್ಲಾಳನೆಂದು ಊಹಿಸುವುದು ಕ್ರಮಪ್ರಾಪ್ತವಾದುದು. ಈಎಲ್ಲ ಕಾರಣಗಳ ಮೇಲಿಂದ ಹರಿಹರನು ಕ್ರಿ. ಶ. ದ ೧೩ನೆಯ ಶತಮಾನದ ಆದಿಯಲ್ಲಿದ್ದನೆಂದು ಸಿದ್ಧವಾಗುತ್ತಿದೆ.

---

೨೫. ಬಸವರಾಜದೇವರ ರಗಳೆ ಪುಟ ೮೨. (ಪ್ರೊ. ಟಿ. ಎಸ್. ವೆಂಕಣ್ಣಯ್ಯನವರ ಪ್ರಕಟನೆ. ೨೬. Ibid ಪುಟ ೬೯.

ಮಹಾತ್ಮರುಗಳ ಚರಿತ್ರೆಗಳೊಳಗಿನ ಒಂದೊಂದು ಸಂಗತಿಗೆ ಪವಾಡದ ರೂಪಕೊಡುವುದು ಹಿಂದೂಜನರಲ್ಲಿ ವಾಡಿಕೆಯಾಗಿದೆ. ಹರಿಹರನು ತೆರೆಯ ಉರಿಯನ್ನು ಆರಿಸಿದುದು ವೀರಬಲ್ಲಾಳನ ಆಸ್ಥಾನವನ್ನು ಬಿಟ್ಟು ಹಂಪೆಗೆ ಬಂದ ದಿನವಾಗಿರಬೇಕು. ಹರಿಹರನು ಉಜ್ವಲವೀರಶೈವನೂ ಪ್ರತಿಭಾಶಾಲಿಯೂ ಆದುದರಿಂದ ಅವನನ್ನು ಪವಾಡಪುರುಷನನ್ನು ಮಾಡಲು ಕಲ್ಪಿಸಿದ ಸನ್ನಿವೇಶವು ಇದೊಂದು ಆಗಿರಬಹುದೆಂದು ನಾವು ಕಲ್ಪಿಸುತ್ತೇವೆ.

ಹರಿಹರದೇವನು ಉದ್ದಾಮಕವಿಯು ಹಾಗೂ ಕ್ರಾಂತಿಪುರುಷನು. ಕನ್ನಡಸಾಹಿತ್ಯಚರಿತ್ರೆಯಲ್ಲಿ ಅತಿಮಹತ್ವದ ಸ್ಥಾನವು ಆತನಿಗ ಮೀಸಲಾಗಿದೆ. ಅಂತಹ ಕವಿಯ ಕಾಲನಿರ್ಣಯದ ಆವಶ್ಯಕತೆಯು ಎಷ್ಟೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಈ ಮಹತ್ವದ ಮತ್ತು ಅಗತ್ಯದ ನಿರ್ಣಯವನ್ನು ಮಾಡಲು ಈ ಲೇಖನದಲ್ಲಿ ಪ್ರಯತ್ನ ಮಾಡಿದ್ದಾಗಿದೆ. ಸಂಶೋಧನದಲ್ಲಿ ಇದುವೇ ಕೊನೆಯ ಸತ್ಯವೆಂಬ ಹಟವು ನಮಗಿಲ್ಲ. ಆದರೆ ನಮ್ಮ ಸಿದ್ಧಾಂತವು ಸಮರ್ಪಕವಾಗಿದೆಯೆಂದು ನಂಬಬಹುದಾಗಿದೆ. ಈ ವಿಷಯದಲ್ಲಿ ಭಿನ್ನಾಭಿಪ್ರಾಯ ಪಡುತ್ತಿದ್ದ ಶ್ರೀಮಾನ್ ರಾಜಪುರೋಹಿತರವರು ನಮ್ಮ ಆಧಾರ ಹಾಗೂ ಸಿದ್ಧಾಂತಗಳನ್ನು ಕಂಡ ಮೇಲೆ ನಮ್ಮ ಅಭಿಪ್ರಾಯವನ್ನೇ ಸಮರ್ಥಿಸಿದರು. ಡಾ. ವೆಂಕಟಸುಬ್ಬಯ್ಯನವರು ಕೊಟ್ಟ ಕಾಲವೇ ಸಾಧುವಾದುದು, ಹಾಗೂ ಹರಿಹರರು ಇಬ್ಬರಾಗಿರಬಹುದು ಎಂಬ ತಮ್ಮ ಮೊದಲಿನ ವಾದವನ್ನು ಅವರು ಬಿಟ್ಟುಕೊಟ್ಟು, ಆರೀತಿ ಲೇಖನವನ್ನು ಬರೆದುಕೊಟ್ಟಿದ್ದಾರೆ. ಅಂತು ಹರಿಹರದೇವನ ಕಾಲ ಕ್ರಿ. ಶ. ೧೨೧೬ ಎಂಬ ಸಿದ್ಧಾಂತವು ಸಂಶೋಧಕರಿಗೆ ಸರಿದೋರುವುದೆಂದು ನಂಬುತ್ತೇವೆ.

---

# ಹರಿಹರಕವಿಯ ಮತಕಾಲ ನಿರ್ಣಯ.

ಶ್ರೀ. ನಾ. ಶ್ರೀ. ರಾಜಪುರೋಹಿತ.

ಹರಿಹರಕವಿಯ ಮತವನ್ನೂ ಕಾಲವನ್ನೂ ನಿರ್ಣಯಿಸುವುದೇ ಈ ಪ್ರಬಂಧದ ಮುಖ್ಯವಾದ ಉದ್ದೇಶವಾಗಿದೆ.

## ಮತನಿರ್ಣಯ.

ಹರಿಹರನು ಅದ್ವೈತಮತಾನುಯಾಯಿಗಳಾವ ಬ್ರಾಹ್ಮಣರಲ್ಲಿ ಹುಟ್ಟಿ, ಮುಂದೆ ಪ್ರೌಢವಯಸ್ಸಿನಲ್ಲಿ ಗಿರಿಜಾಕಲ್ಯಾಣವೆಂಬ ಚಂಪೂಗ್ರಂಥವನ್ನು ಬರೆದು ತದನಂತರ ವೀರಶೈವ ಮತವನ್ನು ಸ್ವೀಕರಿಸಿ, ಬಸವರಾಜಪ್ರಭೃತಿ ಶಿವಶರಣರ ಚರಿತ್ರೆಗಳನ್ನು ಬರೆದನೆಂಬುದು ನನ್ನ ಸಿದ್ಧಾಂತವಾಗಿದೆ. ಇದನ್ನು ಸ್ಪಷ್ಟೀಕರಿಸಲುಪಕ್ರಮಿಸುವಾ.

ಗಿರಿಜಾಕಲ್ಯಾಣದಲ್ಲಿ ಹರಿಹರನು ಗಿರಿಜೆಯ ವಿವಾಹಸಮಾರಂಭದಲ್ಲಿ ಜರುಗಿದ ಹೋಮುವನ್ನೂ ಸಪ್ತಪದಿ ಮೊದಲಾದ ವಿಧಿಗಳನ್ನೂ ವರ್ಣಿಸಿರುವುದನ್ನು (೧೦-೯೭, ೯೮) ನೋಡಿದರೆ ಈ ಕವಿಯು ಬ್ರಾಹ್ಮಣನೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಇದಲ್ಲದೆ ಪ್ರಥಮಾಶ್ವಾಸದಲ್ಲಿ (೬೯) ತಪಸ್ವಿಗಳ ಯಜ್ಞೋಪವೀತ ಮುಂತಾದ ಬ್ರಾಹ್ಮಣಲಾಂಛನಗಳನ್ನು ಪ್ರೌಢಿಯಿಂದಲೂ ವರ್ಣಿಸಿರುವುದರಿಂದ, ಹಾಗೂ ದಶಮಾಶ್ವಾಸದಲ್ಲಿ (೬೮, ೬೯) ಕಪಿಲ, ಕೌಂಡಿನ್ಯ, ದೂರ್ವಾಸ, ಪರಾಶರ, ಯಾಜ್ಞವಲ್ಕ್ಯ, ಪುಂಡರೀಕ ಗೌತಮ, ಜಮದಗ್ನಿ, ಜೈಮಿನಿ ಪ್ರಭೃತಿ ಋಷಿಗಳನ್ನು ಸ್ವಾಭಿಮಾನದಿಂದ ಉಲ್ಲೇಖಿಸಿರುವುದರಿಂದ ಈ ಹರಿಹರಕವಿಯು ಬ್ರಾಹ್ಮಣನೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗುತ್ತದೆ. ಇನ್ನು ಈಕವಿಯ ಹರಿಹರ ಎಂಬ ನಾಮದಿಂದ ಈತನು ಅದ್ವೈತಮತಸ್ಥ ಬ್ರಾಹ್ಮಣನೆಂಬುದು ನಿಷ್ಪನ್ನವಾಗುತ್ತದೆ. ಅದು ಹೇಗೆಂದರೆ— ಅದ್ವೈತಮತದಲ್ಲಿ ನಿರಾಕಾರನೂ ನಿರ್ಗುಣನೂ ಆದ ಪರಮಾತ್ಮನು ಅಂತಿಮಧ್ಯೇಯವಾಗಿರುವುದರಿಂದ "ಹರಿ, ಹರ, ಬ್ರಹ್ಮ

ಪ್ರಭೃತಿ ಸಾಕಾರ ಸಗುಣದೇವತೆಗಳು ವ್ಯಾವಹಾರಿಕ ಸತ್ಯವಾಗಿರುತ್ತವೆಯೇ ಹೊರತು, ಪಾರಮಾರ್ಥಿಕ ಸತ್ಯವಾಗಿರುವುದಿಲ್ಲ,'' ಎಂಬುದು ಈ ಅದ್ವೈತ ಮತದ ಸಿದ್ಧಾಂತವಾಗಿದೆ. ಅತಏವ ಅದ್ವೈತಮತಸ್ಥರು ಹರಿಹರರಲ್ಲಿ ವಿಭೇದವನ್ನು ಕಲ್ಪಿಸುವುದಿಲ್ಲ[೧]. ಇತ್ಯರ್ಥವೇನೆಂದರೆ **ಹರಿಹರ** ಎಂದು ತಮ್ಮ ಮಗನಿಗೆ ಹೆಸರನ್ನಿಡುವವರು ಅದ್ವೈತಮತಸ್ಥರೊಬ್ಬರೇ ಸರಿ; ಹೊರತು ಹರಿ ಸರ್ವೋತ್ತಮನೆಂದು ವಾದಿಸುವ ವೀರವೈಷ್ಣವರಾಗಲಿ, ಶಿವಸರ್ವೋತ್ತಮನೆಂದು ವಾದಿಸುವ ವೀರಶೈವರಾಗಲಿ ತಮ್ಮ ಮಗನಿಗೆ **ಹರಿಹರ** ಎಂಬ ಹೆಸರನ್ನು ಎಂದಿಗೂ ಇಡಲಾರರು. ಸಾರಾಂಶ– ಈಹರಿಹರಕವಿಯು ಅದ್ವೈತ ಮತಸ್ಥ ಬ್ರಾಹ್ಮಣರಲ್ಲಿ ಹುಟ್ಟಿದ್ದನೆಂಬುದು ಸಿದ್ಧ.

ಗಿರಿಜಾಕಲ್ಯಾಣ ಗ್ರಂಥದಲ್ಲಿ ಮಂಗಲಾಚರಣದಲ್ಲಿ (ಗ್ರಂಥಾವತಾರದಲ್ಲಿ) ಶ್ರೀಬಸವೇಶ್ವರರ ಸ್ತುತಿಯು ಇಲ್ಲದಿರುವುದರಿಂದ ಈ ಗ್ರಂಥವನ್ನು ಬರೆದ ಕಾಲದಲ್ಲಿ ಹರಿಹರನು ಇನ್ನೂ ಶ್ರೀಬಸವೇಶ್ವರರ ಮತವನ್ನು ಸ್ವೀಕರಿಸಿದ್ದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಮೌರ್ಯವಂಶದ ಅಶೋಕಚಕ್ರವರ್ತಿಯು ಜೈನಮತಸ್ಥರಲ್ಲಿ ಹುಟ್ಟಿ, ಮುಂದೆ ತನ್ನ ಆಯುಷ್ಯದ ಉತ್ತರಾರ್ಧದಲ್ಲಿ ಬೌದ್ಧಮತವನ್ನು ಸ್ವೀಕರಿಸಿ, ಆ ಬೌದ್ಧಧರ್ಮದ ಉತ್ಕರ್ಷಕ್ಕೋಸುಗ ಹೇಗೆ ಹೋರಾಡಿದನೋ ಹಾಗೆಯೇ ಈ ಹರಿಹರ ಕವಿಯು ಅದ್ವೈತಮತಾನುಯಾಯಿಗಳಾದ ಬ್ರಾಹ್ಮಣರಲ್ಲಿ ಹುಟ್ಟಿ, ಮುಂದೆ ತನ್ನ ಆಯುಷ್ಯದ ಉತ್ತ

---

೧. ಅದ್ವೈತಮತಸ್ಥರು ಹರಿಹರರಲ್ಲಿ ವಿಭೇದವನ್ನು ಕಲ್ಪಿಸುವುದಿಲ್ಲ; ಮತ್ತು ಅದ್ವೈತ ಸಿದ್ಧಾಂತಕ್ಕೂ ಶಿವೋಪಾಸನೆಗೂ ಲವಲೇಶವಾದರೂ ಸಂಬಂಧವಿಲ್ಲ. ಆದರೂ ವಿಷ್ಣುಭಕ್ತಿಗಿಂತ ಶಿವಭಕ್ತಿಯ ಕಡೆಗೆ ಅದ್ವೈತಮತಾನುಯಾಯಿಗಳ ಮನಸ್ಸಿನ ಒಲವು ಹೆಚ್ಚಾಗಿದೆ. ಇದರ ಕಾರಣವೇನೆಂದರೆ, ಅದ್ವೈತಮತೋದ್ಧಾರಕರಾದ ಶ್ರೀಶಂಕರಾಚಾರ್ಯರು ಶಿವನ ಅವತಾರವೆಂದು ನಂಬಿದ್ದರಿಂದ ಅದ್ವೈತಮತಸ್ಥರು ಶಿವನೆಂದರೆ ತಮ್ಮ ಗುರುಗಳಾದ ಶ್ರೀಶಂಕರಾಚಾರ್ಯರೆಂದು ಭಾವಿಸಿ, ಅರ್ಥಾತ್ ಗುರುಭಾವನೆಯಿಂದ ಶಿವಲಿಂಗವನ್ನು ಪೂಜಿಸಲಾರಂಭಿಸಿದರು. ಅತಏವ ಅದ್ವೈತಮತಸ್ಥರಲ್ಲಿ ಶಿವಭಕ್ತಿಯು ಪ್ರಬಲವಾಯಿತು. ಇದೇ ಮೇರೆಗೆ ದ್ವೈತಮತಸ್ಥರೂ ತಮ್ಮ ಗುರುಗಳಾದ ಶ್ರೀಮಧ್ವಾಚಾರ್ಯರು ಮಾರುತಿಯ ಅವತಾರವೆಂದು ನಂಬಿದ್ದರಿಂದ ಇವರಲ್ಲಿಯೂ ಗುರುಭಾವನೆಯಿಂದ ಮಾರುತಿಭಕ್ತಿಯು ಅತ್ಯಂತ ಉತ್ಕಟವಾಗಿದೆ. ಹಾಗೆಯೇ ವೀರಶೈವರಲ್ಲಿ ಸಹ ಶ್ರೀಬಸವೇಶ್ವರರು ನಂದಿಯ ಅವತಾರವೆಂದು ನಂಬಿದ್ದರಿಂದ ಇವರು ಗುರುಭಾವನೆಯಿಂದ ನಂದಿಯನ್ನು ಪರಮಭಕ್ತಿಭಾವದಿಂದ ಪೂಜಿಸುತ್ತಾರೆ.

ರಾರ್ಥದಲ್ಲಿ ಶ್ರೀಬಸವೇಶ್ವರರ ಮತವನ್ನು ಸ್ವೀಕರಿಸಿ, ಅರವತ್ತು-ಮೂವರು ಪುರಾತನರ ಮತ್ತು ಬಸವಣ್ಣ, ಪ್ರಭುದೇವ ಮುಂತಾದ ಶಿವಗಣಂಗಳ ಚರಿತ್ರಗಳನ್ನು ರಗಳೆರೂಪವಾಗಿ ಬರೆದು, ಈ ಮತದ ಅಭ್ಯುದಯಾರ್ಥವಾಗಿ ಚೆನ್ನಾಗಿ ಹೋರಾಡಿದನೆಂಬುದು ಈ ಗ್ರಂಥಗಳಿಂದ ವ್ಯಕ್ತವಾಗುತ್ತದೆ.

---

## ಕಾಲನಿರ್ಣಯ.

ಶ್ರೀಬಸವೇಶ್ವರರ ವಂಶವೃತ್ತಾಂತವನ್ನು ಹೇಳುವ ಅರ್ಜುನವಾಡದ ಶಿಲಾಲೇಖವನ್ನು ಮೊಟ್ಟಮೊದಲು ನಾನೇ ಕಂಡು ಹಿಡಿದು, ಇದನ್ನು ಕಾಗದದ ಮೇಲೆ ಪ್ರತಿಬಿಂಬಿಸಿಕೊಂಡು, ವಿಜಾಪುರಕ್ಕೆ ಹೋಗಿ, ಶಿವಾನುಭವ ಪತ್ರಿಕೆಯ ಸಂಪಾದಕರಾದ ರಾವಸಾಹೇಬ ಶ್ರೀಮಾನ್ ಪಿ. ಜಿ. ಹಳಕಟ್ಟಿ, ಬಿ. ಎ., ಎಲ್‌ಎಲ್. ಬಿ. ಇವರ ಕಡೆಗೆ ಪ್ರಸಿದ್ಧಮಾಡುವುದಕ್ಕೋಸುಗ ಕೊಟ್ಟೆನು ( ಶಿವಾನುಭವ ತ್ರೈಮಾಸಿಕ ೩-೯ ಪುಟ ೯೩ ). ಈ ಶಿಲಾಶಾಸನದಲ್ಲಿ ದೇವಗಿರಿಯ ಯಾದವವಂಶದ ಕನ್ನರರಾಜನ ( ಕ್ರಿ. ಶ. ೧೨೪೭-೧೨೬೦ ) ಉಲ್ಲೇಖವಿದೆ. ಹಾಗೂ ಈಶಾಸನವು ೧೧೮೨ ನೆಯ ಶಕವರ್ಷದ್ದು, ಎಂದರೆ ಇದು ಕ್ರಿ. ಶ. ೧೨೬೦ ರಲ್ಲಿ ಹುಟ್ಟಿದುದು. ಇದರಲ್ಲಿ ಶ್ರೀಬಸವೇಶ್ವರರ ಉಲ್ಲೇಖವು ಸ್ಪಷ್ಟವಾಗಿರುವುದಲ್ಲದೆ ಇವರ ಅಣ್ಣನ ಸಂತತಿಯ ಪರಂಪರೆಯನ್ನು ಹೀಗೆ ಹೇಳಿದೆ:

ಶ್ರೀಬಸವೇಶ್ವರರ ಅಣ್ಣ
|
ದೇವರಾಜ
|
ಜಂಗಮಪುರುಷ
|
ಕಲಿದೇವರಸ
|
ಹಾಲಬಸವಿದೇವ ( ಕ್ರಿ. ಶ. ೧೨೬೦ )

ಇದರಿಂದ ವ್ಯಕ್ತವಾಗುವುದೇನೆಂದರೆ, ಒಬ್ಬೊಬ್ಬ ವ್ಯಕ್ತಿಗೆ ೨೦ ವರ್ಷಗಳಂತೆ ಲೆಕ್ಕವನ್ನು ಸರಾಸರಿ ಹಿಡಿದರೆ. ಹಾಲಬಸವಿದೇವನ ಕಾಲದಿಂದ ಎಂದರೆ

ಕ್ರಿ. ಶ. ೧೨೬೦ ರಿಂದ ನೂರು ವರ್ಷಗಳ ಹಿಂದೆ ( ಕ್ರಿ. ಶ. ೧೧೬೦ ) ಶ್ರೀಬಸವೇಶ್ವರರೂ ಅವರ ಅಣ್ಣಂದಿರೂ ಇದ್ದರೆಂಬುದು ಸ್ಪಷ್ಟವಾಗುತ್ತದೆ. ಅತಏವ ಬಸವರಾಜದೇವರ ರಗಳೆಪ್ರಭೃತಿ ಶ್ರೀಬಸವೇಶ್ವರರ ಚರಿತ್ರಾತ್ಮಕ ಗ್ರಂಥಗಳಲ್ಲಿ ಶ್ರೀಬಸವೇಶ್ವರರು ಬಿಜ್ಜಳರಾಜನ [ ಕ್ರಿ. ಶ. ೧೧೫೬-೧೧೬೭ ] ಮಂತ್ರಿಗಳಾಗಿದ್ದರೆಂದು ಹೇಳಿರುವುದು ಕಾಲದೃಷ್ಟಿಯಿಂದ ಸಮಂಜಸವಾಗುತ್ತದೆ. ಇತ್ಯರ್ಥವೇನೆಂದರೆ :— ಬಸವರಾಜ ದೇವರ ರಗಳೆಯ ಕರ್ತೃವಾದ ಹರಿಹರಕವಿಯು ಕ್ರಿ. ಶ. ೧೧೬೦ ರಿಂದ ಈಚೆಗೆ ಇದ್ದನೆಂಬುದು ಸಿದ್ಧ.

ಸಿದ್ಧನಂಜೇಶನು [ ಸು. ೧೬೫೦ ಕ್ರಿ. ಶ. ] ರಚಿಸಿದ ರಾಘವಾಂಕಚಾರಿತ್ರವೆಂಬ ಗ್ರಂಥದಲ್ಲಿ ೧೪ ನೆಯ ಸಂಧಿಯಲ್ಲಿ ಈ ಹರಿಹರಕವಿಯ ವಿಷಯ ಒಂದು ಕಥೆಯು ಹೀಗಿದೆ :— ದೋರಸಮುದ್ರದ ಬಲ್ಲಾಳರಾಜನು ತನ್ನ ಕರಣಿಕನಾದ ಈ ಹರಿಹರನನ್ನು ಲೆಕ್ಕವನ್ನು ಕೇಳಿದಾಗ, ಈತನು ಕಡಿತವನ್ನು ಬಿಟ್ಟು, ಕೈಗಳನ್ನು ಒರಸಲು, ದೊರೆ ಅದೇನೆಂದು ಕೇಳಲಾಗಿ, " ಹಂಪೆಯ ವಿರೂಪಾಕ್ಷನ ದೇವಾಲಯದಲ್ಲಿ ಆರತಿಯನ್ನು ಎತ್ತುವಾಗ ಅದರ ಉರಿಯು ತಾಕಿ, ಮೇಲ್ಕಟ್ಟಿನ ಬಟ್ಟೆಯು ಭುಗಿಲೆಂದು ಉರಿವುದನ್ನು ಕಂಡು, ಕೈಯಿಂದ ಅದನ್ನು ಆರಿಸಿದೆನು," ಎಂದು ಹರಿಹರದೇವನು ಉತ್ತರವಿತ್ತನು. ಆದರೆ ಅರಸನು ಈಮಾತನ್ನು ನಂಬದೆ ಹಂಪೆಯ ವಿರೂಪಾಕ್ಷನಾಲಯಕ್ಕೆ ' ಇದರ ನಿಜಾಂಶವನ್ನು ತಿಳಿದುಕೊಂಡು ಬಾ ' ಎಂದು ಒಬ್ಬ ದೂತನನ್ನು ಕಳುಹಿದನು. ಆಗ ಆ ದೂತನು ಹಂಪೆಗೆ ಹೋಗಿ, ಅಲ್ಲಿಂದ ಶ್ರೀಮುಖವನ್ನು ಹೀಗೆ ತಂದನು:—

ಭೂವರಂ ಬಲ್ಲಾಳರಾಯಂಗೆ ಶ್ರೀಮುಖಂ |
ಪಾವನೇಶ್ವರ ವತ್ಸರದ ಮಾರ್ಗಶಿರ ದಶ- |
ಮೀ ವಿಧುವಾಸರದೊಳು ಮಧ್ಯಾಹ್ನದವಸರದ ನೈವೇದ್ಯಕಾಲದಲ್ಲಿ ||

ರಾಘವಾಂಕ ಚಾ. ೧೪-೫೮.

ಈ ಶ್ರೀಮುಖದಲ್ಲಿ ಹೇಳಿದಂತೆ ಈಶ್ವರಸಂವತ್ಸರದಲ್ಲಿ ಮೇಲೆ ಹೇಳಿದ ಸಂಗತಿಯು ನಡೆದು ಹೋಗಲಿಲ್ಲ; ಆದರೆ ಇದರ ಹಿಂದಿನ ಧಾತುನಾಮ ಸಂವತ್ಸರದಲ್ಲಿ ಶಕ ೧೧೩೮ ಮಾರ್ಗಶಿರಮಾಸದ ಕೃಷ್ಣಪಕ್ಷದ ದಶಮೀ ತಿಥಿಯು

ಸೋಮವಾರ ಮಧ್ಯಾಹ್ನ ೧೨ ಗಂಟೆ ೧೫ ಮಿನಿಟುಗಳಾದ ಬಳಿಕ ಬರುತ್ತ ದೆಂಬುದು ಶ್ರೀಮಾನ್ ಸ್ವಾಮಿ ಕಣ್ಣು ಪಿಳ್ಳೆಯವರ ಪಂಚಾಂಗದಿಂದ ಸ್ಪಷ್ಟವಾಗುತ್ತದೆ. ಪ್ರಾಚೀನ ಶಿಲಾಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಸಂವತ್ಸರವಾಗಲಿ, ಶಕವರ್ಷವಾಗಲಿ ಒಂದು ವರ್ಷ ಹಿಂದೆ ಅಥವಾ ಮುಂದೆ ಸ್ವಾಭಾವಿಕವಾಗಿ ಪ್ರಮಾದವಾಗಿ [೧]ಉಲ್ಲೇಖವಾಗಿರುವುದು ಅನೇಕ ಸ್ಥಳಗಳಲ್ಲಿ ಕಂಡುಬರುತ್ತದೆ. ಇಷ್ಟೆಲ್ಲ ವಿವರಣೆಯ ಮಥಿತಾರ್ಥವೇನೆಂದರೆ, ಹರಿಹರ ಕವಿಯು ೧೧೩೮ನೆಯ ಶಕವರ್ಷದ ಧಾತುನಾಮಸಂವತ್ಸರದ ಮಾರ್ಗಶಿರಮಾಸದ [೨]ಕೃಷ್ಣದಶಮಿ ಸೋಮವಾರದಿವಸ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ಮಧ್ಯಾಹ್ನದ ನೈವೇದ್ಯಕಾಲದಲ್ಲಿ ಹತ್ತಿದ ಉರಿಯನ್ನು ಕೈಯಿಂದ ಒರಸಿ ಆರಿಸಿದನೆಂಬುದು ಸ್ಪಷ್ಟವಾಯಿತು. ಎಂದರೆ ಹರಿಹರದೇವನು ೧೧೩೮ನೆಯ ಶಕವರ್ಷದಲ್ಲಿ (೧೨೧೬ ಕ್ರಿ. ಶ.) ಜೀವಿಸಿದ್ದನೆಂಬುದಿಷ್ಟೇ ಐತಿಹಾಸಿಕ ಅಂಶವನ್ನು ಈಪವಾಡದ ಕಥೆಯಿಂದ ಸ್ವೀಕರಿಸತಕ್ಕದ್ದಾಗಿದೆ. ರಾಘವಾಂಕ-ಚಾರಿತ್ರಗ್ರಂಥದಲ್ಲಿಯ ಈ ಪದ್ಯವನ್ನು ಕೊಲ್ಹಾಪುರ ರಾಜಾರಾಮ ಕಾಲೇಜದ ಪ್ರೊ. ಕೆ. ಜಿ. ಕುಂದಣಗಾರ ಎಮ್. ಎ. ಇವರು ನನಗೆ ತೋರಿಸಿದರು. ಈ ಪದ್ಯದಿಂದ ಹರಿಹರನ ಕಾಲನಿರ್ಣಯವಾದದ್ದಲ್ಲದೆ ಶಾಂತಲಿಂಗದೇಶಿಕಕೃತ ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದ ಮೇಲೆ ಪ್ರಕಾಶವು ಬೀಳುತ್ತಿದೆ. ಅದು ಹೀಗೆ:—

ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರ(೧೬೭೨)ದಲ್ಲಿ ಹರಿಹರ ದೇವನ ವಿಷಯಕವಾದ ಈ ಸಂಗತಿಯಿದೆ.

" ದೋರಸಮುದ್ರದ ಅರಸು ನರಸಿಂಹಬಲ್ಲಾಳನು ಪದ್ಮರಸರೆಂಬ ಆರಾಧ್ಯಪುಂಗವರ್ಗೆ ಪ್ರಧಾನಿಪಟ್ಟವಂ ಕಟ್ಟಿ, ಹಂಪೆಯ ಹರೀಶ್ವರದೇವರ್ಗೆ ರಹಸ್ಯವ ಬರೆವ ಕರಣಿಕರಿಗೆಲ್ಲಾ ಹಿರಿಯತನವಂ ಕೊಟ್ಟು, ಮಡಗಿ ಕೊಂಡಿದ್ದನು."

೧. ಶ್ರೀಬಸವೇಶ್ವರರ ವಂಶವೃತ್ತಾಂತವನ್ನು ಹೇಳುವ ಅರ್ಜುನವಾಡದ ಶಾಸನದಲ್ಲಿ ೧೧೪೨ ನೆಯ ಶಕವರ್ಷಕ್ಕೆ ಸಲ್ಲುವ ರೌದ್ರಿಸಂವತ್ಸರವನ್ನು ಬರೆಯುವ ಸ್ಥಳದಲ್ಲಿ ಅದರ ಹಿಂದಿನ ಸಿದ್ಧಾರ್ಥಿ ಸಂವತ್ಸರವು ಪ್ರಮಾದದಿಂದ ಉಲ್ಲೇಖಿಸಲ್ಪಟ್ಟಿದೆ.

೨. ಈ ಸಂದರ್ಭದಲ್ಲಿ ದಶಮಿತಿಥಿಯು ಕರ್ಮಕಾಲವ್ಯಾಪಿನಿಯಾಗಿದೆ.

ಇಲ್ಲಿ ನೃಸಿಂಹಬಲ್ಲಾಳನೆಂದರೆ ದೋರಸಮುದ್ರದ ರಾಜನಾದ ೧ ನೆಯ ನರಸಿಂಹನ ( ಕ್ರಿ. ಶ. ೧೧೪೧-೧೧೭೩ ) ಮಗನಾದ ೨ ನೆಯ ಬಲ್ಲಾಳನು [ ಕ್ರಿ. ಶ. ೧೧೭೩-೧೨೨೦ ] ಎಂಬುದು ಮೇಲೆ ಹೇಳಿದ ಹರಿಹರನ ಕಾಲ ನಿರ್ಣಯದಿಂದಲೂ ಈರಾಜನ ಓಲಗದಲ್ಲಿ ಹರಿಹರನು ಕರಣಿಕರ ಕುಲತಿಲಕನಾಗಿದ್ದನೆಂದು ಹೇಳಿದ ವೃತ್ತಾಂತದಿಂದಲೂ ನಿಷ್ಪನ್ನವಾಗುತ್ತದೆ. ಆದರೆ ಕವಿಚರಿತೆಕಾರರು ನೃಸಿಂಹಬಲ್ಲಾಳನೆಂದರೆ ೧ನೆಯ ನರಸಿಂಹನೆಂದು ತಿಳಿದುಕೊಂಡಿದ್ದಾರೆ; ಅದು ಸರಿಯಲ್ಲ. ಏಕೆಂದರೆ— ೧ನೆಯ ನರಸಿಂಹನ ಕಾಲದಲ್ಲಿ ಪದ್ಮರಸನು ಪ್ರಧಾನಿಯಾಗಿರದೆ ಕಾಣ್ವಶಾಖೆಯ ಬ್ರಾಹ್ಮಣನಾದ ಲಕುಮಯ್ಯನು ಪ್ರಧಾನನಾಗಿದ್ದನೆಂದೂ, ೧ ನೆಯ ನರಸಿಂಹನಿಗೆ 'ಬಲ್ಲಾಳ' ಎಂಬ ಉಪನಾಮವಿರದೆ ' ಪೊಯ್ಸಳ ' ಎಂಬ ಉಪನಾಮವಿತ್ತೆಂದೂ ಹಾಸನ ತಾಲೂಕಿನ ೬೬ ನೆಯ ಶಾಸನವು ಕಂಠೋಕ್ತವಾಗಿ ಹೀಗೆ ಹೇಳುತ್ತಿದೆ :–

" ಸ್ವಸ್ತಿ! ಸಮಸ್ತ ಶೀಲಗುಣಸಂಪನ್ನನುಂ ಕಾಣ್ವವಂಶೋದ್ಭವನುಂ . . . . . ಕಾಶ್ಯಪಗೋತ್ರಪವಿತ್ರನುಂ . . . . ಅಪ್ಪ ಶ್ರೀಮನ್ಮಹಾಪ್ರಧಾನಂ ಹೆಗ್ಗಡೆ ಲಕುಮಯ್ಯಂ ಪೊಯ್ಸಳನಾರಸಿಂಹದೇವಂಗೆ ರಾಮಂ ನಿಷ್ಕಂಟಕಂ ಮಾಡಿ ಪ್ರತಿಷ್ಠಾಪಿಸಿ ".

ಫಲಿತಾರ್ಥವೇನಂದರೆ:— ನೃಸಿಂಹಬಲ್ಲಾಳನೆಂದರೆ ೧ ನೆಯ ನರಸಿಂಹನಲ್ಲವೆಂದೂ, ಹಾಗೂ ೧ ನೆಯ ನರಸಿಂಹನ ಮಗನಾದ ೨ ನೆಯ ಬಲ್ಲಾಳನಾಗಿದ್ದಾನೆಂದೂ ಹೇಳುವುದು ಯಥಾರ್ಥವಾಗಿದೆ. ಸಾರಾಂಶ– ಹರಿಹರದೇವನು ದೋರಸಮುದ್ರದ ೨ ನೆಯ ಬಲ್ಲಾಳರಾಜನ ಕಾಲದಲ್ಲಿ [ ಕ್ರಿ. ಶ. ೧೧೭೩-೧೨೨೦] ಅರ್ಥಾತ್ ಕ್ರಿ. ಶ. ೧೨೧೬ ರಲ್ಲಿ ಇದ್ದನೆಂಬುದು ಸಿದ್ಧ.

# ಶ್ರೀ ಹರಿಹರ ದೇವನು



## ಬರೆಹ:— **ಪಾವಟೆ ಸಿದ್ಧರಾಮಪ್ಪನವರದು.**

ಹರಶರಣರ್ಕಳಂ ಪದೆದು ಪಾಡಿ ವಿನೂತನ ವೀರಶೈವದಾ
ಸರಣಿಯದಿಂಬುವೆತ್ತು ಧರೆಯೊಳ್ ಸಲೆ ಮಂಗಲಮಾರ್ಗಮಾಗುತಂ।
ಕರಮೆನೆ ರಂಜಿಪಂತೆ ಕೃತಿತಲ್ಲಜದಿಂ ನೆಗಳ್ದಾ ಕವೀಶ್ವರಂ
ಹರಿಹರದೇವನಲ್ಲ ದಿಳೆಯೊಳ್ ವರವಾಣಿಯ ದಾವನೊಲ್ದಳೋ ॥

ಇದೊಂದು ಶ್ರೀಹರಿಹರದೇವನ ಕವಿತಾಗುಣಗಳ ಸವಿ. ಹರಿಹರ ದೇವನ ಹೆಸರೆಂದರೆ ಲಿಂಗವಂತರಿಗೊಂದಳ್ತಿ.

ನಾನೊಬ್ಬ ಲಿಂಗವಂತ. ಹುಟ್ಟಿದೆನು ಲಿಂಗವಂತ· ಬಾಳಿದೆನು ಲಿಂಗ ವಂತ.

ವ್ಯಾಸವಾಲ್ಮೀಕಿಗಳ ಭಾರತರಾಮಾಯಣಗಳು ಈ ಜನಬಳಿಯ (Nation) ವೀರ ಚರಿತಗಳಿಗೆ ತವರಾಗಿ ಕವನಗಳನೆಬ್ಬಿಸುದುವೆಂತೊ, ಅಂತೆ ಹರಿಹರನ ಶರಣರಗಳೆಗಳು ಮತ್ತು ಗಿರಿಜಾಕಲ್ಯಾಣವು ವೀರಶೈವ ಕವಿಗಳ ಇಂಪನ್ನ ಸೊಂಪುಗನ್ನಡ ಕಬ್ಬಗಳ ತನಿರಸವನು ಉಕ್ಕಿಸಿದುವು. ಅವರು ಹರಿಹರದೇವನನ್ನು ತಣಿವಿಲ್ಲದೆ ಕೊಂಡಾಡುವರು:—

ಸರಸ ಮೃದು ಮಧುರೋಪಮೆಗಳಂ।
ಕುರಿಸೆ ವಸ್ತುಕವರ್ಣಕಂಗಳ।
ನೆರಪಿ ಹರನಂ ಹರಗಣಂಗಳನ್ನೆದೆ ಕೀರ್ತಿಸಿದ ॥
ಧರೆಗುಭಯ ಕವಿ ಶರಭಭೇರುಂ।
ಡರಸುಕವಿ ಹರಿಹರನ ತದ್।
ವರಸುತನ ರಾಘವನ ಕೃಪೆಯಿಂ ರಚಿಸುವೆಂ ಕೃತಿಯ ॥

ಎಂದನಾ ಭೀಮ ಕವಿಯು.

ಧರೆಯೊಳ್ ಮೇಣ್ಪುಟ್ಟ ಪುಟ್ಟುತ್ತುರುಳ್ವ ನರರ ಮೇಲುರ್ಬಿ
ಕರ್ಬಂಗಳಂಬಿ
ತ್ತರಿಸುತ್ತಂ ಸಪ್ರಯಾಸಂಕೆಲಕೆಲರಕಟಾಕಬ್ಬಿಗರ್ ಕೆಟ್ಟು
ಪೋದರ್
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯ ಲಕ್ಷ್ಮೀ
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರುಂಗದಾರ್ ಸಾಟಿಯಪ್ಪರ್||

ಎಂದು ತುತಿಸಿಹನಾ ಶ್ರೀ ಷಡಕ್ಷರನು.

ಚದುರಿಂಪು ಸೊಂಪಲಂಕೃತಿ ಚಮತ್ಕೃತಿಗೀತಿ
ಮೃದುಮಧುರ ಸರಸೋಪಮಾದ್ಯಖಿಲ ಲಕ್ಷಣಾ
ಭ್ಯುದಿತ ವಸ್ತುಕ ವರ್ಣಕಂಗಳಿಂ ಶಿವನಂ ಶಿವೈಕ್ಯರಂ ನುತಿ
ಸುತಿರ್ಪಾ
ಸದ ಮಲಿನ ಶಿವ ಕವೀಂದ್ರುಂ . . . . . . . .

ಎಂದು ಹೊಗಳಿದನು ಪದ್ಮಣಾಂಕನು.

ಕವಿತೆಯ ಸವಿಯು ಕವಿಯ ಹೃದಯರಸದ ಒಂದುರೂಪು. ಕಾವ್ಯದ ಇಂಪು ಅವನದೊಂದು ಹೃದಯ ಮಾಧುರ್ಯದ ಹೊರಸೂಸಿನ ಅಂದವು. ಹರಿಹರನ ಎದೆದಾಣದಲ್ಲಿ ತುಳುಕುವ ಆ ಇನಿದು ಏತರದು? ಅವನೆ ಹೇಳಲಿ–

ಇದೊಂದು ಲಿಂಗಾರ್ಚನ ರಗಳೆಯೊಳಗಿನ ಉದಾಹರಣೆ:—

ಎಂದೀತೆರದಿ ನಿಮ್ಮನಪ್ಪಿ ಸುಖವಡೆವುದಂ |
ತಂದೆ ಕರುಣಿಪುದಯ್ಯ. ಸದ್ಭಕ್ತನಪ್ಪುದಂ |
ಆವ ಜಾತಿಗಳೊಳಗೆ ಹುಟ್ಟಿಸಿದೊಡಲೆ ದೇವ |
ನೀವಲ್ಲ ದರಿಯದಿಂತಿರಿಸೆನ್ನನೆಲೆದೇವ |
ಇಳಿಗೆಯ್ಯದೀ ಸುಖದ ನೆನಗೆ ಕರುಣಿಪುದಯ್ಯ |
ಬಳವಳಿಯ ತೊಳ್ತೆಂದು ಬಡಿದು ಕಲಿಸುವುದಯ್ಯ |
ಬೇರೊಂದನೊಲಿವ ನಲ್ಲೆಂಬುದ- ನರಿವುದಯ್ಯ |
ಸಾರಿಮೊರೆ ಇಟ್ಟೆ ನೆನ್ನಂದಯದಿ ನೋಡಯ್ಯ- |
ಆವತೆರೆದಿಂದಾದೊಡಂ ಗುರುವಿರುಪಾಕ್ಷ |
ದೇವ ಕರುಣಿಪುದಯ್ಯ ಹಂಪೆಯ ವಿರುಪಾಕ್ಷ |

ಬ್ರಾಹ್ಮಣನಾಗಲಿ, ಚಾಂಡಾಲನಾಗಲಿ, ತಿರೆಯಾಣ್ಮನಾಗಲೀ, ತಿರುಕನಾಗಲಿ, ಶಿವಭಕ್ತಿ ಸಂಪದವಲ್ಲದೆ ತನಗೆ ಬೇರೊಂದು ಸಂಪದವಿಲ್ಲ. ತಾನು ಶಿವನ ಬಳವಳಿಯ ತೊಳ್ತು. ತನಗೆ ಫಲ ಪದವಿಯು ಬೇಡ. ಆ ಶಿವಭಕ್ತಿಯನ್ನೆ ಕರುಣಿಸೆಂದು ಶಿವನನ್ನು ಮೊರೆಇಡುವ ಕವಿಯಹೃದಯವು ಶಿವಭಕ್ತಿಯಿಂದಲ್ಲದೆ ಮತ್ತೇತರಿಂದ ತುಳುಕುವುದು ?

ಹರಿಹರದೇವನು ಗಿರಿಜಾಕಲ್ಯಾಣ ಚಂಪುವನ್ನೂ ಶಿವಶರಣ ರಗಳೆಗಳನ್ನೂ ನೆರಪಿದನು. ರಗಳೆಗಳನ್ನು ಬರೆದು ರಗಳೆಗಬ್ಬಿಗನು ಚಂಪುಕವಿಯಾಗಲಾಪನೆಂಬುದಕ್ಕೆ ಗಿರಿಜಾಕಲ್ಯಾಣವನ್ನು ಬಿತ್ತರಿಸಿದನೆಂಬರು ಹಲರು. ಆದಾಗಲು ಸಾಕು. ಆದರೆ ಗಿರಿಜಾಕಲ್ಯಾಣವನ್ನು ರಚಿಸಿ ಶಿವನಿಗಿಂತ ಶಿವಭಕ್ತರು ಮಿಗಿಲೆಂದು ರಗಳೆಗಳನ್ನು ಹಾಡಿದನೆಂದರೆ ಆಗದೆನಬಾರದು. ಶ್ರೀಮನ್ ನಿಜಗುಣನು ತನ್ನ ಶಿವಶಾಸ್ತ್ರಗಳ ತುದಿಯಲ್ಲಿ ಪುರಾತನ ತ್ರಿವಿಧಿಯನ್ನೊಡ್ಡಿದಂತೆ ಶ್ರೀಹರಿಹರನು ಗಿರಿಜಾಕಲ್ಯಾಣದ ಬಳಿವಿಡಿದು ರಗಳೆಗಳನ್ನು ಬರೆದಿರಬಾರದೇಕೆ ? ಅದು ಇದ್ದಂತಿರಲಿ. ಗಿರಿಜಾಕಲ್ಯಾಣದಲ್ಲಿ ಒಡೆದು ತೋರುವ ಅವನ ಭಾವವು ರಗಳೆಗಳಲ್ಲಿ ಪುಟವಿಟ್ಟು ಮೂಡಿದೆ. ರಗಳೆಗಳು ಅವನ ಒಳಗನ್ನು ರನ್ನಗನ್ನಡಿಯಾಗಿ ಮುಂಬಿಡಿಯುತ್ತಲಿವೆ.

ಈ ಶಿವಭಕ್ತಿ ರಸವು ಬ್ರಾಹ್ಮಣವರ್ಣದ ಶಿವೋಪಾಸನವೊ ? ನಿರುಪಾಧಿಕ ಶಿವಲೀನತೆ ಎಂಬ ಲಿಂಗವಂತಿಕೆಯೋ ? ವರ್ಣದ ಧರ್ಮವಾಗಿದ್ದರೆ ಹರಿಹರನ ಕಾವ್ಯಗಳು ಈ ಅಂದವಾಗಿ ಬರುತ್ತಿರಲಿಲ್ಲ, ವರ್ಣಧರ್ಮದ ಶಿವೋಪಾಸನವು ಮಾದರ ಚನ್ನಯ್ಯನನ್ನು ಈ ಬಗೆಯಾಗಿ ಹಾಡುತ್ತಿರಲಿಲ್ಲ ಇದೆಕೇಳಿ!

ಲಿಂಗಾಭಿಮಾನಿ ಲಿಂಗಪ್ರಾಣಿ ಶಾಶ್ವತಂ |
ಲಿಂಗಾನುಭಾವಿ ಲಿಂಗೈಕ್ಯ ಅತ್ಯೂರ್ಜಿತಂ |
ಗಿರಿಜೇಶನಾಪ್ತನ ತಿಗುಪ್ತ ಮಾಹೇಶ್ವರಂ |
ಪೆರರರಿಯ ದೀಶನರಿ ದಿರ್ಪ ಭಕ್ತ್ಯಾತುರಂ |
ಒಳಗೆ ಭಕ್ತಿಯಗುಂಪು ಹೊರಗೆ ಜಾತಿಯ ಸೊಂಪು |
ಒಳಗೆ ಮುಕ್ತಿಯನುಂಪು ಹೊರಗೆ ಜನ್ಮದಪೆಂಪು |

" ಬ್ರಾಹ್ಮಣೋಸ್ಯ ಮುಖಮಾಸೀತ್ × × × ಪದ್ಭ್ಯಾಂಶೂದ್ರೋ ಅಜಾಯತ" ಎಂಬುದನ್ನೇ ನೆರೆನಂಬಿದ ಬ್ರಾಹ್ಮಣನು ಶಿವಭಕ್ತಿಯಿಂದ ಮಾದರ

ಚನ್ನಯ್ಯನ ಜಾತಿಯ ಸೊಂಪನ್ನು ಹೊಗಳಿಸು. ಚನ್ನಯ್ಯನ ಲಿಂಗಾಭಿಮಾನದಲ್ಲಿಯೂ ಲಿಂಗ ಪ್ರಾಣಿತ್ವದಲ್ಲಿಯೂ, ಲಿಂಗಾನುಭಾವದಲ್ಲಿಯೂ, ಲಿಂಗೈಕ್ಯದಲ್ಲಿಯೂ ಊರ್ಜಿತತ್ವವನ್ನೂ ಅವನ ಅಂತರಂಗದ ಶಿವನೊಬ್ಬನೇ ಅರಿವ, ಭಕ್ತ್ಯಾತುರವನ್ನೂ, ಆ ಭಕ್ತಿಯಿಂದಿರುವ ಮುಕ್ತಿಯ ಸುಣ್ಪನ್ನೂ ಕೊಂಡಾಡುತ್ತ ತನ್ನಹೃದಯವನ್ನು ಹೊರಸೂಸಿಸು.

ಚನ್ನಯ್ಯನ ಲಿಂಗಪೂಜಾ ಸಂಭ್ರಮ ವರ್ಣನವನು ಕೇಳಿರಿ:—

“ ಎಂದು ಪುಳಕ ಪ್ರತತಿ ನೆರೆವುತಿರೆ ಕರೆವುತಿರೆ
ಬಂದ ಪುಷ್ಪಾಂಬುಗಳ್ ಸುರಿವುತಿರೆ ಪರಿವುತಿರೆ
ಸಜ್ಜೆಯೊಳಗಿರ್ದ ಶಿವಲಿಂಗಮಂ ಪೊಂಗುವಂ
ಸಜ್ಜನ ಸ್ನೇಹ ರಸ ಸಂಗವಂ ಲಿಂಗವಂ
ತೆಗೆದು ಕರತಳದಿ ತಿಳಿಯಗ್ಗಣಿಯ ನೆರೆವುತುಂ

ಇತ್ಯಾದಿ.

ಸೆಜ್ಜೆಯಿಂದ ಶಿವಲಿಂಗವನ್ನು ತೆಗೆವ ಚನ್ನಯ್ಯನು ಇಷ್ಟಲಿಂಗಧರನು. ಆಶಿವಲಿಂಗಪೂಜೆಯು ಕರತಳದಲ್ಲಿ, ಶಿವಲಿಂಗವನ್ನು ತೆಗೆವಾಗ ಪುಳಕ ಪ್ರತತಿಯು ದಟ್ಟಾಗುತ್ತಿದೆ. ಮೇಲೆ ಮೇಲೆ ಕವಿದು ಬರುತ್ತಿದೆ. ಅರಳಿದ ಹೂವಿನಂದದ ಕಣ್ಣುಗಳಿಂದ ಅಂಬುಗಳು ಸುರಿವುತಿವೆ ಪರಿವುತಿವೆ. ಆ ಲಿಂಗವು ಸಜ್ಜನಸ್ನೇಹ ರಸ ಸಂಗಕ್ಕೆ ಅತುಲ ಕಾರಣವಾಗಿದೆ. ಎಂಬುದಿದೆಲ್ಲ ಚನ್ನಯ್ಯನ ಲಿಂಗವಂತಿಕೆಯನ್ನು ಬಿಚ್ಚಿ ಬೀರುತ್ತಲಿದೆ. ಅದರೊಡನೆ ಕವಿಯ ಭಾವವು ಬೆರೆತು ಹೋಗಿದೆ.

ಇನ್ನು ಚನ್ನಯ್ಯನ ಶಿವಪ್ರಸಾದವನ್ನು ಸೇವಿಸುವಲ್ಲಿ ಆ ಶರಣನ ಅರಸಿಯರು ಲಿಂಗಕ್ಕೆಡೆ ಮಾಡುವುದನ್ನು ಕಿವಿಗೊಡಿರಿ:—

“ ಇರೆ ಬೋನಮಂ ಹಿಡಿದರಲ್ಲಿ ತಮ್ಮರಸಿಯರ್
ಹರನಿತ್ತುದಂ ಭಕ್ತಿಯಿಂದೆ ಕಡುಬಡವೆಯರ್
ಪಿಡಿಯಲುಳ್ಳುದ ನಮೃತ ಸಮಾನಮಂ ಮಾಡಿ
ತಡೆಯದೆ ಶಿವಂಗೆ ಸುಖದಿಂದರ್ಪಿತಂ ಮಾಡಿ
ಲಿಂಗಪ್ರಸಾದಮಂ ಪ್ರೀತಿಯಿಂ ಕೈಕೊಂಡು
ಜಂಗಮ ನಿಧಾನ ನಿರ್ದಂ ಸುಖಮನೆಡೆಗೊಂಡು ”—

ಬಯಸಿ ಬಂದುದು ಅಂಗಭೋಗ. ಬಯಸದೆ ಬಂದುದು ಲಿಂಗಭೋಗ. ಎಂಬ ಉನ್ನತವಾದ ಲಿಂಗಭೋಗತತ್ವವನ್ನು ಅರಿದ ಚನ್ನಯ್ಯನ ಪತ್ನಿಯರು ತಮ್ಮ ಬಡತನವನ್ನೇ ತಮ್ಮ ಭಕ್ತಿಗೆ ಇಂಪುಮಾಡಿ ಇಷ್ಟಲಿಂಗಾರ್ಪಣಕ್ಕಾಗಿ ಇದ್ದುದನ್ನು ಎಡೆಮಾಡುವ ಈ ವರ್ಣನವು ಲಿಂಗವಂತಗಲ್ಲದೆ ಮತ್ತಾರಿಗೆ ಬರಬಹುದು ? ತನ್ನ ಧರ್ಮಪತ್ನಿಯರೆಡೆಮಾಡಿದ ಹದುಳಿನೊಡವೆಯನ್ನು ಲಿಂಗಾರ್ಪಿತಂ ಗೈದು ಲಿಂಗಪ್ರಸಾದವನ್ನು ಸ್ವೀಕರಿಸುವ ಜಂಗಮನಿಧಾನತ್ವದ ಸುಖವ ಸೂರೆಗೊಂಬ ಬಣ್ಣನೆಯು ಅದನನುಭವದಿಂದರಿಯದ ಕವಿಯ ಭಾವವನ್ನು ಬಿಚ್ಚಲಾರದು.

ನಿತ್ಯವು ಹಲವು ಕಂಡುಗದ ಬೋನವನ್ನು ಶಿವನಿಗುಣಿಸುವ ಚಕ್ರವರ್ತಿ ಚೋಳನು ಬೆರಗಾಗುತಿರಲು ಚನ್ನಯ್ಯನ ಲಿಂಗದಲ್ಲಿ ಅವನ ದೇಹೇಂದ್ರಿಯ ಗಳನ್ನು ವ್ಯಾಪಿಸಿ:—

"ನೈವೇದ್ಯಂ ಪುರತೋಽನ್ಯಸ್ತಂ । ದರ್ಶನಾತ್ ಸ್ವೀಕೃತಂ ಮಯಾ ॥
ರಸಾನ್‌ಭಕ್ತಸ್ಯ ಜಿಹ್ವಾಗ್ರಾ । ದಶ್ನಾಮಿ ಕಮಲೋದ್ಭವ ॥"—

ಎಂಬೀ ಪ್ರಮಾಣಕ್ಕೆ ಮೂಲವಾಗಿ ಷಡ್‌ರಸಗಳನ್ನು ಸ್ವೀಕರಿಸುವ ತನ್ನ ಆನಂದವನ್ನು ಚಕಿತನಾದ ಚೋಳನಿಗೆ ವಿಸ್ತರಿಸುವ ಶಿವವಚನಗಳನ್ನು ಆಲಿಸಿರಿ !

ಅಂದು ಶಿವನು ಎಂದಿನಂತೆ ಉಣದಿರಲು ಚೋಳಚಕ್ರವರ್ತಿಯು ಬೆಚ್ಚಿ ಬೆದರಿ ಬೆಂಡಾಗಿ ಶಿವನನು ಉಣ್ಣೆಂದು ಆಗ್ರಹಿಸುವಾಗ ಆಡಿದ ಶಿವ ವಚನದ ರಗಳೆ ಇದು:—

"ಓಹೋ ವಿಚಾರವಿಲ್ಲದೆ ಇಂತು ಮಾಳ್ಪರೇ.
ಆಹಾಹ ನಿನ್ನರಸುತನವೆನಗೆ ಮಾಳ್ಪರೆ,
ಕಂಡಯ್ಯ ಚೋಳನಿನಗಿಂತುಸೈರಣೆ ಇಲ್ಲ.
ಉಂಡೆವಾ ಚನ್ನನೊಡನೆಮಗಿಂದು ಪಸಿವಿಲ್ಲ.
ಪೂತು ಮಾದರ ಚನ್ನನೊಡನುಂಡೆವೆಲೆ ಚೋಳ
ಕೂತು ಮಾದರ ಚೆನ್ನನೊಡನುಂಡೆವೆಲೆ ಚೋಳ"—

ಶಿವನು ಮಾದರ ಚನ್ನನಲ್ಲಿ ಕೂತ ಒಡನುಂಡನಂತೆ ! ಕೂತು ಎಂದರೆ—

‘ಕೂರ್ತು’ ಪ್ರೀತಿಸಿ ಎಂಬರ್ಥ. ಚನ್ನಯ್ಯನ ಮನವೇ ತನ್ನ ಮನವಾಗಿ ತನ್ನ ಮನವೇ ಚನ್ನಯ್ಯನದಾಗಿ ಉಂಡೆನೆಂಬರ್ಥ, ಇನಿತಲ್ಲ. ಚನ್ನಯ್ಯನೇ ತಾನಾಗಿ, ತಾನೆ ಚನ್ನಯ್ಯನಾಗಿ ಸಾಮರಸ್ಯದಿಂದ ಉಂಡೆನೆಂಬರ್ಥ.

ಈ ಲಿಂಗಸಾಮರಸ್ಯವನ್ನು ಹೊಗಳುವ ಕವಿಯು ಸಾಮರಸ್ಯಸಿದ್ಧನಾದ ಹರಿದೇವನಲ್ಲದೆ ಮತ್ತಾರು ?

ನಿರುಪಮ ಶಿವಭಕ್ತನನ್ನು ಸರ್ವಲೋಕ ವಂದ್ಯನೆಂಬ ಭಾವವನ್ನು ಚೋಳನು ಚನ್ನಯ್ಯನ ಅಡಿಗೆರಗುವಲ್ಲಿ ಸೂಸಿದ ಕಾವ್ಯರಸದಿಂದ ತೋರಿಸಿರುವನು.

ಎನ್ನಗತಿ ಇದನಿದನೆ ಚನ್ನಯ್ಯನೆಂದೆನುತೆ
ಎನ್ನಮತಿ ಇದನಿದನೆ ಚನ್ನಯ್ಯನೆಂದೆನುತೆ
ಇಳುಪಿದಂ ಸರ್ವಾಂಗಮಂ ಚನ್ನನಂಘ್ರಿಯೊಳ್.
ತೊಳತೊಳಗೆ ಮಣಿಮಕುಟ ಕಾಂತಿಪದ ಭೂಮಿಯೊಳ್.

ಮುಟ್ಟಬಾರದ ತನ್ನ ಕಂಪಣದದ ಚನ್ನಯ್ಯನನ್ನು ಪರಮಶಿವಭಕ್ತನಾದ ಕರಿಕಾಲ ಚೋಳರಾಜೇಂದ್ರನಲ್ಲದೆ ಮತ್ತೊಬ್ಬನಾರು ಇಂತು ಅಡಿಗೆರಗಬಹುದು ? ಅದನು ಹೊರೆ ಏರಿ ಹೊಗಳುವ ಕವಿಯು ಪರಮ ವೀರಶೈವನಲ್ಲದೆ ಮತ್ತೇನಹನು ?

ಇದರತ್ತಣಿಂದ ಬಸವರಾಜ ದೇವರ ರಗಳೆಗೆ ತಿರುಗುವ. ಅಲ್ಲಿ ಹತ್ತನೆಯ ಸ್ಥಲದ ಸೂಚನ ವೃತ್ತವನ್ನು ಕೇಳಿರಿ:—

“ಬಸವನ ಮಾತೆಮಾತು, ಬಸವಣ್ಣನ ಭಕ್ತಿಯ ಓಜೆಯೋಜೆ ಕೇಳ್ |
ಬಸವನ ರೀತಿ ರೀತಿ ಬಸವಣ್ಣನ ಕಿಂಕರ ವೃತ್ತಿ ವೃತ್ತಿ ಮೇಣ್ |
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ |
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ನೇಮವೆ ನೇಮ ಉರ್ವಿಯೊಳ್” |
ಬಸವನ ಗೀತವಂಬುಧಿ ಪರೀತ ಧರಾತಳದಲ್ಲಿ ಸಂದುದೆಂ
ದುಸುರ್ವುದಿ ದಾವದೊಂದರಿದು ಪನ್ನಗ ಲೋಕದ ದಾರವಟ್ಟದೊಳ್ |
ದೆಸೆಗಳ ಭಿತ್ತಿಯೊಳ್ ದಿಗಿಭದಂಗದೊಳಿಂದ್ರನ ಜಿಹ್ವೆಯೊಳ್ ಶಿವಾ
ವಸಥದ ಬಾಗಿಲಲ್ಲಿ ಬರೆದಿಪ್ಪುದದೆಂದೆನ ಲೊಪ್ಪದಿಪ್ಪುದೇ ?

ಈ ಪದ್ಯಗಳಲ್ಲಿ ಹರಿಹರನು ಶ್ರೀ ಬಸವೇಶನು ವೀರಶೈವವೇ ಪರಿಜುಗೊಂಡು ಪಸರಿಸಿದ ತತ್ವಗಳು ಶಿವಾಗಮ ಸಾರವೆಂಬುದನ್ನು ಪರಮ ಕವಿತಾ ಭಾವ ಮಯವಾಗಿ ವರ್ಣಿಸಿರುವನು. ಹರಿದೇವನು ಸಾಮಾನ್ಯನಲ್ಲ. ಅವನ ಗುರು ಪರಂಪರೆಯು ಅತಿಪವಿತ್ರವಾದುದು. ಸರ್ವಗುರತ್ವ ಲಕ್ಷಣದಿಂದೊಡಗೂಡಿ ದುದು. ಸಾಕ್ಷಾತ್ ಶಿವಸ್ವರೂಪವಾದುದು ಗಿರಿಜಾಕಲ್ಯಾಣದಲ್ಲಿ ಹರಿಹರ ದೇವನು ವರ್ಣಿಸಲಿ.

ಆತನ ಗುರುಕುಲ ವತಿವಿ |
ಖ್ಯಾತಂ ಘನಪೂತ ಮಿಂದುಧರ ಸಂಭೂತಂ ||
ನೂತಂ ಪುಣ್ಯಾ ಪ್ರೋತಂ |
ಪ್ರೀತಿಕರಂ ಭೂತಳಾತಿಶಯ ಸುಖಜಾತಂ ||

ಸುರುಚಿರಮೂರ್ತಿ. ಸತ್ಯತರಮೂರ್ತಿ. ಕೃಪಾಕರ ಮೂರ್ತಿ, ಪುಣ್ಯವಿ
ಸ್ತರ ಗುರುಮೂರ್ತಿ ಶಾಂತಿಮಯಮೂರ್ತಿ ಸುಧಾಕರಮೂರ್ತಿ
ಯುತ್ತರೋ
ತ್ತರವರ ಮೂರ್ತಿ ಮುಕ್ತಿ ಸುಖಮೂರ್ತಿ ಮನೋಹರಮೂರ್ತಿ
ಚಂದ್ರಶೇ
ಖರ ಶಿವಮೂರ್ತಿ:–ಕೀರ್ತಿಪತಿ ಹಂಪೆಯ ಶಂಕರದೇವರೊಪ್ಪುವರ್ |
ಆ ಶೈವಾಗಮಸಿದ್ಧನಪ್ಪ ಪರಮ ಶ್ರೀ ಶಂಕರಾಚಾರ್ಯರಿಂ
ಪಾಶಚ್ಛೇದ ಮನಿಂಬುಗೊಂಡು ಮೆರೆವಂ ಶ್ರೀ ಶುದ್ಧ ಪಂಚಾಕ್ಷರೀ
ವೇಶಾನಂದ ರಸಾದ್ರ್ರ ಚಿತ್ತಯುತ ಹೃದ್ರಾಜೀವಸಂಪೂರ್ಣಸಂ
ಕಾಶಂ ಪ್ರಾಂಜಳ ಮೂರ್ತಿ ಕೀರ್ತಿ ಭರಿತಂ ಶ್ರೀಮಾದಿರಾಜಾಹ್ವಯಂ!
ಇಂತಿಂತೊಪ್ಪುಮಾದಿರಾಜನ ಮನೋದುಗ್ಧಾಬ್ಧಿ ಚಂದ್ರಂಶಿವಂ
ಶಾಂತಂ ಶಾಶ್ವತ ಮೂರ್ತಿ ಶೈವ ಸುಭಗಂ ಸಾಕಾರ ಸರ್ವೇಶ್ವರಂ
ಸಂತೋಷಾಭರಣಂ ಪ್ರಸನ್ನಕರಣಂ ಪ್ರತ್ಯಕ್ಷ ಪಂಚಾನನಂ
ಸಂತಂ ಹಂಪೆಯ ಮಾಯಿದೇವ ನೆಸೆದಿರ್ಪಂ ಶೈವಸಾರೋದಯಂ ||
ಸದಮಳನೆಂಬುದುತ್ತಮ ಗುಣಾಶ್ರಯನೆಂಬುದು ಶೈವಸಿದ್ಧನೆಂ |
ಬುದು ರವಿತೇಜನೆಂಬುದು ಕೃಪಾಂಬುಧಿಯೊಂಬುದು ಶಾಂತ
ಮೂರ್ತಿಯೆಂ |

ಬುದು ಪರಮಾಗಮ ಪ್ರಕರನೆಂಬುದು ಹಂಪೆಯ ಮಾಯಿದೇವನೆಂ |
ಬುದು ಶಿವನೆಂಬುದಪ್ರತಿಮನೆಂಬುದು ಸದ್ಗುರುವೆಂಬು[illegible]ಜಗಂ ||
ಧರೆಯೊಳಗಾ ಮಾಯ್ದೇವರ |
ವರಕರುಣಂಬಡೆದು ಮೆರೆವನುನ್ನತಮಹಿಮಂ |
ಗುರುಪದಭಕ್ತಂ ಹಂಪೆಯ
ಹರಿದೇವಂ ಕವಿಕಳಾವಿಶಾರದರರಸಂ ||

ಇಂತು ಹರಿದೇವನು ಶಿವಸಿದ್ಧಾಂತಶೀಲರಾದ ಗುರುಗಳ ಎಳೆಯಲ್ಲಿ ಬಂದವನು. ಆತನಗುರು ಮಾಯ್ದೇವನು. ಶಿವಾಗಮ ಪ್ರಕರನು-ಅಂದರೆ ಶೈವಾಗಮಂಗಳ ರಹಸ್ಯವೇದಿಯು ಪ್ರಕರನೆಂದರೆ ಶಿವಾಗಮುಗಳಿಗೆ ಖ್ಯಾತಿಯನ್ನು ಮಾಡುವವನು. ಖ್ಯಾತಿಯು ವ್ಯಾಖ್ಯಾನವು. ಶಿವಾಗಮುಗಳಿಗೆ ಪ್ರಕರಣಗಳನ್ನು ಬರೆವನೆಂಬರ್ಥ. ಇಂತಹ ಗುರುಗಳ ಪರಂಪರೆಯಲ್ಲಿ ಹುಟ್ಟಿದ ಹರಿಹರನು-ಬಸವನ ಗೀತಗಳನ್ನು ಶಿವಾವಸಥದ ಬಾಗಿಲಲ್ಲಿ ಬರೆದಿಪ್ಪುದೆಂದರೆ ಬಸವನ ವಚನಗಳು ಶಿವಾಗಮುಗಳೆಂಬ ಹಾಲಿನ ಕೆನೆಯಲ್ಲವೆ! ಶೈವಸಿದ್ಧಾಂತದ ಹಿಳಿರಸವೆಂದು ಹರಿಹರದೇವನ ಭಾವವಲ್ಲವೆ ?

## ಚೆನ್ನಯ್ಯನ ರಗಳೆಯಲ್ಲಿ.

ವೇದದ ಡಂಗುರಂ ಹೆದರಿ ಸ್ವೈರೆರಗಾದುವು ಶಾಸ್ತ್ರಸಂಭ್ರಮಂ |
ಪೋದುವು ನಿಚ್ಚಲೋದುವ ಪುರಾಣದಮಾತಿನ ಮಾಲೆಯಲ್ಲ ಪಾ ||
ಳಾದುವು ಜಪ್ಯನೇಮ ತಪಸಂಧ್ಯಗಳಾಗಲೆ ಕೊಚ್ಚಿನುಚ್ಚುನೂ |
ರಾದುವು ಹಂಪೆಯೊಳ್ದ ವರ ಚೆನ್ನನ ಕೂಡೊಲಿದುಂಡ ಕಾರಣಂ ||

ಎಂಬೀ ವೃತ್ತವು— ವೇದ ನಡುನಡುಗಿತ್ತು ಶಾಸ್ತ್ರವಗಲಿ ಕೆಲಕ್ಕೆ ಸಾರಿದುದಯ್ಯ: ತರ್ಕತರ್ಕಿಸಲರಿಯದೆ ಮೂಗು ವಟ್ಟದ್ದಿತಯ್ಯ-ಆಗಮ ಹೊರತೊಲಗಿ ಅಗಲಿದ್ದಿತಯ್ಯ ನಮ್ಮ ಕೂಡಲಸಂಗನು ಚೆನ್ನಯ್ಯನ ಮನೆಯಲುಂಡಕಾರಣ-ಎಂಬ ವಚನದ ಬಸುರಿಂದ ಬಿಂದಿದೆ—

ಗಿರಿಜಾಕಲ್ಯಾಣದಲ್ಲಿ ಹರಿದೇವನ ಲಿಂಗವಂತಿಕೆಯು ಬಲ್ಲವರಿಗೆ ಬಲಿದು ತೋರುತ್ತಿದೆ- ಇದೆಕೊಳ್ಳಿ:—

ಶಿವನ ಮನೋಹರಂ ಶಿವನ ಪುಣ್ಯಬಲಂ ಶಿವನಾತ್ಮಸಂಕುಲಂ
ಶಿವನ ವಿಲೋಚನಂ ಶಿವನ ಗೋತ್ರಕುಲಂ ಶಿವನೂರ್ಜಿತೋಜ್ವಲಂ

ಶಿವನ ಸುಖಂ ಸದಾಶಿವನ ಸರ್ವಮುಖಂ ಶಿವಭಕ್ತರೆನ್ನ ಕಾವ್ಯ
ಮನತಿಸಮ್ಮದಂ ಬೆರಸು ಪೊರ್ದುಗೆ ತಿರ್ದುಗೆ ತಾಳ್ವುದಕ್ಕರಿಂ ||

ಇದರಲ್ಲಿ ಶಿವಭಕ್ತರನ್ನು ಶಿವನ ಗೋತ್ರಕುಲಂ ಎಂದುದು ಸೂಕ್ಷ್ಮಾಗಮದ ಏಳನೆಯ ಪಟಲದಲ್ಲಿ ಲಿಂಗವಂತನನ್ನು ಕುರಿತು " ಗೋತ್ರಂಚ ಶಿವ ಗೋತ್ರಂಚ ನಾಮಾಪಿ ಶಿವ ನಾಮ ಚ | ಸದಾಶಿವೌ ಚ ಪಿತರೌ ಬಾಂಧವಾಃ ಶಿವ ಕಿಂಕರಾಃ | ಎಂಬ ಶಿವಶಾಸನವನ್ನು—ಪುಟವಿಟ್ಟು

ಬಸವೇಶನು— ಸೆಟ್ಟಿಎಂಬೆನೆ ಸಿರಿಯಾಳನ ಮಡಿವಳನೆಂಬೆನೆ, ಮಾಚಯ್ಯನ ಡೋಹರನೆಂಬೆನೆ ಕಕ್ಕಯ್ಯನ ಮಾದರನೆಂಬೆನೆ ಚೆನ್ನಯ್ಯನ ಹಾರುವನೆಂಬೆನೆ ಎನ್ನ ಎಂದಡೆ ಕೂಡಲಸಂಗಯ್ಯನಗುವನಯ್ಯ—ಎಂದುದರ ಪ್ರತಿಧ್ವನಿಯು ಗಿರಿಜಾಕಲ್ಯಾಣದ ತೃತೀಯಾಶ್ವಾಸದಲ್ಲಿ ಶ್ರೀ ಪಾರ್ವತಿಯು ಅವತರಸಿದೊಡನೆ ಲಿಂಗದರ್ಶನವಾಗುವನ್ನಕ್ಕ ಮೊಲೆಯುಣ್ಣಲಿಲ್ಲೆಂದು ಕವಿಯು ವರ್ಣಿಸಿದುದು. ಲಿಂಗಧಾರಣವು ಪರಮ ಧರ್ಮವೆಂಬ ಭಾವವನ್ನು ಸೂಚಿಸುತ್ತಿದೆ. ನೋಡಿ:—

ಅಮಮಪಯೋವಾರ್ಧಿಗೆ ಚಂ
ದ್ರಮನಂ ಪುಣ್ಯಕ್ಕೆ ಮುಕ್ತಿಯಂ ತೋರ್ಪಂತಾ |
ವಿಮಳೆಗೆ ಗಿರಿಜೆಗೆ ಶಿವಲಿಂ
ಗಮುವಧಿಕ ಮನಃ ಪ್ರಮೋದದಿಂತೋರುವುದುಂ ||
ತೋರಲೊಡಂಕಣ್ದೆರೆದಳ್
ಹೇರಿದಳೆರಡಂ ಕರಂಗಳಂ ನೊಸಲೊಳ್ ಸೊಂ
ಪೇರಿದಳಭವ ನೊಳಗೆ ಬೇ
ರೂರಿದಳಂಕುರಿಸಿ ಪಲ್ಲವಿಸಿ ಫಲವಾದಳ್ ||
ಆಕೆಯ್ಯೊಳ್ಮೊಲೆಯುಂಡಳ್
ಸಾಕಾರ ಶಿವಪ್ರಸಾದನವನೀತಮುಮಾ
ಕೆಯ್ಕೊಂಡಳ್ಗಿರಿ ಪತಿಸುತೆ
ಲೋಕೈಕಾರಾಧ್ಯೆ ಮೇನೆಯೊಡ ನೊಪ್ಪಿರ್ದಳ್ ||

ಇಲ್ಲಿ ಶಿವಲಿಂಗಮಂ ತೋರೆ ಎಂದು ಶಿವಲಿಂಗದರ್ಶನವನ್ನು ಹೇಳಿರುವಲ್ಲಿ

ಧಾರಣವೆಂತು ? ಎಂದು ಕೇಳಬಹುದು ಕನ್ನಡ ನುಡಿಯನಡೆ [ idiom ] ಯಲ್ಲಿ ಹಿಡಿ ಮತ್ತು ತೋರಿಸು ಎಂಬ ಧಾತುಗಳು ಅರ್ಪಿಸು ಸಂಗಡಿಸು ಎಂಬ ರ್ಥದಲ್ಲಿಯು ಬಳಕೆಯಾಗುತ್ತವೆ. ದೇವರಿಗೆ ನೈವೇದ್ಯವನ್ನು ಹಿಡಿತೋರಿಸು ಎಂಬುದು ದೇವರಿಗೆ ನೈವೇದ್ಯವನ್ನು ಅರ್ಪಿಸು ಎಂದು ಆಗುವುದು. ಬಾಲ್ಯ ವರ್ಣದ ಗದ್ಯದಲ್ಲಿ ಕರವಳಯದ ಪರಬೊಮ್ಮಕ್ಕೆ **ಪೊಂಗಡಗದ ಲಿಂಗ ವಂತೆಗೆ** ಎಂದು ಹರಿದೇವನು ಗಿರಿಜಾತೆಗೆ ಲಿಂಗವಂತಿಕೆಯನ್ನು ಕಂಠದಿಂದಲು ಹೇಳಿರುವನು.

ಇದೆಲ್ಲ ಹರಿದೇವನ ಲಿಂಗವಂತಿಕೆಗೆ ಅಂಗೆಯ್ಗನ್ನಡಿಯಾಗಿದೆ.

— ಲಿಂಗವಂತಿಕೆಯ ಧರ್ಮತಾತ್ವಿಕಗಳು —

ಹರಿದೇವನು ಲಿಂಗವಂತನೆಂದು ಹೇಳಿದೆನು. ಲಿಂಗವಂತಿಕೆಯೆಂದ ರೇನು? ಅದರ ತಿರುಳೆಲ್ಲಿ? ಅದು ಮಾನವನ ಬಾಳುವೆಯನ್ನು ಆವ ಬಗೆ ಯಿಂದ ಅಂದಗೊಳಿಸುವುದು. ಇಲ್ಲಿ ಒದಗುವ ಕಷ್ಟ ದುಃಖಗಳ ಕಡಲನ್ನು ಈಜಿಸುವ ಅದರ ತೆರನಾವುದು ? ಅದೊಂದು ಬರಿಯ ಭಕ್ತಿಯ ಹಾದಿಯೊ? ಅಲ್ಲದೆ ಈ ಜಂಜಡದ ತೊಡಕನ್ನು ಕಳೆವ ತಾತ್ವಿಕವ ತಾಳಿಹುದೊ?

ಮಮ್ಮಟಾಚಾರ್ಯನು ಕಾವ್ಯ ಪ್ರಯೋಜನವನ್ನು ಹೇಳುವಲ್ಲಿ 'ಸದ್ಯಃ ಪರನಿರ್ವೃತಯೇ ಕಾಂತಾಸಮ್ಮಿತತಯೋಪದೇಶಯುಜೇ,' ಎಂದು ಲೋ-ಕೋತ್ತರ ನಿರ್ವೃತಿಗೂ ರಮಣಿಯ ಉಪದೇಶದಂತೆ ಹಿತೋಪದೇಶಕ್ಕೂ ಕಾವ್ಯವು ಹೇತುವೆನ್ನುವನು. ಹರಿದೇವನು ಲಿಂಗವಂತನೆಂದು ಅವನ ಕಾವ್ಯ ಗಳಿಂದಲೆ ಲಿಂಗಧರ್ಮದ ತಾತ್ವಿಕಗಳನರಿವ.

ಶಿವಾಗಮ ಸಿದ್ಧಾಂತವನ್ನು ಮಿರುಗುವಿಡಿಸಿ ಶರಣರು ಜಗಕ್ಕಿತ್ತ ಲಿಂಗಾಯತ ಮತತತ್ವಗಳು ಈ ಬಾಳನ್ನು ಒಂದು ಹುಸಿಯಾಟವೆಂದು ಎಣಿ ಸುವುದಿಲ್ಲ. ಅದು ನಿಜವಾದ ಬಾಳು, ಕೆಲಸಕ್ಕೆ ಬಾರದ ಬೀಳಲ್ಲ. ನಮಗೆ ತೋರುವ ವಿಶ್ವವು, ಆತ್ಮನನ್ನು ಹದಗೊಳಿಸಿ ಹಸನು ಮಾಡಿ ಅವನೊಳಗಿನ ಶಿವಸಾಮರಸ್ಯವನ್ನು ಬಿಚ್ಚಿ ತೋರಿಸುವ ದುಡಿಮೆದಾಣವಿದು, ಇಲ್ಲಿಯ ನಮ್ಮ ದುಡಿತಗಳೂ ಹೋರೆಗಳೂ ಶಿವನು ನಮಗಿತ್ತ ಕೆಯ್ಗೆಲಸ; ಅದನ್ನು ಮಾಡಿ ಒಪ್ಪಿಸಿದರೆ ಶಿವನು ನಮ್ಮನಪ್ಪುವ ಈ ಸೃಷ್ಟಿಯು ಶಿವನ ಸೌಂದರ್ಯ

ವನ್ನು ತೋರಿಸುವ ಕನ್ನಡಿ. ಇದನರಿತು ನಡೆವುದು ಶಿವಧರ್ಮ. ಶಿವ ಧರ್ಮದ ಸೊಗಸಿನ ಸುಗ್ಗಿಯೆ ಶಿವಲಿಂಗದ ಪೂಜಾಕ್ರಿಯೆಯಾಗಿ ಪರಿಣಮಿಸುವುದು. ಇದಕ್ಕೆ ಹೆಂಗಳೆಯರು, ಗಂಡುಸರು, ಬಾಲರು, ಬಾಲಿಕೆಯರು ಎಂಬಿದೇತರ ತಡೆಬಿಡುವಿಲ್ಲ.

— ಸೃಷ್ಟಿಯು ಶಿವನನ್ನು ಕನ್ನಡಿಸುವುದಕ್ಕೆ —

ದೇವಕುಮಾರಿಬಾಲೆಸುಕುಮಾರಿ ಸಮರ್ಥೆಯತಿಸ್ವತಂತ್ರೆ ಸಾ ।
ಸಾವಿಧ ಶೈಳರಾಜಿ ವನರಾಜಿ ಸರೋವರರಾಜಿ ಸಲ್ಲತಾಂತಾವಳಿ
ಸೈಕತಾವಳಿ ಲತಾವಳಿ ಎಂಬಿರರಲ್ಲಿ ಸಂತತಂ ।
ದೇವರ ದೇವನಂ ಶಿವನನರ್ಚಿಸು ತಿರ್ದಪಳೊಲ್ಲದೇನುವಂ ॥
ಗ-ಪುಂಡರೀಕ ಪ್ರಕರ ಪರಿಮಳಾಸಕ್ತ ಭ್ರಮರಕುಲವಿಲಸಿತಮಾದ

ಕಾಸಾರ ತಟದೊಳ್ ಮಂದಾನಿಲನಿಂ ಪರೆದ ಪರಾಗಪೀಠದ ಮೇಲಣ ಶಿವಲಿಂಗಮನಗಣಿತ ಪ್ರೇಮದಿಂ ಸೊಗಸು ಮಿಕ್ಕು ಮಿಗೆಪೂಜಿಸುತಿರ್ಪತನೂಜೆಯಂ ಕಂಡು:- ಗಿರಿಜಾಕಲ್ಯಾಣದಲ್ಲಿ ಪಾರ್ವತಿಯ ಬಾಲ ವರ್ಣನೆ.

———

ಈ ಪದ್ಯದಲ್ಲಿ ಹರಿದೇವನು ಪ್ರಕೃತಿಸೌಂದರ್ಯವನ್ನು ಈಶನ ಸನ್ನಿಧಿಯೊಡನೆ ಹೆಣೆದು ತೋರಿಸಿ ಆ ಸೌಂದರ್ಯದಿಂದ ಶಿವಭಕ್ತಿಯು ಪುಟವೆದ್ದು ಶಿವನ ಅರ್ಚೆಯಲ್ಲಿ ಮನವು ಅಡಗಿ ತನ್ಮಯವಾಗಿ ಒಂದು ಬಗೆಗೆ ನಿಲುಕದ ಮಾತಿನ ಹವಣಿಗೆ ಅಮರದ, ಸೊಗವನ್ನು ಬೀರುವ ಭಾವವನ್ನು ಬಿಚ್ಚಿರುವನು. ಇದು ಸೃಷ್ಟಿಯು ಹಗ್ಗದಲ್ಲ ಎದ್ದಿರುವ ಹಾವೆಂಬ ಅದ್ವೈತದ ಮಾಯಾವಾದಕ್ಕೆ ನಿಲುಕದು. ಪರಮಾತ್ಮ ಪ್ರಕೃತಿಗಳಿಗೆ ಅಂಗಾಂಗಿತ್ವವನ್ನು ಬಿತ್ತರಿಸುವ ವಿಶಿಷ್ಟಾದ್ವೈತಕ್ಕೆ ದೂರಹುದು.

ಸೃಷ್ಟಿಯು ಶಿವನಲ್ಲಿ ಸಮರಸವಾದ ಅಗಾಧಪರ ಶಕ್ತಿಯಿಂದತೋರುತ್ತ ಶಿವನ ಮಾಧುರ್ಯವನ್ನು ಭಕ್ತನ ಮನದ ಮರಿದುಂಬಿಗೆ ಕನ್ನಡಿಸುವ ಕನ್ನಡಿ ಎಂಬ ಶಿವಶಕ್ತಿಸಾಮರಸ್ಯದ ಲಿಂಗಾಂಗ ಸಂಗತತ್ವಕ್ಕೆ ಮಾತ್ರ ಕೈಗೂಡುವುದು.

ಇಂತಿಹ ಜಗತ್ತಿನ ಒಡಲಲ್ಲಿ ನಮ್ಮ ಬಾಳು ಸಟೆಯ ಸಂಕೆಯಲ್ಲ. ನೈಜ ವಾದುದು ! ಶಿವನಲ್ಲಿ ನಮ್ಮ ಸಾಮರಸ್ಯವನ್ನು ಮಾಯೆಯ ಮುಸುಕಿನಿಂದ ಹೊರಬಿಚ್ಚುವ ಒಂದೆ ಒಂದು ಸಾಧನವು.

ಆನೈನಾರೆಂಬ ಶರಣನಿವನು. ಶಿವನಲ್ಲದೆ ಬೇರೊಂದನರಿಯನು. ಆಕಳುಗಳನಾರಯ್ವುದು ಅವನ ಕಾಯಕವು. ಶಿವನಪ್ಪಣೆಯಿಂದ ಕೊಂಡುದದು. ಅವನ ಬಾಳು ಅಚ್ಚಬಾಳು. (Simple living). ಸಯ್ದನ್ನ ಬಾಳು. ಶ್ರೀಹರಿದೇವನು ಅದರ ಬಣ್ಣನೆಯ ಹಾಡಿದುದನಾಲಿಸಿಂ:—ಆನೈನಾರು.

ಇಂತು ಪಂಚಾಕ್ಷರಿಯ ಬಾಯ್ವೆಣ್ಣೆಯೆನೆ ಬಳೆದು
ಸಂತತಂ ಪಂಚಾಕ್ಷರಿಯ ನಾಲಗೆಗೆ ಸವಿದು
ಉದಯ ಸಮಯದೊಳೆದ್ದು ದೇವಾಲಯಕೆಬಂದು
ಮದನಾರಿ ಶರಣೆನುತ ಕೈಮುಗಿವುತಂ ನಿಂದು
ಆನವರತ ವೈದ ಕ್ಕರವನೆ ಉಚ್ಚರಿಸುತಂ
ನೆನೆಯುತಿರಲೊಂದುಪಾಯವನಲ್ಲಿ ನೋಡುತುಂ |
ಇರೆಶಿವಂ ಪ್ರೇರಿಸಿದನಾತನ ಮನಕ್ಕೊಂದು
ಪುರದ ಗೋವೃಂದಮಂ ಕಾವುದೇ ಲೇಸೆಂದು
ನಿಶ್ಚಯಿಸಿ ನೆನೆಯುತನುನಯದಿಂದ ಪೊರಮಟ್ಟು
ನಿಶ್ಚಿಂತ ಚಿತ್ತನಾನಂದಮಂ ಮುಂತಿಟ್ಟು—

ಶಿವಪ್ರೇರಣದಿಂದಿಂತು ಕೈಗೊಂಡ ಹಸುಬಾಳುವಿನಲ್ಲಿ ದನಕಾಯುವಾಗ ಆನೈನಾರು ಸಂತಸದ ಶಿವನಾಮವೇ ಉಸುರಾಗಿ ಕೊಳಲೂದಿ ದನಕಾಯ್ವನು ದನಗಳೂ ಶಿವಗಾನಲೋಲವಾಗುವುವು.

ಊರದನವೆಲ್ಲವಂ ತಾನೊಂದುಗೂಡುತುಂ
ದೂರಕ್ಕೆ ಪೊರಮಟ್ಟು ಕೊಂಡು ಬಂದಾಡುತುಂ
ಪಿರಿದು ಮೇಗೆರೆದು ಹುಲ್ಲುಳ್ಳ ಹೊಲದೆ ಳ್ ಹೊಡೆದು
ಪರಿಪರಿಯ ಹುಲ್ಲು ದಂಡೆಗಳನಲವಿಂ ತಳೆದು
ತಂದು ಕಟ್ಟೋಗರ ಮನುಂಡು ಕೆಯ್ಯಂತೊಳೆದು
ಒಂದೊಂದು ನೆಳಲ ಹಸಲೆಯಲಿ ನಲಿನಲಿದು

ತೆಪ್ಪಗಾಲಿಕ್ಕಿ ತ್ರಿಭಂಗಿಯಿಂದಂ ನಿಂದು
ಒಪ್ಪುತಿರ್ಪೊಂದು ಪೊಸಗೊಳಲಂ ಕೊಳುತ್ತೊಂದು
ಪಂಚಾಕ್ಷರಿಯ ಫಲವನೊಪ್ಪಿಸವಿವಂದದಿಂ
ಪಂಚವಕ್ತ್ರನ ಕಿವಿಗೆ ಸವಿಯನೀವಂದದಿಂ
ಅಧರದೊಳ್ತಂದಿಳುಪಿದಂ ಕೊಳಲನೊಪ್ಪದಿಂ
ಮಧುರಾಕ್ಷರಂಗಳಂ ಸವಿವ ಸಮರಾಗದಿಂ
ಹಲ್ಲವಣೆ ಹೆಕ್ಕಳಂಗೊಂಡು ವನದೋಳ್ ತೀವೆ
ಎಲ್ಲಾ ಮೃಗಂಗಳುಂ ಮೇಯದೆ ಕಿವಿಯನೋವೆ
ಭಕ್ತಿಯಿಂ ಮರೆದೂದುತತಿಸುಗತಿಗಳು ಮಾಗೆ
ಯುಕ್ತಿಯಿಂ ಭರತ ಶಾಸ್ತ್ರಕ್ಕೆ ದಿಕ್ಕುಗಳಾಗೆ

ಇಂತು ಶಿವನೊಳಚ್ಚೊತ್ತಿದ ಬದುಕಿನಲ್ಲಿ ವಿಶ್ವವೆಲ್ಲವು ಶಿವಮಯವಾದ ಆಂದವನು ಕೇಳಿರಿ— ಕೊಳಲ,

ರಾಗರಸದೊಳಗೆ ಪಂಚಾಕ್ಷರಗಳೇಳುತಿರೆ
ನಾಗಾಭರಣನೆಲ್ಲವಂ ಒರೆದು ಕೇಳುತಿರೆ
ವದನದೊಳ್ವೇಣುವಿನೊಳೈದಕ್ಕರಂಗಳಿರೆ
ಹೃದಯದೊಳಗುಸುರೊಳಗೆ ಶಂಕರಂ ಸಿಲ್ಕುತಿರೆ

ಮನುಮುನಿಗಳ ಮನದತ್ತಣಿಂದ ಸರಿವ ಅನಲಾ ಕ್ಷನುದನಗಾಹಿಯ ಕೊಳಲ ದನಿಯಲಿ ಹಿಡಿವಡೆದು ಅವನಮೈದುಂಬಿ ಮನೆಗೊಂಡು ತನ್ನೊಳು ವಿಶ್ವವ ನಡಗಿಸಿ ಬೆಳಗುವ ಭೇದವಿದು ಭಕ್ತಿಯಧ್ಯಾನಯೋಗಕ್ಕೆ ಸುಲಭವು. ಲೋಕದ ಮಾನವರಂತೆ ತನ್ನ ಹೋರೆಯನ್ನುಗೆಯ್ಯುತ್ತಲು ಆ ಕಾಯಕದಲ್ಲಿ ಶಿವನನಡಗಿಸುವುದು ಲಿಂಗವಂತಿಕೆಗೆ ಅನನ್ಯಸಾಧಾರಣವು.

— ಇದರ ಗುಟ್ಟನ್ನು ಕವಿಯು —

ಅನವರತ ವೈದಕ್ಕರವನುಚ್ಚರಿಸುತಂ
ನೆನೆವುತಿರಲೊಂದು ಪಾಯವನಲ್ಲಿ ನೋಡುತಂ
ಇರೆಶಿವಂ ಪ್ರೇರಿಸಿದನಾತನ ಮನಕ್ಕೆಂದು
ಪುರದ ಗೋವೃಂದಮುಂ ಕಾವುದೇಲೇಸೆಂದು.

ಎಂಬೀ ಪಂಕ್ತಿಗಳಲ್ಲಿ ತುಂಬಿರುವನು. ಮನ್ವಾದಿಸ್ಮೃತಿಕಾರರಂತೆ ಜಾತಿಯ

ಉದ್ಯಮವನ್ನಾಗಿ ತನ್ನ ಹೊಟ್ಟೆಗಾಗಿ ಆವುದೊಂದು ಕೆಲಸವನ್ನು ಕೊಳ್ಳು ದೆಂದು ಶರಣರು ನಡೆಯಲಿಲ್ಲ. ತಮ್ಮ ಬಾಳಿನಲ್ಲಿ ತಮ್ಮ ಕೆಲಸದಲ್ಲಿ ತಮ್ಮ ಮಾಟದಲ್ಲಿ ಶಿವನಕೂಟವಿರಲೆಂಬ ತತ್ವದಿಂದ.

ಇಂತಾಗಿ ಲಿಂಗವಂತಿಕೆಯು ಬರಿಯ ಭಕ್ತಿಯು ಹೊಲಬಲ್ಲ. ಅದೊಂದು ಕತಾತ್ವಿದ ಹಾದಿ. ಅದರಿಂದ ಸಾಮಾಜಿಕ, ಔದ್ಯೋಗಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ಬಿಡಿಸಬಹುದು. ಮಹಾರಾಷ್ಟ್ರದಲ್ಲಿಯೂ, ಬಂಗಾಲದಲ್ಲಿಯೂ ವೈಷ್ಣವ ಭಕ್ತಿಯು ಎನಿಸೊಂದು ಹಬ್ಬಿ ಸಾಧುಸತ್ಪುರುಷರು ಅನೇಕರು ಅವ ತರಿಸಿದರು. ಆದರೆ ಪ್ರಾರಬ್ಧ ಕರ್ಮದ ತೊಡಕಿನಲ್ಲಿ ಸಿಕ್ಕು ನರಳುವ ಸ್ಮಾರ್ತ ಧರ್ಮದಿಂದ ಬಳಲುವ ಜನಕ್ಕೆ ಆತ್ಮೋನ್ನತಿಯ ಮಾರ್ಗವನ್ನಾರು ತೋರಿ ಸಲಿಲ್ಲ. ಶೂದ್ರನು ಆವ ಸಂಸ್ಕಾರವನ್ನೂ ಹೊಂದಲಾರನು. ಆತ್ಮಸಂಯಮ ನದಿಂದ ತಪವನ್ನಾಚರಿಸಲಾರನು. ಆಚರಿಸಿದರೆ ರಾಷ್ಟ್ರವಿಪತ್ತು ಬ್ರಾಹ್ಮಣ ಬಾಲರಿಗೆ ಅಪಮೃತ್ಯು. ರಾಮಾಯಣದ ಉತ್ತರಕಾಂಡದ ೭೪ನೆಯ ಸರ್ಗ ದಲ್ಲಿ ಶಂಬೂಕನ ಕಥೆಯನ್ನು ಓದಿರಿ. ಬಿತ್ತರಿಸಲು ಇಲ್ಲಿ ತೆರವಿಲ್ಲ.

ಪ್ರಾರಬ್ಧ ಕರ್ಮದಿಂದ ಜಾತಿ, ಜಾತಿಯಿಂದ ಹೋರೆ, ಹೋರೆಯಿಂದ ಬಾಳು. ಮನಃಸಂಸ್ಕೃತಿಗೆ ಬ್ರಾಹ್ಮಣನೊಬ್ಬಗೆ ಅಧಿಕಾರ. ಅವನಿಂದ ಕಲಿತು ವೈಶ್ಯನು ತಿದ್ದಬಹುದು. ಕ್ಷತ್ರಿಯನು ರಾಜನಾದರೂ ಬ್ರಾಹ್ಮಣನಿಗೆ ಎನಿತೊ ಕಡಿಮೆಯವನು ಎಂಬೀ ತೊಡಕನ್ನು ತುಕಾರಾಮನು ಮೊದಲಾದ ಸಂತರು ಬಿಡಿಸಲಾರ್ತರಿಲ್ಲ.

ಅಂದುಮೊದಲು ಬುದ್ಧದೇವನು ಒಡ್ಡಿದ ಧರ್ಮವಿಸ್ತರವು ಶೂನ್ಯವಾ ದದ ರೂಪುವಿಡಿದು ಜನಮಾನ್ಯವಾಗಲಿಲ್ಲ. ಶರಣರು ಬಿತ್ತರಿಸಿದ ಲಿಂಗಾಯ ತವು ಶಿವಾಗಮವಿಹಿತವಾದ, ಶ್ವೇತಾಶ್ವತರಾದಿ ಉಪನಿಷತ್ತುಗಳಿಂದಲೂ ಶ್ರೀರುದ್ರಸಂಹಿತಾದಿ ವೇದಸಂಹಿತೆಗಳಿಂದಲೂ ಮೊಳೆತ, ಭಕ್ತಿಯ ಸುಧಾಸ ಸಿಯ ಫಲವಾದುದು. ಸ್ಮಾರ್ತಧರ್ಮ ವರ್ಣವಿಷಯದ ಕಹಿಯನ್ನು ಕಳೆದಿತ್ತು.

ಮಾನವನು ಕೆಯ್ಗೊಂಬುದೆಲ್ಲ ಕೆಲಸವು ತನ್ನ ಜ್ಞಾನಕ್ರಿಯೆಗಳ ತಿದ್ದಿ ಲಿಂಗಸಂಗವನ್ನು ಹೊಂದಿಸಲಿರುವುದಾಗಿ ಕೀಳು ಮೇಲು ಜಾತಿಭೇದ ಕ್ಕಿಂಬಿಲ್ಲ. ಸಮಾಜವು ಒಗ್ಗಟ್ಟಿನಿಂದ ಬಿಗುಹಾಗಲೊಂದು ಹದನವನು ಶರ ಣರು ತೋರಿದರು. ಅಂಗನೆಂಬ ಆತ್ಮನಿಗೂ, ಲಿಂಗವೆಂಬ ಪರಮನಿಗೂ

ಸಾಮತಸ್ಯವನ್ನು ತೋರಿಸಿ ವಿಶಾಲದೃಷ್ಟಿಯ ತತ್ವಜ್ಞಾನವನ್ನು ಬೆಳೆಯಿಸಿದರು. ಬಾಳುವೆಯನ್ನು ಉಚ್ಚರಂಗದಲ್ಲಾಡಿ ನೀತಿಯನ್ನು ಹಬ್ಬಿಸಿದರು. ಇದನ್ನು ಬಗೆದುಂಬ ಭಾವಿಸಿ, ನಡೆದುಂಬ ಆಚರಿಸಿ ನಾಲಗೆದುಂಬ ಹಾಡಿ ನಮ್ಮ ಬದುಕನ್ನು ಹುರಿಗೊಳಿಸಿದರು.

---

# ಹರಿದೇವನ ಕಾವ್ಯವು.

ಇದುವರೆಗೆ ಹರಿದೇವನ ಕಾವ್ಯಗಳ ತನಿರಸದ ತವರು ಅವನ ಸೂಸುವ ಶಿವಭಕ್ತಿ ಎಂಬುದನ್ನು ನೋಡಿದೆವು. ಅವನು ಅಚ್ಚ ಲಿಂಗವಂತನೆಂದು ಕಂಡೆವು. ಲಿಂಗವಂತಿಕೆಯ ತಾತ್ವಿಕಗಳಾವುವು ಎಂದು ಅರಿದೆವು. ಈಗವನ ಕಾವ್ಯವನ್ನು ವಿಮರ್ಶಿಸುವ

ಈ ಉಜ್ಜುಗದಲ್ಲಿ ಕಾವ್ಯವು ಮಮ್ಮಟಭಟ್ಟನ ಮತದಿಂದ 'ತದದೋಷೌ ಶಬ್ದಾರ್ಥೌ ಸಗುಣಾವನಲಂಕೃತಿ ಅಹುದೊ ? ಇಲ್ಲವೆ' ಜಗನ್ನಾಥ ಪಂಡಿತನೆಂದಂತೆ "ರಮಣೀಯಾರ್ಥಪ್ರತಿಪಾದಕಃ ಶಬ್ದಃ ಕಾವ್ಯಮೆನಿಪುದೊ ? ದೋಷವಳಿದಗುಣದಿಂದೊಡಂಬಟ್ಟ ಶಬ್ದಾರ್ಥಗಳು ಕಾವ್ಯವೊ ? ಅಲೌಕೀ ಆಲ್ಹಾದಕರವಾದ ಅರ್ಥವನ್ನು ಗೋಚರಿಸುವ ಶಬ್ದವು ಕಾವ್ಯವೋ ! ಎಂಬಿಕ ಬಿಗಿಗಂಟನ್ನು ಬಿಡಿಸುವ ಕಾರ್ಯವು ನಮ್ಮದಲ್ಲ. "ವಾಗರ್ಥಾವಿವಸಂಪೃಕ್ತೌ ವಾಗರ್ಥಪ್ರತಿಪತ್ತಯೇ | ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ" ಎಂದು ಕಾಳಿದಾಸನು ಶಬ್ದಾರ್ಥದ್ವಯವು ಕಾವ್ಯವೆಂದು ಹಾಡಿದನು ಹರಿದೇವನು ಅದನ್ನನುಮತಿಸಿ—

ಅತುಳತರಾರ್ಥ ಮರ್ಥದನು ವೃತ್ತಿಪದಂ ಪದದಿಚ್ಛೆ ಬಂಧಮೂ |
ರ್ಜಿತ ಪದಬಂಧಸಂಧಿ ನವರೀತಿಸುರೀತಿಗಣಂ |
ಸದೃಕ್ಕಲಂ ಕೃತಿಸದಲಂಕೃತಿಯ ಪ್ರತಿಮಭಾವವನೂನಭಾವದುನ್ನತರಸ—
ಸತ್ಕವಿಗಳಾಲಿಸೆಪೇಳ್ದಪೆನೀಪ್ರಬಂಧಮುಂ || (ವೆಂದು

ಎಂದುಸತ್ಕಾವ್ಯಲಕ್ಷಣವೃತ್ತವನ್ನು ಹಾಡಿದನು.

ಅಲೌಕಿಕಾರ್ಥವೂ ಅರ್ಥಕ್ಕನುಕೂಲವಾದ ಪದವೂ ಪದಾನುಸಾರಿಯಾದ ಛಂದಸ್ಸೂ ಆ ಛಂದಸ್ಸಿಗೂ ಸಂಹಿತವಾದ ರೀತಿಯೂ ರೀತಿಗನುಗುಣವಾದ ಅಲಂಕಾರವೂ ಅಲಂಕಾರಕ್ಕುಚಿತವಾದ ಭಾವವೂ ಭಾವದಿಂದ ಒಪ್ಪುವ ರಸವೂ ಕಾವ್ಯವು-ಹೀಗಿರಲು ಕವಿಗಳು ಅದನ್ನು ಮೆಚ್ಚಿಕೇಳುವರು. ಆದುದರಿಂದ ಕಾವ್ಯವು "ಅದೋಷೌಶಬ್ದಾರ್ಥೌಸಗುಣೌ"

ರಸವು ಕಾವ್ಯದ ಜೀವವು. ಉಚಿತಲಲಿತ ಪದ ಸನ್ನಿವೇಶದಿಂದ ಮಧುರವಾದ ಕಾವ್ಯದಿಂದ ವ್ಯಕ್ತವಾಗುವುದು. ಅದನ್ನು ವ್ಯಂಜಿಸಲಿಕ್ಕೆ ಬಂಧವೆಂಬ ಛಂದಸ್ಸೂ, ರೀತಿಯೆಂಬ ಶೈಲಿಯೂ, (Style) ಅದಕ್ಕೊಪ್ಪುವ ಶಬ್ದಾರ್ಥಲಂಕಾರಗಳೂ ಸಾಧನವಾಗಿವೆ.

ರಸವೆಂದರೇನು ? ಒಂದು ಮಾತಿನಲ್ಲಿದನ್ನು ಹೇಳಲಾಗದು.

ಆತ್ಮನಲ್ಲಿ ಪೂರ್ವ ಅನುಭವಗಳಿಂದ ಅಡಕಿಲಾದ ವಾಸನೆಯು ಗೋಚರವಾದರೆ ಅದೇರಸವು ಆಗಲುಳ್ಳುದು. ಅಹುದು ಎನ್ನದೆ ಆಗಲುಳ್ಳುದೆನಲೇಕೆ ? ಆತ್ಮಗತವಾಸನೆಗಳು ನಮ್ಮ ಇಂದ್ರಿಯಗಳಿಗೆ ಗೋಚರಿಸುವ ವಸ್ತುಗಳಿಂದ ಏಳುತ್ತವೆ. ಮತ್ತು ಗೋಚರಿಸುತ್ತವೆ. ಆದೀಗ ರಸವೆನಿಸದು. ನಮ್ಮಲ್ಲಿರುವ ಕರುಣಾಮಯವಾಸನೆಗಳು ದುಃಖದಲ್ಲಿ ನರಳುವವನನ್ನು ಕಂಡು ಉದ್ದೀಪಿತವಾಗಿ ನಮಗೆ ಶೋಕಾನುಭವವನ್ನುಂಟು ಮಾಡುವುವು. ಈ ಶೋಕವು ರಸವೆನಿಸುವುದಿಲ್ಲ. ಏಕಂದರೆ ಅದು ಆಲ್ಹಾದಕವಾಗಿಲ್ಲ, ಅದೇ ಕುಮಾರ ಸಂಭವದೊಳಗಿನ ರತಿವಿಲಾಪವನ್ನು ಅಥವಾ ರಘುವಂಶದ ಅಜವಿಲಾಪವನ್ನು ಓದಿದರೆ ಕರುಣಾವಾಸನೆಗಳು ಉದ್ಬೋಧವನ್ನು ಪಡೆದು ಶೋಕರಸ ವೆನಿಸುತ್ತವೆ. ಈ ಶೋಕರಸವು ಶೋಕದ ಹಾಗಲ್ಲ. ಆಲ್ಹಾದಕವಾಗಿದೆ. ಇದಕ್ಕೊಂದು ಕಾರಣವುಂಟು.

ಲೌಕಿಕಾನುಭವದಿಂದ ಗೋಚರಿಸುವ ಪದಾರ್ಥಗಳು ಆತ್ಮನ ಅಜ್ಞಾನದ ಮುಸುಕನ್ನು ಮಾತ್ರ ದೂರಮಾಡುವ ಇಂದ್ರಿಯಗಳ ಪ್ರಮಾಣದಿಂದ ಗೋಚರಿಸುತ್ತವೆ. ಆದರೆ ಕವಿಯು ಜಾಣ್ಮೆಯಿಂದ ಹೆಣೆದ ಲಲಿತ ಪ್ರಬಂಧವು ವಾಸನೆಗಳನ್ನು ಉದ್ಬೋಧಿಸುವ ಪದಾರ್ಥಗಳನ್ನು ಗೋಚರಿಸುವಾಗ ಆತ್ಮನ ಆನಂದಾಂಶವನ್ನು ಮುಚ್ಚುವ ಮುಸುಕು ಸಹ ಹೋಗುವಂತೆ ಅಜ್ಞಾನವನ್ನು

ದೂರಮಾಡುವುದರಿಂದ ಈ ವಾಸನೆಗಳು ಆತ್ಮನ ನಿಜಾನಂದದೊಡನೆ ಉದ್ಬೋಧವಾಗಿ ಆನಂದಮಯವಾಗಿವೆ.

ರಸವನ್ನು ಪರಿಭಾಷೆಯ ತೊಡಕಿಲ್ಲದೆ ಸಾಧಾರಣವಾಗಿ ಹೇಳಿದೆನು. ಅದು ಶಾಸ್ತ್ರೀಯ ಪದ್ಧತಿಯಿಂದ ಪೂರ್ಣವಾಗಿರದು. ಶಾಸ್ತ್ರೀಯ ಸರಣಿಯಿಂದ ಹೇಳಿದರೆ ಸಾಧಾರಣ ಜನರಿಗೆ ತಿಳಿಯದು. ಸಾಧಾರಣ ವಿವರಣದಿಂದ ವಿಷಯವು ಅಪೂರ್ಣವಾಗ ಬಾರದೆಂದು ಜಗನ್ನಾಥ ಪಂಡಿತನ ಕೃತಿ ರಸ ಗಂಗಾಧರದ ಪ್ರಮಾಣವ್ಯಾಖ್ಯೆಯನ್ನು ಇಳಿಸುವ:—

ಸಮುಚಿತ ಲಲಿತ ಸನ್ನಿವೇಶ ಚಾರುಣಾ ಕಾವ್ಯೇನ ಸಮರ್ಪಿತೈಃ ಸಹೃದಯ ಹೃದಯ ಪ್ರವಿಷ್ಟೈಸ್ತದೀಯ ಸಹೃದಯತಾಸಹಕೃತೇನ ಭಾವನಾವಿಶೇಷಮಹಿಮ್ನಾವಿಗಲಿತ ದುಷ್ಯಂತ ರಮಣೀಯತ್ವಾದಿಭಿರಲೌಕಿಕವಿಭಾವಾನುಭಾವವ್ಯಭಿಚಾರಿಶಬ್ದವ್ಯಪದೇಶ್ಯೈಃ ಶಕುಂತಲಾದಿಭಿರಾಲಂಬನಕಾರಣೈಶ್ಚಂದ್ರಿಕಾದಿಭಿರುದ್ದೀಪನಕಾರಣೈರಶ್ರುಪಾತಾದಿಭಿಃ| ಕಾರ್ಯೈಶ್ಚಿಂತಾದಿಭಿಃ ಸಹಕಾರಿಭಿಶ್ಚ ಸಂಭೂಯ ಪ್ರಾದುರ್ಭಾವಿತೇನ ಅಲೌಕಿಕೇನ ವ್ಯಾಪಾರೇಣ ತತ್ಕಾಲನಿರ್ವರ್ತಿತೇನ ಆನಂದಾಂಶಾವರಣಾಜ್ಞೇನಾತಏವಪ್ರಮುಷ್ಟಪ್ರಮಾತೃತ್ವಾದಿನಿಜ ಧರ್ಮೇಣ--ಪ್ರಮಾತ್ರಾ ಸ್ವಪ್ರಕಾಶತಯಾವಾಸ್ತವೇನ ನಿಜಸ್ವರೂಪಾನಂದೇನಸಹ ಗೋಚರೀಕ್ರಿಯಮಾಣಃ ಪ್ರಾಗ್ವಿನಿವಿಷ್ಟವಾಸನಾರೂಪೋರತ್ಯಾದಿರೇವ ರಸ:— ಇದು ರಸದ ವ್ಯಾಖ್ಯೆ.

ಒಂದು ಮಾತಿನಲ್ಲಿ ಅದನು ಹೇಳಬೇಕಾದರೆ ಕಾವ್ಯಶಕ್ತಿಯಿಂದ ಉದ್ದೀಪಿತವಾದ ಕಾವ್ಯಜ್ಞನಭಾವವು— ರಸವು.

ಇರಲಿ ಕಾವ್ಯಶಕ್ತಿಯಿಂದ ರಸವಾಗಿ ಪರಿಣಮಿಸುವ ಭಾವಗಳು ಎಷ್ಟು ?

ರತಿರ್ಹಾಸಶ್ಚ ಶೋಕಶ್ಚ ಕ್ರೋಧೋತ್ಸಾಹೌ ಭಯಂತಥಾ
ಜುಗುಪ್ಸಾ ವಿಸ್ಮಯಶ್ಚೇತಿ ಸ್ಥಾಯಿಭಾವಾಃಪ್ರಕೀರ್ತಿತಾಃ ||

ಆ ಮೂಲಾಂತವಾಗಿ ಒಂದಾನೊಂದು ಪ್ರಬಂಧದಲ್ಲಿ ಸಿದ್ಧವಾದ ಭಾವಗಳು ಸ್ಥಾಯಿಭಾವಗಳೆನಿಸುವವು. ಉಳಿದ ಭಾವಗಳು ಸ್ಥಾಯಿಯಲ್ಲ. ಇಂತಹ ಸಾಯಿಯಾಗಲಾರದ ಭಾವಗಳು ನಿರ್ವೇದವು ಮುಂತಾಗಿ

ಮೂವತ್ತು ಮೂರು ಇರುವುವು. ಇವುಗಳು ಸ್ಥಾಯಿ ಭಾವಗಳನ್ನು ಪುಟ ಗೊಳಿಸುತ್ತ ವ್ಯಭಿಚಾರಿಗಳೆನಿಸುತ್ತವೆ. ಇವುಗಳಲ್ಲಿ ನಿರ್ವೇದವು ಶಾಂತಿರಸಕ್ಕೆ ಮೂಲವಾಗಿ ಸ್ಥಾಯಿ ಭಾವವಾಗುವದೆಂದು "ನಿರ್ವೇದ ಸ್ಥಾಯಿಭಾವೋಸ್ತಿ ಶಾಂತೋಽಪಿನವಮೋರಸಃ ಎಂದು ಮಮ್ಮಟಾಚಾರ್ಯನು ಹೇಳುವುದನ್ನು ಸರ್ವಕಾವ್ಯಮೀಮಾಂಸಕರು ಒಪ್ಪುವರು.

ಈ ಒಂಬತ್ತು ಭಾವಗಳಲ್ಲಿ ಪ್ರಬಂಧ ಪರಿಸಮಾಪ್ತಿಯ ತನಕ ನಿಂತುದು ರಸವೆನಿಸಿ ಉಳಿದವುಗಳು ಇನ್ನುಳಿದ ಮೂವತ್ತೆರಡು ಭಾವಗಳಂತೆ ರಸವನ್ನು ತಮ್ಮ ಔಚಿತ್ಯಾನುಸಾರವಾಗಿ ಪುಟಗೊಳಿಸುತ್ತ ವ್ಯಭಿಚಾರಿಗಳೆ ಆಗುತ್ತವೆ. ಇದಕ್ಕೂ ಉಳಿದ ಭಾವಗಳಿಗೂ ವಿಶೇಷವೆಂದರೆ ಈ ಒಂಬತ್ತು ರಸವಾಗುವುವು. ಇನ್ನುಳಿದವುಗಳು ಆಗಲಾರವು. ಅವು ಎಂದೆಂದಿಗೂ ವ್ಯಭಿಚಾರಿಗಳೆ. ಆದರೆ ತಾವು ರಸವೆನಿಸಲಾರದೆ ರಸಗಳ ಉತ್ಕರ್ಷಕಾರಿಗಳಷ್ಟೆ ಆಗುವುವು.

ಮೂವತ್ತೆರಡು ಭಾವಗಳು ನಮಗೆ ಸಹಜವಾದ ಇನ್ನುಳಿದ ಹರ್ಷ, ಆಲಸ್ಯ, ನಿದ್ರಾ. ಮೋಹ ಮೊದಲಾದವುಗಳು. ಇವು ಕಾವ್ಯಶಕ್ತಿಯಿಂದ ವ್ಯಕ್ತವಾಗಿ ಭಾವಗಳೆನಿಸುವುವು. ರಸೋತ್ಕರ್ಷಕಗಳಹವು.

ಈ ಒಂಬತ್ತು ಸ್ಥಾಯಿ ಭಾವಗಳಿಂದ:—

ಶೃಂಗಾರಹಾಸ್ಯ, ಕರುಣ, ರೌದ್ರವೀರ, ಭಯಾನಕಾಃ
ಬೀಭತ್ಸಾದ್ಭುತ ಸಂಜ್ಞೌಚ ಶಾಂತೋಽಪಿ ನವಮೋರಸಃ

ಒಂಬತ್ತು ಶೃಂಗಾರಾದಿರಸಗಳು ಕಾವ್ಯದಲ್ಲಿ ಪ್ರಸಿದ್ಧವಾಗಿವೆ. ರತಿಯೆಂದರೆ ಪ್ರೇಮವು— ಸ್ತ್ರೀಪುರುಷಾಲಂಬನವಾದರೆ ಶೃಂಗಾರರಸದ ಸ್ಥಾಯಿ ಭಾವವಾಗುವುದು. ಗುರುದೇವತಾದಿ ವಿಷಯವಾಗಿ ಭಾವವಾಗುವುದು. ರತಿರ್ದೇವಾದಿ ವಿಷಯಾ ವ್ಯಭಿಚಾರೀತಥಾಂಜಿತಃ ಭಾವಃ ಪ್ರೋಕ್ತ:— ಹೀಗೆ ಈ ಭಕ್ತಿಭಾವವು ಶಾಂತರಸಕ್ಕೂ ದಯಾ ಧರ್ಮಾದಿ ವೀರರಸಕ್ಕೂ ಪೋಷಕವಾಗುವುದು. ಅಂದರೆ ಉತ್ಸಾಹವೆಂಬ ಸ್ಥಾಯಿಗೆ ಪೋಷಕವಾಗುವುದು. ಉತ್ಸಾಹ ಸ್ಥಾಯಿಭಾವದ ವೀರರಸವು ದಾನದಯಾಯುದ್ಧ ಧರ್ಮವೆಂದು ನಾಲ್ಕು ವಿಧವಾಗಿದೆ ವೀರಶ್ಚತುರ್ಧಾ. ದಾನದಯಾಯುದ್ಧಧರ್ಮೈಸ್ತದುಪಾಧೇರುತ್ಸಾಹಸ್ಯ ಚತುರ್ವಿಧತ್ವಾತ್-ರಸಗಂಗಾಧರ.

ಶ್ರೀ ಹರಿದೇವನ ಕಾವ್ಯವನ್ನು ಸವಿವ ಮೊದಲು ರಸಭಾವಗಳ ತಿಳುವಳಿಕೆಯು ತಕ್ಕಮಟ್ಟಿಗೆ ಬೇಕಾದುದರಿಂದ ಅವುಗಳನ್ನು ತಿಳಿಯ ಹವಣಿಸಿದೆವು. ಇನ್ನು ಕಾವ್ಯದತ್ತ ತಿರುಗುವ. 'ರಗಳೆಗಳು' ಶರಣರ ಜೀವಿತವನ್ನು ಚಿತ್ರಿಸುತ್ತ ಶಾಂತ ರಸಮಯವಾಗಲಿ ಧರ್ಮವೀರರಸಮಯವಾಗಲಿ ಇವೆ. ಗಿರಿಜಾಕಲ್ಯಾಣವು ನವರಸಮಯವಾದುದೆಂದು ಹರಿದೇವನು ಹಾಡಿರುವನು.

> ಕಾವ್ಯಂತಾನಿದು ನವರಸ |
> ಸೇವ್ಯಂಗಿರಿಜಾಧಿನಾಥನುರುತರಕರ್ಣ |
> ಶ್ರಾವ್ಯಂ ವಸುಧಾತಳದೊಳ್ |
> ನವ್ಯಂ ಭೂತೇಶ ಭಕ್ತಜನತಾ ಭಾವ್ಯಂ ||

ಪ್ರಬಂಧ ಪರಿಸಮಾಪ್ತಿಯ ವರೆಗೆ ನಿಲ್ವುದು ಸ್ಥಾಯಿಭಾವವಾಗಿ ರಸವೆನಿಸುವುದೆಂದು ಹೇಳಿದೆನು. ಹಾಗಾದರೆ ಒಂದು ಪ್ರಬಂಧದಲ್ಲಿ ಒಂದೆ ರಸವು ಇರಬಹುದು. ಹಲವು ರಸಗಳಿರವು. ಮಹಾಭಾರತವು ಶಾಂತಿರಸಮಯವೆಂದು ಹೇಳುವರು.

ಆದರೆ ಇನ್ನು ಹಲವರು ಆಲಂಕಾರಿಕರು ( ಅಲಂಕ್ರಿಯತೇ ಇತಿ ಅಲಂಕಾರಃ ರಸಃ ಎಂಬರ್ಥದಿಂದ ರಸಮೀಮಾಂಸಕರು ) ರತ್ಯಾದಿಗಳಲ್ಲಿ ಆವುದೊಂದು ರಸವೆನ್ನುವರು. ಅಂದರೆ ಪ್ರಬಂಧದಲ್ಲಿ ರತ್ಯಾದಿಗಳು ವ್ಯಂಜಿತವಾಗಲು ಅಲ್ಲಲ್ಲಿಗೆ ಅವುಗಳೆ ರಸವೆನ್ನುವರು. ಈ ಮತವನ್ನು ರಸಗಂಗಾಧರಕಾರನು "ಕೇಚಿತ್ತು ರತ್ಯಾದ್ಯನ್ಯತಮತ್ವಂ ರಸತ್ವಮಾಹುಃ" ಎಂದು ನಿರ್ದೇಶಿಸಿ 'ತನ್ನ' ಎಂದು ತನ್ನ ಅನಭಿಮತಿಯನ್ನು ಸೂಚಿಸಿರುವನು.

ಹರಿದೇವನು ಗಿರಿಜಾಕಲ್ಯಾಣವು ನವರಸ ಸೇವ್ಯವೆಂದು ರತ್ಯಾದ್ಯನ್ಯತಮತ್ವವು ರಸತ್ವವೆಂಬ ಮತವನ್ನು ತೋರಿಸಿ ಆ ಬಳಿಕ 'ಭಕ್ತಜನತಾ ಭಾವ್ಯಂ' ಎಂದು ವಿಶೇಷಿಸುವುದರಿಂದ ಭಕ್ತಿಭಾವ ಪ್ರಕರ್ಷ ಶೃಂಗಾರರಸ ಪ್ರಧಾನವಾದುದೆಂದು ತೋರಿಸುವನು. ಒಂದೊಂದು ಆಶ್ವಾಸದ ಕೊನೆಯಲ್ಲಿ "ಪರಮಸ್ವಾಮಿ ಜಟಾಧರಂ, ಶಶಿಧರಂ ಗಂಗಾಧರಂ ಕಾಲಸಂ | ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ | ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ | ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ

ಶಿವಾವಲ್ಲಭಂ || ಎಂದು ಬರುವವೃತ್ತವು ಪ್ರಬಂಧವು ಭಕ್ತರಿಗಾಗಿ ಕರುಣಾರಸ ಮಯ ವೆಂಬುದನ್ನು ವ್ಯಕ್ತಗೊಳಿಸುತ್ತದೆ.

ನವರಸ ಸೇವ್ಯಂ; ಅನ್ನುವುದರಿಂದ ಪ್ರಬಂಧ ಪರಿಸಮಾಪ್ತಿಯ ವರೆಗೆ ನವರಸಗಳೂ ಗುಣಪ್ರಧಾನತ್ವದಿಂದ ಅಡಕವಾಗಿ ಕಾವ್ಯವನ್ನು ಪುಷ್ಟಿಗೊಳಿಸುವುವು ಎಂದು ಆಗುವುದು. ಆ ಕಾವ್ಯವು ಕರುಣರಸಮಯವೆಂದೂ ಭಕ್ತಿಭಾವಪೂರಿತವೆಂದೂ ಕವಿಯು ಆಶ್ವಾಸಾಂತ ವೃತ್ತದಲ್ಲಿ ಸೂಚಿಸಿದಂತೆ ಸಹೃದಯರಿಗೆ ಕಾವ್ಯ ವಾಚನವು ಗೋಚರಿಸುವುದು. ಆದುದರಿಂದ ಹರಿದೇವನಿಗೆ ಪ್ರಬಂಧಾಂತಸ್ಥಾಯಿಯಾದುದೆ ರಸವೆಂಬ ಮತವು ಅಂಗೀಕಾರವಿದ್ದಿತು. ಈ ವಿಷಯದಲ್ಲಿ:—

ವಿರುದ್ಧೈರ ವಿರುದ್ಧೈರ್ವಾ ಭಾವೈರ್ವಿಚ್ಛಿದ್ಯತೇನಯಃ
ಆತ್ಮಭಾವಂ ನಯತ್ಯಾಶುಸಸ್ಥಾಯಿಲವಣಾಕರ:
ಚಿರಂಚಿತ್ತೇವತಿಷ್ಠಂತೆ ಸಂಬಂಧ್ಯಂತೇನುಬಂಧಿಭಿಃ
ರಸತ್ವಂಯೇ ಪ್ರಪದ್ಯಂತೇ ಪ್ರಸಿದ್ಧಾಃ ಸ್ಥಾಯಿನೋತ್ರತೇ
ಚಿರಮಿತಿ ವ್ಯಭಿಚಾರಿವಾರಣಾಯ
ರತ್ಯಾದಯಃ ಸ್ಥಾಯಿಭಾವಾಃ ಸ್ಯುರ್ಭೂಯಿಷ್ಟ ವಿಭಾವಜಾ
ಸ್ತ್ರೋಕೈವಿಭಾವೈ ರುತ್ಪನ್ನಾಸ್ತಏವ ವ್ಯಭಿಚಾರಿಣಃ

ಇತ್ಯಾದಿ ರಸಗಂಗಾಧರವನ್ನು ನೋಡಬಹುದು. ಹಲವು ರಗಳೆಗಳಲ್ಲಿ ಧರ್ಮವೀರರಸವೂ, ಶ್ರೀಮಹಾದೇವಿಯಕ್ಕನ ರಗಳೆಯಲ್ಲಿ ಶಾಂತರಸವೂ ಪ್ರಧಾನವಾಗಿವೆ. ಪ್ರಭುದೇವರ ರಗಳೆಯಲ್ಲಿಯೂ ಶಾಂತರಸವು.

ಇಲ್ಲಿ ಶ್ರೀಮಹಾದೇವಿಯಕ್ಕನ ರಗಳೆಯನ್ನೂ ಗಿರಿಜಾಕಲ್ಯಾಣವನ್ನೂ ಕಾವ್ಯದೃಷ್ಟಿಯಿಂದ ನೋಡುವ.

ಶಾಂತರಸಕ್ಕೆ ನಿರ್ವೇದವು ಸ್ಥಾಯಿಭಾವವೆಂದು ಮಮ್ಮಟಾಚರಿಯ್ರನೂ ರಸಗಂಗಾಧರಕಾರನೂ ಹೇಳುವರು. ''ನಿರ್ವೇದಸ್ಥಾಯಿಭಾವೋಸ್ತಿ ಶಾಂತೋಪಿನವಮೋ ರಸಃ'' ಕಾವ್ಯಾವಲೋಕನದಲ್ಲಿ ನಾಗವರ್ಮಾಚಾರ್ಯನು

ಸಮಭಾವ ಪ್ರಭವಂಶಾಂ | ತಮಕ್ಕುಮಂ ತಾಸಮತ್ವಮುಂ
ವರ್ತಿಸುಗುಂ || ಸಮನಿಸಿ ಸಮ್ಯಗ್ಜ್ಞಾನಂ | ತಮುಮಂ
ರಾಗ ಮುಮನಲೆದು ತೊಲಗಿಸೆ ಮನದಿಂ ||

ಎಂದು ಸಮಭಾವದಿಂದೆ ಶಾಂತರಸವನ್ನು ಹೇಳುವನು.

ಇವು ಒಂದಕ್ಕೊಂದು ವಿರೋಧವೆಂದು ಭಾಸವಾಗುತ್ತದೆ. ಆದರೆ ರಸಗಂಗಾಧರಕಾರನು ನಿರ್ವೇದವನ್ನು ಎರಡು ವಿಧವಾಗಿ ವರ್ಣಿಸಿ ವಿರೋಧವನ್ನು ಪರಿಹರಿಸಿರುವನು. ಹೇಗಂದರೆ "ನಿತ್ಯಾನಿತ್ಯ ವಸ್ತು ವಿಚಾರ ಜನ್ಯವಿಷಯ ವಿರಾಗಾಖ್ಯೋನಿರ್ವೇದಃ" ಎಂದು ನಿತ್ಯಾನಿತ್ಯ ವಸ್ತು ವಿಚಾರದಿಂದ ಹುಟ್ಟಿದ ವಿಷಯ ವಿರಾಗವು ಒಂದು ನಿರ್ವೇದವು. ಇದೇ ಸ್ಥಾಯಿಭಾವವಾಗಲುಳ್ಳದು. ಮತ್ತೊಂದು ನಿರ್ವೇದವೆಂದರೆ " ವಿಷಯದ್ವೇಷಾಖ್ಯೋ ನಿರ್ವೇದಃ " ವಿಷಯದ್ವೇಷವು ಈ ಎರಡನೇ ನಿರ್ವೇದವು ವ್ಯಭಿಚಾರಿಯಾಗಬಹುದು, ಸ್ಥಾಯಿಯಾಗದು. ಆದುದರಿಂದ ಸ್ಥಾಯಿಭಾವವಾಗಿ ಮಮ್ಮಟಾರ್ಯನು ಹೇಳಿದ ನಿರ್ವೇದವೂ ಸಮಭಾವವೂ ಒಂದೆಯಾಗಿವೆ.

ಶ್ರೀಮಹಾದೇವಿಯಕ್ಕನ ರಗಳೆಯ ಕಥಾಗರ್ಭವೆಂದರೆ ಪರಶಿವನು ಮಹಾದೇವಿಯರ ಅವಸರವನ್ನು ನೋಡೆಂದು ಗುಪ್ತಗಣನಾಥನಿಗೆ ನಿರವಿಸಿದನು. ಗುಪ್ತಗಣೇಶ್ವರನೆಂದರೆ ಅತ್ಯಂತ ಶಿವಭಕ್ತಿ ಸಂಪನ್ನನಾದರು ಹೊರ ಗಣವೇಷದಲ್ಲಿ ಆವಭಕ್ತಿ ಚಿಹ್ನವನ್ನು ತಾಳಿದವನಲ್ಲ. ಗುಪ್ತಗಣೇಶನು ದೇವಿಯರ ಸಭೆಗೆಯ್ದಿ ಸಾಷ್ಟಾಂಗವಾಗಿ ಪೊಡಮಡುತ್ತಿರಲು ಮಹಾದೇವಿಯೆಂಬ ರುದ್ರಕನ್ನಿಕೆಗೆ ಅವನ ಅಡಿಸೋಂಕಿತು. ಆಗ ಆಕೆಯು ಕಿಡಿಕಿಡಿಯಾಗಿ ಶಿವಭಕ್ತ ಶಿರೋಮಣಿ ಯೆಂದರಿಯದೆ ಎಲೆ ಭವಿಯೆನೋಡಿ ಪೊಡಮಡು ಎಂದು ನಿರೋಧಿಸಿದಳು. ಭವಿ ಎಂಬ ಶಬ್ದವನಾಲಿಸಿ ಗುಪ್ತಗಣೇಶನು ತಳವೆಳವಾದನು. ಇದನ್ನೆಲ್ಲನೋಡಿ ಕೇಳಿ ಪರಶಿವನರ್ಧಾಂಗಿ ಮಹಾದೇವಿಯನ್ನು ಕುರಿತು ಎಲೌ ರುದ್ರಕನ್ನಿಕೆ ಗುಪ್ತಗಣೇಶನ ಭಕ್ತಿಯ, ಆಳವನ್ನರಿಯದೆ ಭವಿಯೆಂದೆಅಲ್ಲ ! ಹೊರವೇಷಕ್ಕೆ ಬಲು ಬೆಲೆಗೊಟ್ಟೆಯೈಸೆ ನೀನು ಭೂತಳದಲ್ಲಿ ಉತ್ತಮ ಶಿವಭಕ್ತರೊಡಲಲಿಹುಟ್ಟಿ ಭವಿಗರಸಿಯಾಗಿ ಶಿವಭಕ್ತರ್ಗೆ ಬೆಸಕೆಯ್ದು ಗತಿವಡೆದು ಮತ್ತೆನ್ನ ಸನ್ನಿಧಿಗೆಯ್ತುವೆ ಎಂದು ನುಡಿದಳು.

ಪರಮೇಶ್ವರಿಯ ಅಪ್ಪಣೆಯನಾಂತು ಉಮ್ಮಳಂಬಟ್ಟು ಮಹಾದೇವಿ ಮರ್ತ್ಯದಲಿ ಉಡುತಡಿ ಎಂಬ ಊರಲ್ಲಿ ಶಿವಭಕ್ತರ್ಗೆ ಪಾರ್ವತಿಯ ಪ್ರಸಾದ

ದಿಂದೊಗೆದು ನಳನಳಿಸುವ ಶಿವಭಕ್ತಿಯೆ ಬಳಿವಂತೆ ಬಳಿದು ಜವ್ವನಂಗೊಂಡಿರಲು ಆಊರ ಮನ್ನೆಯಂ ಕೌಸಿಕರಾಜನು ಮಹಾದೇವಿಯಲ್ಲಿ ಮೋಹವನಾಂತು ತಂದೆತಾಯಿಗಳಂ ತನಗಾಕೆಯನೀಯೆಂದು ಬಲಾತ್ಕರಿಸಲು ಆ ನಿರ್ಬಂಧವನ್ನು ತಪ್ಪಿಸಲೋಸುಗ ಮಹಾದೇವಿಯು ಮೂರು ತಪ್ಪುಗಳನ್ನು ಸೈರಿಸುವೆನು. ಅದರಾಚೆ ಶಿವಧರ್ಮಕ್ಕೆ ಹೊರತು ನಡೆದರೆ ನಾನು ನಿನ್ನವಳಲ್ಲೆಂದು ಮದುವೆಯಾದಳು. ಮಹಾದೇವಿಯು ಲಿಂಗಜಂಗಮಕ್ಕೆ ಬೆಸಕೆಯ್ವಲ್ಲಿ ಕೌಶಿಕನು ಶರಣರಿಗೆ ಸಮಯವಿಲ್ಲೆಂದುದೊಂದು; ಶಿವಲಿಂಗಾರ್ಚನೆಗೆ ಸಿಂಗರಿಸುವಲ್ಲಿ. ಕಳವಳದಿಂದ ಬಂದಾಲಿಂಗಿಸಿದುದೆರಡು; ಗುರುದೇವರು ಬಿಜಯಂಗೈಯ್ಯಲು ಭಯಭಕ್ತಿಯಲ್ಲಿ ಶಯ್ಯೆಯಿಂದಿದ್ದಂತೆದ್ದು ಎಣ್ಮೆಯ್ಯಿಂದೆ ಪೊಡಮಡುವಲ್ಲಿ. ನಾಚಿಕೆಗಳಿದೆಯೆಂದು ಕೌಶಿಕರಾಯನು ಬಟ್ಟೆಗಳ ಕೊಳಲೀಸಡುದು. ಮೂರು; ಎಂಬೀ ಮೂರು ತಪ್ಪುಗಳು ನೆರವೇರಲು ಅಂತೆ ದಿಗಂಬರೆಯಾಗಿ ತಲೆನವಿರುಗಳೆತನಗೆ ಮೈಮರಸಾಗಿ ಕಲ್ಯಾಣದ ಶಿವಾನುಭವ ಮಂಟಪಕೆಯ್ದಿ ಬಸವಾದಿ ಪ್ರಮಥರಿಗುಪದೇಶಿಸುತ್ತಿದ್ದ ಶ್ರೀ ಜಗದ್ಗುರುವಪ್ಪ ಅಲ್ಲಮದೇವನಿಂ ಶಿವಾವಭವ ವಡೆದು ಶ್ರೀಶೈಲಕ್ಕೈದಿ ಲಿಂಗಪೂಜಾಲೋಲೆಯಾಗಿರಲು ಕೌಶಿಕರಾಯನು ಬೆಂಬಳಿವಿಡಿದು ಶ್ರೀಪರ್ವತದ ಶಿವಭಕ್ತಿ ಸಂತತಿಗವಳನೊಡಂಬಡಿಸಿ ತನ್ನೊಡನೆ ಕಳಿಸುವುದೆಂದು ಬೇಡಿಕೊಳಲು ಅವರು ಮಹಾದೇವಿಯನೊಪ್ಪಿಸಲಾರದೆ ಆಕೆಯ ಭಕ್ತಿಯನಿಷ್ಠೆಗೆ ಬೆರಗೊಂದಿ ತಟಸ್ಥರಾದರು. ಶ್ರೀ ಮಹಾದೇವಿಯಕ್ಕನು ಭವಿಸೋಂಕಿದ ಮೆಯ್ಯನೊಲ್ಲದೆ ಮತ್ತೊಂದು ಮೈಯಲಿ ಕೈಲಾಸಕ್ಕೈದಿ ಶ್ರೀ ಪರಶಿವೆಯ ಸಭೆಯೊಳಗಾದಳು. ಎಂಬುದೀ ಕಥಾಸಾರವು.

ಪ್ರಭುಲಿಂಗಲೀಲೆಯಲ್ಲಿಯೂ ಮಹಾದೇವಿಯಕ್ಕನ ಪುರಾಣದಲ್ಲಿಯೂ ತೋರುವ ಸಂದರ್ಭಕ್ಕಿದು ಕೆಲವಂಶಗಳಲ್ಲಿ ವ್ಯತ್ಯಾಸಗೊಳ್ಳುತ್ತಲಿದೆ. ಅದು ನಮ್ಮ ಈ ಲೇಖಕ್ಕೆ ಹತ್ತಿಲ್ಲ. ಈ ಕಥೆಯನ್ನು ಹರಿದೇವನು ಏಳು ಸ್ಥಳಗಳಿಂದ ವಿಸ್ತರಿಸುವನು.

ನಿರ್ವೇದ ಸ್ಥಾಯಿಭಾವವು ಶಾಂತರಸಕ್ಕೆ ಮೂಲವು. ನಿರ್ವೇದದ ಅಭಿವ್ಯಕ್ತಿಗೆ ಅಥವಾ ವ್ಯಂಜನಕ್ಕೆ ಪುಷ್ಟಿಯಾಗುವಂತೆ ಕವಿಯು ಮಹಾದೇವಿಯಕ್ಕನ

ಬಾಲ್ಯವನ್ನೂ ಶಿವಭಕ್ತಿಯ ಕೊನರುವಿಕೆಯನ್ನೂ ಬಣ್ಣಿಸಿ ಕಾವ್ಯಶಕ್ತಿಯನ್ನು ತೋರಿಸಿರುವನು. ಕೌಶಿಕನರಮನೆಯ ಸುಖವಿಲಾಸಗಳೂ ಏರುಂಜವ್ವನವೂ ಶ್ರೀಮಹಾದೇವಿಯಕ್ಕನ ನಿರ್ವೇದವನ್ನು ಪುಟಗೊಳಿಸಿದುದಲ್ಲದೆ ತಗ್ಗಿಸಲಿಲ್ಲ. ಕೈಲಾಸದಲ್ಲಿ ಪರಮೇಶ್ವರಿಯ ಓಲಗದಲ್ಲಿ ಮೂಡಿದ ನಿರ್ವೇದಬೀಜವು ಭೂಮಿಯಲ್ಲಿ ನಾನಾ ಮಾಯಾಜಾಲದಲ್ಲಿ ಸೀಕರಿಗೊಳ್ಳಲಿಲ್ಲ. ವಿರುದ್ಧ ಭಾವಗಳಿಂದ ಕರಿಬೀಳಲಿಲ್ಲ:—

ಮಹಾದೇವಿಯಕ್ಕನ ಶಾಂತರಸಕ್ಕೆ ರಸಗಂಗಾಧರಕಾರನು ವಿವರಿಸಿದಂತೆ ವಿಷಯವಿರಾಗವು ಸ್ಥಾಯಿಯಾಗಿದೆ. ವಿರಾಗವೂ ಸರ್ವಸಮತ್ವವೂ ಒಂದಕೊಂದು ಸಮೀಪವಾಗಿ ಇಹವು. ಆದರು ಅವುಗಳಲ್ಲಿ ಅಣು ಭೇದವಿದೆ. ಕೈಲಾಸದಲ್ಲಿ ನಿತ್ಯನಿರ್ಮಲ ಸುಖಸಮುದ್ರದ ಅದ್ಭುತ ತರಂಗಗಳಲ್ಲಿ ಅಲೆದಾಡುವ ಮಹಾದೇವಿಯಕ್ಕನ ಸುಭಾಗ್ಯ ತರುವಿಗೆ ಜಗನ್ಮಾತೆಯ ಕಿನಿಸು ಸಿಡಿಯಲು ಕಳವಳಿಸಿ ಕಾತರಗೊಂಡು ತನ್ನಮುಂದೆ ಜಗನ್ಮಾತೆಯೊಡ್ಡಿದ ಭವಿತ್ವದಲ್ಲಿ ಮಹಾದೇವಿಗೆ ವಿರಾಗವು ಸಂಜನಿಸುವುದು ಸಹಜವು. ಕವಿಯು ಕಾವ್ಯದ ಪ್ರಾರಂಭದಲ್ಲಿ ಅದ್ಭುತರಸವನ್ನೆ ಸುರಿವನು, ಆರಸವು ನಿರ್ವೇದಕ್ಕೆ ಕಾರಣವಾಗುವುದರಿಂದ ವ್ಯಭಿಚಾರಿಭಾವವಾಗಿದೆ. ಅದರಂತೆ ಕೌಶಿಕನ ರತಿಯು ಮಹಾವಿರಕ್ತೆಯಲ್ಲಿ ಅನುಚಿತವಾಗಿರುವದರಂದ ಶೃಂಗಾರಾಭಾಸವಾಗಿದೆ.

"ತದಾಭಾಸಾ ಅನೌಚಿತ್ಯ ಪ್ರವರ್ತಿತಾಃ"ಎಂದು ಮಮ್ಮಟಾಚಾರ್ಯನು ರಸಾಭಾಸವನ್ನು ಲಕ್ಷಿಸಿರುವನು. ಮಹಾದೇವಿಯಕ್ಕನ ನಿರ್ವೇದವ್ಯಂಜನಕ್ಕೆ ಕೌಶಿಕನ ಅನುಚಿತರತಿಯು ಪ್ರಕರ್ಷಕವಾಗುವದರಿಂದ ಅದೂ ವ್ಯಭಿಚಾರಿಯಾಗುವದು. ವ್ಯಭಿಚಾರ ಭಾವವೆಂದರೆ ಪ್ರಬಂಧ ಸಮಾಪ್ತಿಯವರೆಗೆ ಕಾವ್ಯದಲ್ಲ ನಿಂದುನಲಿವ ಸ್ಥಾಯಿಭಾವಕ್ಕೆ ನೆರವಾಗಿ ಅಲ್ಲಲ್ಲಿತಕ್ಕಂತೆ ಅದನ್ನು ಎಬ್ಬಿಸಿ ತೊಳಗಿಸುವ ಭಾವವು, ಇಂತಹ ಭಾವಗಳು ಕಾವ್ಯದ ಕೊನೆಯವರೆಗೆ ಒಂದೆ ತೆರನಾಗಿರದೆ ಹಲದೆರವಾಗಿರುವುವು. ಒಬ್ಬ ರಾಜನಿಗೆ ನಿಯೋಗಿಗಳು ಆಯಾಕಾರ್ಯಕ್ಕನುಗುಣವಾಗಿರುವಂತೆ ಭಾವಗಳು ಹಲವಾಗಿ ತಮ್ಮಕಾರ್ಯಗಳನ್ನು ಕೊನೆಗಾಣಿಸುವುವು.

ಮಹಾದೇವಿಯಕ್ಕನ ರಗಳೆಯ ಒಂದನೆಯ ಸ್ಥಲದ ವಿಸ್ಮಯ ವ್ಯಭಿಚಾರಿಭಾವದ ವ್ಯಂಜನವನ್ನು ನೋಡಿರಿ.

ಶ್ರೀಸಕಲದೇವರೊಲಿದಿಪ್ಪಿಪ್ಪ ರಜತಗಿರಿ
ವಾಸವಂ ಮನುಮುನಿಗಳಾದರಿಪ ರಜತಗಿರಿ
ಅಣಿಮಾದಿಗುಣದಗಲದೊಪ್ಪಿರ್ಪ ರಜತಗಿರಿ
ಸಸಿಗೆ ಬೆಳದಿಂಗಳಂ ಕಡನೀವ ರಜತಗಿರಿ
ದೆಸೆಗೆ ಪುಣ್ಯದ ಬೆಳಗನಳವಡಿಪರಜತಗಿರಿ
ಭಸಿತದ ಬೆಳಗಸೆಳೆದುಕೊಳುತಿರ್ಪ ರಜತಗಿರಿ
ಅಸಮನಯನನ ಸುಖಸ್ಥಲವಾದ ರಜತಗಿರಿ

ಇಂತೊಪ್ಪುವ ರಜತಗಿರಿಯಲ್ಲಿ—

ಆಗಿರಿಯ ಮೇಗಣ ಸಭಾಭವನಮಧ್ಯದೊಳು
ನಾಗಭೂಷಣನೊಪ್ಪುತಿರ್ದನತಿಚೋದ್ಯದೊಳು
ಎಡಬಲದೊಳಿಡಿದಿರ್ದ ದೇವಗಣ ತತಿಯೊಳಗೆ
ಜಡಜನಾಭಂ ಜಡಜಭವನಮರತತಿಯೊಳಗೆ
ಕಿನ್ನರರ ಸುರರ ಕಿಂಪುರುಷ ಪ್ರಕರದೊಳಗೆ
ಪನ್ನಗರಸಿದ್ಧವಿದ್ಯಾಧರರ ವ್ರಜದೊಳಗೆ
ಕೆಂಜೆಡೆಯ ಕಮನೀಯರೂಪನೊಪ್ಪುತ್ತಿರ್ದ
ರಂಜಿಸುವ ಚಂದ್ರಕಳೆಯುರಸನೊಪ್ಪುತ್ತಿರ್ದ

ಇಲ್ಲಿಂದ ಗುಪ್ತಗಣನಾಥನ ಬಳಿವಿಡಿದು ಜಗದಂಬೆಯ ಸಭೆಗೆ ಬನ್ನಿ—

ಬರುತಮಿರೆ ಮಾನಿನಿಯರೋಲಗಂ ತೋರಿತ್ತು
ಬರೆ ಕಂಕಣಂಗಳ ಝಣತ್ಕಾರ ಉಣ್ಮಿತ್ತು
ಪರಿಮಳದ ಭಾರದಿಂ ತಂಗಾಳಿ ತೀಡಿತ್ತು
ವರಗಣೇಶನ ಕಣ್ಗೆ ಕೌತುಕಮನರಿಪಿತ್ತು
ಪರಿವ ಬೆಳದಿಂಗಳೋ ಕಡೆಗಣ್ಣ ನೋಟವೋ
ನೆರೆವ ಶಶಿಬಿಂಬವೋ ಸಿರಿಮೊಗದ ಮೋತ್ತವೋ
ಚಕ್ರವಾಕದ ನೆರವಿಯೋ ಕುಚದ ಪಂಕ್ತಿಯೋ
ಶಕ್ರಚಾಪಂಗಳೋ ತುಡಿಗೆಗಳಕಾಂತಿಯೋ
ಸುರಕುಜದಶಾಖೆಯೋ ನಳಿತೋಳ ತೋರ್ಕೆಯೋ
ಪರಿಮಳದ ಪಸರವೋಸವಿವುಸುರತೆಕ್ಕೆಯೋ

ಸೌಕುಮಾರ್ಯದ ಸಾಲೊ ವನಿತೆಯರನೆರವಿಯೋ
ಲೌಕಿಕದ ನುಡಿಪುಗದ ಸಿಂಗರದ ಸೀಮೆಯೋ
ಎಂಬ ಸಂಶಯಮನೊಳಗೊಂಡುದಪ್ರತಿಮಸಭೆ
ಅಂಬಿಕೆಗೆ ಸಕಲಸುಖವೀವ ಸುಕುಮಾರಸಭೆ

ಈ ಸಭೆಯ ಸಿಂಗರದ ಮಣಿ ಜಗದಮ್ಮನನ್ನು ವಂದಿಸಿರಿ :—

ಹರನರ್ಧಮಂ ಸೂರೆಗೊಂಡ ಸುಧೆಯೊಪ್ಪಿದಳು
ಹರನಮನಮಂ ಮಾರುಗೊಂಡ ವಧುವೊಪ್ಪಿದಳು
ಪುಲಿದೊವಲಪುಣ್ಯಾಧಿಕನ ಕಾಂತೆಯೊಪ್ಪಿದಳು
ನಲಿದುಪೂಜಿಪಶರಣಜನಶಾಂತೆಯೊಪ್ಪಿದಳು
ನಿತ್ಯನೊಳು ನೆಲೆಗೊಂಡ ಮುತ್ತೈದೆಯೊಪ್ಪಿದಳು
ಸತ್ಯಂ ವಿರೂಪಾಕ್ಷನರ್ಧಾಂಗಿಯೊಪ್ಪಿದಳು

ಇಂತು ಮನಕೆ ವಿಸ್ಮಯಾತಿಶಯವನ್ನು ಬೀರುವ ಸಭೆಗೆ ನಡೆತಂದ ಗುಪ್ತ ಮಾಹೇಶ್ವರನ ಗುಪ್ತಭಕ್ತಿಯೆಂತೆಂದೊಡೆ

ಭಸಿತಮುಂ ಮನದೊಳಗೆ ರುದ್ರಾಕ್ಷಿ ಮನದೊಳಗೆ
ಎಸೆವ ಶಂಕರನ ವೇಷಂ ಚಿತ್ತದೊಳಗೊಳಗೆ

ಇನ್ನು ಮಹಾದೇವಿಯಕ್ಕನನ್ನು ಭವಕ್ಕೆ ನೀಡುವ ಕೋಪಭಾವವಿದು. ಗುಪ್ತ ಗಣನಾಥನು,

ಎಂದು ಭಯಭಕ್ತಿಯಿಂದಲ್ಲಿ ಮೈಯಿಕ್ಕುತಿರೆ
ಪಿಂದಿರ್ದ ಭಕ್ತೆಯಂ ತನ್ನ ಕಾಲ್ತಾಗುತಿರೆ
ದೇವಿಯರ ಪೆಸರಪ್ಪ ಮಹದೇವಿಯೆಂಬಳಂ
ಭಾವಿಸಲು ರುದ್ರಕನ್ನಿಕೆಯೆನಿಸಿ ನಿಂದಳಂ
ಕಾಲ್ತಾಗೆ ಕೋಪಿಸುತೆ ನುಡಿದಳತಿಗರ್ವದಿಂ
ಸೋಲ್ತು ಹೊರವೇಷಮುಂ ಕಾಣದಜ್ಞಾನದಿಂ
ಎಲೆ ಭವಿಯೆ ನೋಡಿ ಪೊಡಮಡು ಪೊಡಮಡೆಂದೆನಲು
ಎಲೆಲೆ ಪಿಂದಿರ್ದರಂ ಕಾಣಬಾರದೆಯೆನಲು

ಈ ಹೊರವೇಷವನ್ನು ಕಾಣದಜ್ಞಾನದ ಕೋಪವೆಂಬ ಗ್ರೀಷ್ಮಕ್ಕೆ ದೇವಿಯರ ಪ್ರಸನ್ನತ್ವರವಿಗೆ ಮಹಾದೇವಿಯರ ಮೇಲಣ ನಿರೋಧವೆಂಬ ಕಾರ್ಮೋಡ

ವೊದಗಿ ಸಿಡಿಲೊಡೆದುದು :--

ಏನವ್ವ ಮಹದೇವಿ ಭವಿಯೆಂದು ನುಡಿವರೇ
ಜ್ಞಾನನಿಧಿ ಗುಪ್ತಗಣನಾಥನಂ ಜಡಿವರೇ
ಹೊರವೇಷವಿದ್ದಲ್ಲಿ ಭಕ್ತಿದೊರಕೊಳ್ವುದೇ
ಬರಿವೇಷದೊಳು ನುಡಿಯಬಲೆಯೊಳಗೆ ಬೀಳ್ವುದೇ
ಗುಪ್ತರುಂ ಶಾಂತರುಂ ಸತ್ಯವುಳ್ಳವರುಂಟು
ಆಪ್ತರೆನ್ನವರಭವನೊಲುಮೆಯುಳ್ಳವರುಂಟು
ಇಂತೊಂದು ತೆರನೆನಲ್ಬಹುದೆ ಸದ್ಭಕ್ತರಂ
ಸಂತತವನನ್ತ ಶೀಲರ್ಭಕ್ತಿಯುಕ್ತರಂ
ಭಕ್ತರ ನಿರೋಧದಿಂದೊಂದು ಜನ್ಮಂನಿನಗೆ
ಯುಕ್ತವೆನಿಸಿತ್ತು ಸೂರ್ವರುಷ ಉರ್ವರೆಯೊಳಗೆ
ಭಕ್ತರುದರಂಬೊಕ್ಕು ನಿಜನಾಮುಮಂತಳೆದು
ಭಕ್ತನಂಭವಿಯೆಂದ ದೂಸರಿಂದಪ್ಪುದಿದು
ಭವಿಗೆ ಹೆಂಡತಿಯಾಗಿ ಭಕ್ತರ್ಗೆ ಶರಣೆಂದು
ಭವವಾರ್ಧಿಯಂದಾಂಟಿ ಶ್ರೀಗಿರಿಗೆನಡೆತಂದು
ಬಳಿಕ ಬಪ್ಪುದು ಹೋಗೆನುತ್ತ ಬೆಸಸಲ್ಕಂದು
ಕಳವಳಿಸಿ ಕೊರಗುತ್ತ ಮಹದೇವಿನೆರೆನೊಂದು
ಪಿರಿದೊಂದು ಭೀತಿಯಿಂ ಗಿರಿಜೆಯಂ ಬೀಳ್ಕೊಂಡು
ಹರನರಸಿಯಿತ್ತ ಶಾಪವನಲ್ಲಿ ಕೈಕೊಂಡು
ಬರುತಿರ್ದಳಗಜೆ ಬೆಸಸಿದ ಮಾತನಾಡುತ್ತೆ
ಬರುತಿರ್ದಳಂಬಿಕೆಯ ಚರಣಮಂನೆನೆಯುತ್ತೆ

ಅಂತು ಪಾರ್ವತಿಯ ನಿಯೋಗಂಬೆತ್ತು ಉಡುತಡಿಯ ಶಿವಭಕ್ತಶಿವಭಕ್ತೆಯರೆನಿಪ್ಪ ಪುಣ್ಯದಂಪತಿಗಳ ಗರ್ಭದೊಳ್ಬಂದು ಕಾರಣಿಕೆಯಾಗಿ ಜನಿಸಿ ಜಾತಕರ್ಮಾದಿ ಶೈವವಿಧಿ ಸಂಸ್ಕೃತೆಯಾದ ಮಹಾದೇವಿಯಕ್ಕನ ಶಿವಭಕ್ತಿಯೆ ಶೈಶವವನಾಂತಂತೆ ಬಾಲಕ್ರೀಡಾದಿಗಳಂ ದಾಂಟಿಹತ್ತುಸಂವತ್ಸರಂಗಳು ನೆರೆಯೆ "ನೇಮದ ಕಾಮಿನಿಗೆ ಭಸಿತದಭಾಮಿನಿಗೆ ರುದ್ರಾಕ್ಷಿಯ ರುದ್ರಕನ್ನಿಕೆಗೆ ತಂದೆಯುಪ್ಪ ಶಿವಭಕ್ತನಾಪುರದ ಸರ್ವಗುಣಸಂಪನ್ನರಪ್ಪ ಶೈವಾಚಾರ್ಯರಿಂ

ಗುರುಕಾರುಣ್ಯಮಂ ಮಾಡಿಸಿ ಹರುಷದಿಂ ಕೈಕೊಂಡ ಲಿಂಗಪ್ರಾಣಿಯ ಸದಾ ಸನ್ನಿಹಿತೆಯ ಭಕ್ತಿಭರಿತೆಯ ಶಿವಜ್ಞಾನಸಂಪನ್ನೆಯ ಸಾಹಿತ್ಯನಿಧಿಯ ಸಕಳ ಕಳಾಕೋವಿದೆಯಪ್ಪುಡುತಡಿಯ ಮಹಾದೇವಿಯ ತನುವಿನಬಾಲ್ಯಂ ಸಡಿಲ್ದು ಯೌವನಂ ಮೆಲ್ಲಿಮೆಲ್ಲನಾಲಿಂಗಿಸುವಲ್ಲಿ" ಬರಬರುತ್ತ ಹದಿನಾರುವರ್ಷದ ಹರೆಯವು ಮುಟ್ಟಿರಲು ; ಆ ಊರಮನ್ನೆಯನಾದ ಕೌಶಿಕರಾಜನು ವೈಹಾಳಿಗ್ಯೆದಿದಲ್ಲಿ ತನ್ನ ಮನೆಯೊಳ್ನಿಂದು ನೋಡುತ್ತಿರುವ ಶ್ರೀಮಹಾದೇವಿಯಕ್ಕನನ್ನು ನೋಡಿ ಕಾಮಬಾಣ ಪೀಡಿತನಾಗಿ,

ಮನದೊಳು ಮಹಾದೇವಿ ಕಣ್ಣೊಳು ಮಹಾದೇವಿ
ಬನದೊಳು ಮಹಾದೇವಿ ಸೋಂಕಿತು ಮಹಾದೇವಿ
ಆಗಿ ಯುರಿವರಿವ ವಿರಹದಿ ಮನಂಗುಂದುತಂ
ರಾಗವಳಿಪೊಳಸಾರ್ದು ಬಿಸುಸುಯ್ದು ಕಂದುತಂ

ಮಂತ್ರಿಗಳಂಕರೆದು ಶಿವಭಕ್ತ ಶಿವಭಕ್ತೆಯರ ಬಳಿಗಟ್ಟಲು ಅವರು ಮಹಾದೇವಿಯಕ್ಕಗಳಂ ಕೌಶಿಕಂಗಾಗಿ ಬೇಡೆ ಕುಡಲಾರದೆ ತಂದೆತಾಯಿಗಳು ಕಳವಳಿಸುತಿರಲು, ಮಂತ್ರಿಗಳು ಬಲಾತ್ಕಾರದಿಂದೊಯ್ವೆವೆಂಬಲ್ಲಿ—

ಎಂದ ಮಾತಂ ಕೇಳ್ದು ಮಹಾದೇವಿಯಂ ಕರೆದು
ತಂದೆತಾಯ್ಗಳು ನುಡಿದರತಿ ಭೀತಿಯೊಳು ನೆರೆದು
ಅರಸ ಕೌಶಿಕನೊಡನೆ ಸಮಸುಖದೊಳಿರು ಮಗಳೆ
ಪಿರಿದಪ್ಪ ಸಂಪದವ ನಿನಗೀವನೆಲೆಮಗಳೆ

ತಂದೆ ತಾಯ್ಗಳ ಬಿರುನುಡಿಯು ಕಿವಿಯ ಮರ್ಮಂಗಳಂ ಭೇದಿಸಲು ಮಹಾದೇವಿಯಕ್ಕನಲ್ಲಿ ಕೋಪದೈನ್ಯಗಳು ಮೊಳೆತು ವಿರಕ್ತಭಾವವನ್ನು ಪ್ರಕಟಿಸುವುದನು ನೋಡುವ—

ಎನೆ ಧಿಗಿಲುಭುಗಿಲೆಂದು ಕೋಪಿಸಿದಳಾಭಕ್ತೆ|
ಮನದೊಳು ಮಹೇಶ್ವರಗೆ ಮೊರೆಯಿಟ್ಟಳಾಭಕ್ತೆ
ನುಡಿದಳಿಲೆ ಭವಿಯೊಡನೆ ಬೆರಸಿರಲ್ಕಾರ್ಪೆನೆ?
ಹೃಡಪೂಜೆಯಚಲಸುಖಮಂ ಪಿಂಗಲಾರ್ಪೆನೆ?
ಆನೇಕ ಭವಿಯೇಕೆ ಭಕ್ತರೀಮಾತೇಕೆ?

ಏನೆಂದೊಡಂ ಭವಿಯನೊಲ್ಲೆ ನೀ ಮಾತೇಕೆ ?
ಹೋಗೆಲೆ ವಸಂತಕಾ ನಿನಗೆ ಸೊಲ್ವವರಿಲ್ಲ—
ನಾಗಭೂಷಣ ಭಕ್ತರಿಗೆ ಭವಿಯು ಸರಿಯಲ್ಲ
ಬೆಳಗಿಂಗೆ ಕತ್ತಲೆಯ ಕೂಟಮುಂಟೇ ಮರುಳೆ !
ತಿಳಿವಿಗಜ್ಞಾನದೊಳುಸಂಗಮುಂಟೇ ಮರುಳೆ !

ಇಂತು ಮಹಾದೇವಿಯಕ್ಕನು ಸಿಟ್ಟಿನ ಹೆಚ್ಚುಗೆಯೊಳು ಕೌಶಿಕನಂ ನಿರಾಕರಿಸೆ ಮಂತ್ರಿಗಳು ಅರಸಂಗೆ ಅಕ್ಕನ ಭಾವಮಂತಿಳುಪೆ ಅರಸನು,

ನುಡಿವನವರೊಡನೆ ಇನ್ನುಂ ನೋಡುತಿರ್ಪರೆ
ತಡವೇಕೆ ಮಹದೇವಿಯೊಳ್ನಿರಪದಿರ್ಪರೆ
ಬಲ್ಪಿಂದ ಮೆಲ್ಪಿಂದಮೆಂತಾದೊಡಂ ಪೋಗಿ
ಕಲ್ಪಕುಜ ಪಲ್ಲವಾಧರೆಯನೆನಗನುವಾಗಿ
ತನ್ನಿರೇ ಏನೆಂದಳೆಂದುದನೊಡಂಬಟ್ಟು

ಎಂದು ಬೆಸಸಲು ಮಂತ್ರಿಗಳು ಬೇರೊಂದುಗತಿಗಾಣದೆ ತಮ್ಮ ತಮ್ಮ ನಿಯೋಗಂಗಳಂ ಕಾಯಲೆಂದು ಹರಭಕ್ತನಲ್ಲಿಗೆಯ್ದು ಮಗಳನೀಯದಿರ್ದೊಡೆ ನಿಮಗರಸನಪ್ಪಣೆಯಿಂದ ತಲೆದಂಡವೆಂದರುಪೆ ದಂಪತಿಗಳಿರ್ವರು ಧರೆಗಿಳಿದು ಸೊಪ್ಪಾದ ಮುಖದಲ್ಲಿ ಕಣ್ಣೀರ್ಗಳಂತಳೆದು

ಎಲೆ ಮಗಳೆ ಮಗಳೆ ನಿನ್ನಯ ದೂಸರಿಂದೆಮಗೆ
ನೆಲಸಿತ್ತು ದುರ್ಮರಣವೇನೆಂಬೆ ವೃದ್ಧರಿಗೆ
ಹೊಸತು ನಿನ್ನಯ ಭಕ್ತಿ ತಾನೆಮಗೆ ಸಂಕಟಂ
ವಸುಧೆಯೊಳು ಭವಿಯೊಳಿಗೆ ಬಾಳರೇನುತ್ಕಟಂ
ಕಾರಿಕಾಲಮ್ಮೆ ತಾಂ ಭವಿಯೊಡನೆ ಬಾಳಳೆ ?
ಹೇರೂರ ಹೆಂಗೂಸು ಭವಿಗೆ ಸತಿಯಾಗಳೆ ?
ಎಲೆಲೆ ವೈಜಕ್ಕವ್ವೆ ಭವಿಗೆ ಪುದುವೋಗಳೆ ?
ಎಲೆಲೆ ಮಾಂಗಾಯಕ್ಕ ಪಾಂಡ್ಯನೊಡಗೂಡಳೆ ?

ಎಂದು ಅಂಗಲಾಚಲು ಅಕ್ಕನಿಗೆ ಎರಡು ಕರ್ತವ್ಯಗಳೊದಗಿಪುವು. ಒಂದನೆಯದು ಭವಿಯ ಪರಿಹಾರ; ತನ್ನಿಂದ ಶಿವಭಕ್ತರಿಗೆ ಸಂಕಟವಾಗಲೀಯದುದು ಮತ್ತೊಂದು-ಇತ್ತಂಡವಾದ ತನ್ನವೆರಡು ಕಜ್ಜಗಳಲ್ಲಿ ಅಕ್ಕನು

ಎದೆಗುಂದದೆ ಉತ್ಸಾಹಭಾವವನ್ನು ಹೊಂದಿ, ಹಿಂದಿನ ಮಹಾ ಶಿವಶರಣೆಯ್ರ ಕನ್ನು ತನಗೆ ಹೋಲಿಸದಿರೆಂದು ತಂದೆ ತಾಯ್ಗಳಿಗೆ ತಿಳುಪಿ—

ಪಿರಿಯಪುರಾತನರನೆನಗೆ ಸಮಗಟ್ಟುವರೆ ?
ಪರಮ ಶೈವಾಂಬುರಾಶಿಗಳನಿಂತೆಣಿಸುವರೆ ?
ಆ ಮಾತದಂತಿರ್ಕೆ ನಿಮ್ಮಯ ನಿರೋಧಮಂ
ಏಮಾತು ತೀರ್ಚುವೆಂಭಕ್ತರಪರಾಧಮಂ
ಏನಾಗಿಯಾದೊಡಂ ಭಕ್ತರಂ ರಕ್ಷಿಪುದು.
ನಾನಾ ವಿಧಂ ಬಂದು ಶರಣರಂ ಸಲಹುವುದು,
ಎಂದುಂಟು ಸತ್ಯಂ ಪುರಾತನರ ವಚನವಿದು.
ಇಂದು ನಿಮಗುಮ್ಮಳಂ ಬೇಡವಿದ ನಂಬುವುದು.
ಎಂದು ತಾಯ್ತಂದೆಗಳನಳ್ಕರಿಂ ಸಂತಯಿಸಿ.
ಮುಂದಿರ್ಪ ಮಂತ್ರಿಗಳ ನೀಕ್ಷಿಸುತಬೋಳಯಿಸಿ
ನೀವೆಂದುದಂಮಾಳ್ಪೆನಂತದಕ್ಕೆರಡಿಲ್ಲ
ನೀವೆನ್ನ ಮನದೊಳಿದ್ದಂತೆ ಮಾಡುವುದೆಲ್ಲ
ಎನ್ನಿಚ್ಛೆಯೊಳು ಶಿವನ ಪೂಜೆಯೊಳು ನಲಿದಿಪ್ಪೆ
ಎನ್ನಿಚ್ಛೆಯೊಳು ಮಹೇಶ್ವರರ ಗೋಷ್ಠಿಯೊಳಿಪ್ಪೆ
ಎನ್ನಿಚ್ಛೆಯೊಳು ಗುರುವಿನಂಘ್ರಿಸೇವೆಯೊಳಿರ್ಪೆ
ಎನ್ನಿಚ್ಛೆಯೊಳು ನಿಮ್ಮ ನೃಪನ ಸಂಗದೊಳಿಪ್ಪೆ
ಇಲ್ಲಿ ಮೂರುಂ ತಪ್ಪನೇ ಸೈರಿಸುವೆನರಿದು
ಅಲ್ಲಿಂದ ಬಳಿಕ ಒಲಿದಂತಿಪ್ಪೆನಾನುಳಿದು

ಕಂದರ್ಪದರ್ಪಕ್ಕಲ್ಲ! ರಾಣಿವಾಸದ ವಿಲಾಸಕ್ಕಲ್ಲ! ಶಿವಭಕ್ತರಿಗೆ ಬಂದ ಸಂಕಟವ ದೂಡಿಸಲು ಮಹಾದೇವಿಯಕ್ಕನು ಭವಿಯ ಮದುವೆನಿಂದಳು. ಆದರೆ ಅದಕ್ಕೊಂದು ಅಳತೆಯನಿಟ್ಟಳು. ತನ್ನ ಶಿವಧರ್ಮಾಚರಣದಲ್ಲಿ ಅರಸನ ಮೂರು ತಪ್ಪುಗಳನ್ನು ಸೈರಿಸುವೆನಲ್ಲದೆ ನಾಲ್ಕನೆಯ ತಪ್ಪಿನಲ್ಲಿ ಅರಸನ ಹಂಗಿಗಳಲ್ಲ. ಇದನೊಡಂಬಡುವಲ್ಲಿ ಮಹಾದೇವಿಯಕ್ಕನ ಉತ್ಸಾಹಭಾವವು ಆಕೆಯ ನಿರ್ವೇದ ಸ್ಥಾಯಿಭಾವವನ್ನು ಬಣ್ಣವಿಡುತ್ತಿದೆ.

ಇನ್ನು ಆರನೆಯ ಸ್ಥಲವಲ್ಲಿ ಮಹಾದೇವಿಯಕ್ಕನು ಭವಿಸಂಗದಲ್ಲಿ ಎನಿತು ನಿರ್ವೇದದಿಂದಿದ್ದಳೆಂಬುದನ್ನು ನೋಡಿರಿ.

ಬಳ್ಳಿವರಿವ ಗೋಷ್ಠಿಗಡಪಾರ್ಗಿ ಭಕ್ತಿಯ ಬೀಜಂಗಳಂತಿರ್ದ ಪುರಾತನ ಗೀತಂಗಳಂ ಚಿತ್ತಭೂಮಿಯೊಳ್ ಬಿತ್ತಿ ಆನಂದಾಶ್ರುಗಳನೆರೆದು ಪುಳಕದ ಗೊಬ್ಬರಮನಿಕ್ಕಿ ಶಿವಜ್ಞಾನಶಶಿರವಿಗಳಿಂ ಬೆಳೆಯಿಸಿ ಪ್ರಸಂಗ ಕುಸುಮಮನಲರ್ಚಿಸಿ ಪರಿಣಾಮ ಫಲಮನೆಯ್ದಿ ಗೀತಕಳೆವೃಕ್ಷಫಳರಸಮಂ ಸವಿಸವಿದು ಆಗಳಾಗಿನ ಶಿವಾನುಭಾವಕ್ಕೆ ನವಗೀತಮಂಪಾಡಿ ಶರಣರಂ ನೋಡಿ ತುಷ್ಟಿಯಂನೀಡಿ ನಿಷ್ಠೆಯಿಂಕೂಡಿ ಸಂತೋಷಮಂಮಾಡಿ ಭಕ್ತಿಯಂಬೇಡಿ ಸುಖರಸದೋಳ್‌ಮೂಡಿ ಲೀಲೆಮಿಕ್ಕಾಡಿ ಭಕ್ತಿರಸದೊಳದ್ದು ಶಿವಜ್ಞಾನದೊಳೆದ್ದು ವೈರಾಗ್ಯಮಂ ತಾಳ್ದು ಮಾಯೆಯಂ ತೂಳ್ದು ಪಾಪಮಂ ಪೋಳ್ದು ಜನನಮಂ ಸೀಳ್ದು ದುರಾಸೆಯಂ ಪೂಳ್ದು ನಿತ್ಯಸುಖದೋಳ್ ಬಾಳ್ದು ನಿಶ್ಚಿಂತ ನಿವಾತ ನಿರತಿಶಯ ಪರಮಗೋಷ್ಠಿ ಸಂತುಷ್ಟ ಚಿತ್ತೆಯಾಗಿ ಮಹಾದೇವಿಯಕ್ಕನಿಪ್ಪಲ್ಲಿ. ಶೈವಸುಖ ಪ್ರಸಂಗಕ್ಕೆ ಕಂಟಕಂ ಬರ್ಪಂತೆ ಕೌಶಿಕರಾಜನ ವಿಳಾಸಿನಿ ಬರೆ ಮಹಾದೇವಿಯರ ಮನದನುರಾಗಮಿಳಿದಂತೆ ಪ್ರಭಾಕರಂ ಪಶ್ಚಿಮವಾರ್ಧಿಯೊಳಿಳಿಯೆ, ಮನದುಮ್ಮಳಂ ಕವಿದಂತೆ ತಮಂ ಕವಿಯೆ, ಶರಣರಂ ಪಿಂಗಲಾರದಂಗಲಾಚಿ ಸಂಸಾರಕ್ಕೆ ಸುರುಳ್ದು ಕಾಮಕ್ಕೆ ಕೆರಳ್ದು ಅಲ್ಪ ಸುಖಕ್ಕೆ ತೆರಳ್ದು ಮನವಲ್ಲದ ಮನದೊಳೆಂತಕ್ಕೆ ಮಹೇಶ್ವರರಂ ಮಹಮನೆಗೆ ಬಿಜಯಂಗೆಯ್ಯವೇಳ್ದು ಬಿನ್ನಪಂಗೈದು ಕರ್ರನೆ ಕಂದಿ ಸುರ್ರನೇ ಸುಯ್ದು ಸುಮ್ಮಾನವುಡುಗಿ ನಡೆವುತ್ತ ಅಯ್ಯ ಶಿವನೆ ಉಳಿವ ಕರೆವ ನೇಹವುಂಟೆ ಸಂಸಾರಕ್ಕಂ ನಿಮ್ಮಲ್ಲಿಗಮೆಡೆಯಾಡುವ ಭಕ್ತಿಯುಂಟೆ? ಏನಯ್ಯ ಶಿವನೆ ಏನಂ ಪೇಳ್ವೆಲಜ್ಜೆಯ ಮಾತನೆಂದು ಚೆನ್ನಮಲ್ಲಿಕಾರ್ಜುನಂಗೆ ಮೊರೆಯಿಟ್ಟು ಮುಳಿದು ಗೀತಮಂ ಪಾಡುತ್ತ ಭಂಡಾರದಲ್ಲಿಗೆಬಂದು ಆಭರಣಮಂ ಬಿಸುಟ್ಟು ಮಲಗೆಯನುಟ್ಟು ದುಮ್ಮಾನಮಂ ತೊಟ್ಟು ನಿರ್ವೇದಮಂ ಮುಂದಿಟ್ಟು ಸಿಂಗರಕ್ಕೆ ಸಲ್ಲದೆ ತಾಂಬೂಲಮನೊಲ್ಲದೆ ಪರಿಮಳದೊಳು ನಿಲ್ಲದೆ ಕೆಯ್ಗೊಟ್ಟ ಕೆಳದಿಯರಮೇಲೆ ಕರಪಲ್ಲವಮನಿಟ್ಟು ಮೆಲ್ಲನೆ ನಡೆತಪ್ಪಾಗಳು:—

ಇಂತು ದಿನದಿನದೊಳು ನಿರ್ವೇದದಿಂ ಕೌಶಿಕನೊಳು ಪುದುವಿಲ್ಲದೆ ಪುದುವಾಳ್ದು ಮಹಾದೇವಿಯಕ್ಕನಿರೆ ಆಕೆಯ ಶಿವಾನುಭವ ಸಂಗಿಯಪ್ಪ ವೈರಾಗ್ಯವು

ಕೌಶಿಕನಿಗಿತ್ತ ವಚನದ ಸೆರೆಯಿಂದ ಬಿಡುವಡೆಯುಲವನ ಮೂರನೆಯ ತಪ್ಪು ತುಂಬಿದುದೆಂತೆನೆ.

"ಭವಿಯ ಸಂಗಕ್ಕೆ ತಾರಿ ಚಿತ್ತಮಂ ತೂರಿ ಸಲುಗೆಯಂ ಮೀರಿ ನಿಷ್ಠೆಯ ನೇರಿ ಚೆನ್ನಮಲ್ಲಿಕಾರ್ಜುನಂಗೆ ದೂರಿ ಕರುಣಮಂ ತೋರಿ ಲಲ್ಲೆಯಂ ಬೀರಿ ಪಲಕಾಲಂ ಸಾರಿ ಲಿಂಗಪೂಜೆಯ ಸುಖಮಂ ಭವಿಯ ಕೂಡಿದ ದುಃಖವನ ನುಭವಿಸುತಿಪ್ಪಲ್ಲಿ,"

ಒಂದುದಿವಸ ಅಕ್ಕಗಳು ಕೌಶಿಕನ ಶಯ್ಯೆಯೊಳಗಿರಲು, "ನೀಲ್ದ ಕೆಂಜೆಡೆಗಳ ತಾಳ್ದ ಕರ್ಣಕುಂಡಲದ ಕಕ್ಷದೊಳ್ ಮೆರೆವ ಶಿವಲಿಂಗದ ಸರ್ವಾಂಗ ಭಸಿತೋದ್ಧೂಳನದ ಉಟ್ಟಧವಳಾಂಬರದ ತೊಟ್ಟ ರುದ್ರಾಕ್ಷಿಯ ಮೆಟ್ಟಿದ ಹಾವುಗೆಯ ಮುಂದಣ ಮಾಹೇಶ್ವರರ ಹಿಂದಣ ಶಿಷ್ಯವರ್ಗದ ವಿಳಾಸಂ ಪುಣ್ಯಲಾವಣ್ಯಮಂ ಪಸರಿಸೆ ಮಹಾದೇವಿಯರಾರಾಧ್ಯದೇವರ್ ಭೋಂಕನೆ ಬರೆ ಗಳಿಲನೆ ಕಂಡು ದುಕೂಲಮಂ ಮರೆದು ಭಯರಸಮನುಟ್ಟಿರ್ದ ಪರಿಯೊಳೆದ್ದು ಮಂಚದಿಂದುರವಣಿಸುತ್ತಿಳಿದು ಗುರುವಿನ ಶ್ರೀಪಾದಕ್ಕೆ ಹುಟ್ಟಿದ ಮಾರ್ಗದಿಂದಷ್ಟಾಂಗಪ್ರಣತೆಯಾದ ಮಹಾದೇವಿಯಂ ಕಂಡು ಕಣ್ಮುಚ್ಚಿಕೊಂಡು ಮಗಳೆ ದುಕೂಲಮಂ ಬಾಸಣಿದುಕೊಳ್ಳೆಂದು ಶ್ರೀಗುರು ಬೆಸಸೆ ತಗ್ಗಿ ಕುಗ್ಗಿ ಸಿಗ್ಗಾಗಿ ಬಳಿಕ್ಕರಿದು ಸಂದರಿಸಿಕೊಳ್ಪುತ್ತ ಮಂಚದ ಮೇಲಣ ಸಪುರ ವಸ್ತ್ರಮಂ ತೆಗೆಯಲೆಂದು ಕೈನೀಡೆ ಕೌಶಿಕಂಕಂಡು ಕಡುನಾಚಿ ತೆಗೆತೆಗೆ ನಿನಗೇನತ್ಯಂತಭಕ್ತೆಗೆ ಮೀರಿದ ವಿರಕ್ತೆಗೆ ಸೀರೆ ಏಕೆಂದು ಕೆಯ್ಯ ದುಕೂಲಮಂ ಸೆಳೆಯಲಾಹಾ ಮೂರುಂ ತಪ್ಪು ತೀರ್ದುದೆನ್ನಿಚ್ಛೆ ಸಾರ್ದುದು ಭವಿಸಂಗ ಒಳಸಾರ್ದುದು ವಿರಕ್ತಿ ನಿಮಿರ್ದುದು ಭಕ್ತಿ ಬೆಳೆದುದು ನಿಷ್ಠೆಉಳಿದುದು ಬರ್ದುಂಕಿದೆ ಬರ್ದುಂಕಿದೆನೆನುತ್ತಾಶಾರಹಿತೆ ಕೇಶಾಂಬರೆಯಾಗಿ ತಿರುಗಿ ಬಂದು ಧವಳಾರದೊಳಿರ್ದ ಚೆನ್ನಮಲ್ಲಿಕಾರ್ಜುನನಂ ಕರಸ್ಥಳದೊಳ್ ಬಿಜಯಂಗೆಯ್ಸಿಕೊಂಡು ನಡೆತಂದು ತಂದೆತಾಯ್ಗಳಿಗೆಪೇಳ್ದು ಗುರುಚರಣಕ್ಕೆರಗಿ ತದನುಜ್ಞೆಯಂಪಡೆದು ಬೀಳ್ಕೊಂಡು ಆಭರಣಮಂ ಕಳೆದು ಭವಭಕ್ತ್ತೆಗಿತ್ತು ಅಶನದಾಸೆಯಂವಿಷಯತೃಷ್ಣೆಯಂ ಬೆಸನದ ಬೇಗೆಯಂ ವಿಷಯದವಿಹ್ವಳತೆಯಂ ತಾಪತ್ರಯದ ಕಲ್ಪನೆಗಳಂಗೆಲೆದಿನಿನ್ನೇನಿನ್ನೇ ನಿಚ್ಚೆಯಾದುದು

ಚೆನ್ನಮಲ್ಲಿಕಾರ್ಜುನ ! ನಿನಗಂಜೆನಂಜೆನೆಂದು ಗೀತಮಂ ಪಾಡಿ ಸಪ್ತಾಂಗ ರಾಜ್ಯಮಂ ಪಾರಲೊದೆದು ಪರಿಜನಮಂ ಲೆಕ್ಕಿಸದೆ ಪುರಜನಮಂ ಕೈಕೊಳ್ಳದೆ ಭೋಗಮಂ ಸಾಗಿಸದೆ ಆಶೆಯನುಲ್ಲಂಘಿಸಿ ಅಳಿಪನುಳುಪಿ ಭಕ್ತಿಜ್ಞಾನ ವೈರಾಗ್ಯ ಶೈವಸಾಮ್ರಾಜ್ಯಭಾವಮನಾಂತು ಸಹಜಭಕ್ತೆ ಸಮ್ಯಗ್ಜ್ಞಾನೆ ಸತ್ಯ ಭಾಷಣೆ ಪರಮ ವೈರಾಗ್ಯನಿಧಿಯೆಪ್ಪುಡುತಡಿಯ ಮಹಾದೇವಿ ಪುರಮಂ ಪೊರಮಟ್ಟು ಶ್ರೀ ಪರ್ವತಾಭಿಮುಖಿಯಾದಳಂತು ಮಲ್ಲದೆಯುಂ ''

ಇಂತು ಕೌಶಿಕನರಮನೆಯಂ ತೊರೆದು ಮಹಾದೇವಿಯಕ್ಕನು ಪೊರಡುವಲ್ಲಿ ಪರಿಜನಂಗಳು ಪುರಜನಂಗಳು ತಂದೆತಾಯ್ಗಳು ಎಂಬಿವರೆಲ್ಲ ಬೆಂಬಳಿವಂದು ಬೇಡಿಂಬುದುಂ ಅವರನಾಲಿಸದೆ ವಿರತಿಯೆ ರೂಹುವಿಡಿದ ಮಹಾದೇವಿಯಕ್ಕನು ಶ್ರೀಪರ್ವತನೆಯ್ದಿ ಅಲ್ಲಿ ಶಿವಮನೋಹರ ಸ್ಥಾನಗಳಲ್ಲಿ ಶಿವಪೂಜೆಗೆಯ್ದುದನು ಬಣ್ಣಿಸಿ ಹರಿದೇವನ ಕಬ್ಬದ ಇನಿದನು ಕೇಳುವರ ಕಿವಿಯಲಿಳಿಸುವ ಗೊಡವೆಯು ಬೇಡ.

ಕೌಶಿಕನು ಭಕ್ತವೇಷದಿಂದ ಶ್ರೀಗಿರಿಗೆಯ್ದಿ ಅಲ್ಲಿಯ ಭಕ್ತರಿಗೆ ಲಂಚವನಿತ್ತು ಅಕ್ಕಗಳ ಸಂಚುವಡೆವ ಹವಣವು ಹದಗೆಟ್ಟುದನ್ನು ನಮ್ಮ ಕಾವ್ಯ ವಿಮರ್ಶೆಗೆ ಅನಿತೊಂದು ವಿಸ್ತರದಿಂದ ಬಣ್ಣಿಸುವದು ಬೇಕಿಲ್ಲ. ತಾನೆ ಮುಂದೆ ನಿಂದ ಕೌಶಿಕನನ್ನು ಅಕ್ಕಗಳು ಅತಿಗಳೆದಲ್ಲಿಗೆ ಮುಗಿಸುವ.

ಎಂದು ವೈರಾಗ್ಯದಿಂದಂ ಗೀತವಂ ಪಾಡಿ
ಮುಂದಿರ್ದ ಕೌಶಿಕನನತಿರೋಷದಿಂ ನೋಡಿ
ಎಲೆಲೆ ಕೌಶಿಕ, ಹೋಗು ನೀನೇಕೆ, ನಾನೇಕೆ
ನೆಲನರಿಯೆ ನಿನ್ನೊಡನೆ ಪುದುವಾಳ್ಪುದೆನಗೇಕೆ
ತಮವೆತ್ತ ಬೆಳಗೆತ್ತ ಶಿಖಿಯೆತ್ತ ತಂಪೆತ್ತ
ಭ್ರಮೆಯೆತ್ತ ತಿಳಿವೆತ್ತ, ಬಿಸಿಲೆತ್ತ, ಶಶಿಯೆತ್ತ
ನೀನೆತ್ತ, ನಾನೆತ್ತ ಪೋಗು ಪೋಗೆಲೆ ಮರುಳೆ
ಏನೆಂದು ಬಂದೆ ಎಲೆತರಳ ನಿನಗಾಂ ಪುರುಳೆ
ನಿನ್ನ ವೇಷಂ ನಿನಗೆ ಎನ್ನ ವೇಷಂ ಎನಗೆ
ನಿನ್ನ ಪವಣೇ ಘನಂ ಘನಭಕ್ತರುರ್ವರೆಗೆ
ನಿನ್ನ ಪುಣ್ಯದ ಬೆಳಸು ನಿನಗಿಲ್ಲ ಕೌಶಿಕನೆ

ಎನ್ನ ಭಾಗ್ಯದ ಫಲವನೀಶ್ವರಂ ತಪ್ಪುವನೆ
ಎನ್ನಂತೆ ಬಾಳ್ವುದೆನಗಿಂತಿದೆ ಘನವೆನಗೆ
ಇನ್ನೇಕೆ ನಿನ್ನ ಸಂಗಂ ಬೆಡಬೇಡೆನಗೆ

ಕೈಲಾಸದ ರುದ್ರಕನ್ನಿಕೆ ಮಹಾದೇವಿಯು ಅರಿಯದೆ ಶಿವಭಕ್ತನನತಿಕ್ರಮಿಸಿದುದಕೆ ಇನಿತೊಂದು ಕಠೋರವಾದ ಶಿಕ್ಷೆಯು ತಕ್ಕುದೊ ತಗದೊಎಂಬ ನ್ಯಾಯಚಿಕಿತ್ಸೆಯು ನಮಗಿಲ್ಲಿ ಎದುರಿಸುತ್ತಿದೆ. ಹರಿದೇವನ ಈ ಸಮಯಕ್ಕಿಂತ ಚಾಮರಸನು ಪ್ರಭುಲಿಂಗ ಲೀಲೆಯಲ್ಲಿ ಒಡ್ಡಿದಂತೆ ಅಕ್ಕನು ಶ್ರೀ ಜಗನ್ಮಾತೆಯ ಚಿದಂಶವೆ ವೈರಾಗ್ಯದಲ್ಲಿ ಅಲ್ಲಮನಿಗೆ ಸಮನಾಗಿ ಬಂದಿದ್ದಳೆಂಬುದು ಒಪ್ಪಿತ್ತಿತ್ತು; ಎಂದು ಒಮ್ಮೆ ನಮ್ಮ ಮನವು ಅತ್ತ ತೂಗುತ್ತಿದೆ. ಆದರೆ ಕೊನೆಯಲ್ಲಿ ಅಕ್ಕನ ಕಥಾಸರಣಿಯು ಹರಿದೇವನಿಂದ ಬಂದುದು ಆಕೆಯ ಐಹಿಕವನ್ನು ಹೆಚ್ಚು ಹೃದ್ಯವಾಗಿ ನಮಗಿಡುತ್ತದೆಂದು ಅನಿಸುತ್ತಿದೆ.

ಚಾಮರಸನ ವರ್ಣನವು ಅಕ್ಕಗಳ ಅಂತರಂಗವನ್ನು ಬಹಿರಂಗದ ತೊಡಕಿನಿಂದ ಬಿಡಿಸಿ ಬಣ್ಣಿಸುವಲ್ಲಿ ಚದುರುದೋರಿಸಿವರೆ ಹರಿದೇವನ ಕಬ್ಬವು ಆ ತೊಡಕಿನಲ್ಲಿ ಮಿರುಗಿ ಹೊಳೆವ ಅಕ್ಕನನ್ನು ನಮ್ಮ ಬಾಳಿಗೆ ಒಪ್ಪುವಂತೆ ಬಣ್ಣಿಸಿ ನಮಗೊಂದು ಕನ್ನಡಿಯನ್ನು ಮುಂದೆವಿಡಿದಿದೆ. ಈಗ ಅಕ್ಕನನ್ನು ಕೈಲಾಸಕ್ಕೆ ಕಳಿಸುವ—

ಭವಿಯ ಸಂಗದ ತನುವನಿದನೊಲ್ಲೆನಿದನೊಲ್ಲೆ
ನವಯವಂ ಭೀಭತ್ಸವಿದನೊಲ್ಲೆ ಸಾವೊಲ್ಲೆ
ಎನಗೆ ನಿಮ್ಮಳಕಾಯಮಂ ಕರುಣಿ ಕರುಣಿಪುದು
ಎನಗೆ ದಿವ್ಯಾವಯವಮಂ ದೇವ ಕರುಣಿಪುದು
ಎಂದು ಬಿನ್ನಯಿಸೆ ಬಂದುದು ವಿಮಾನಂ ಕೂಡೆ
ಇಂದು ಬಿಂಬದ ಬೆಳಗನೇಳಿಸುತ್ತುಂ ಕೂಡೆ
ಒಡನೆ ಬಂದರು ಗಣಾಧ್ಯಕ್ಷರಾನಂದದಿಂ
ನಡುವೆ ನಿಲುತುಂ ಪರ್ವತಾಗ್ರದೊಳು ಚೆಂದದಿಂ
ಬಂದ ಪುಷ್ಪಕದ ನಡುವಣ ದಿವ್ಯದೇಹದೊಳು
ತಂದು ಮಹದೇವಿಯಂ ಪುಗಿಸಿದರ್ ಕಾಯದೊಳು
ಮುಂದಿದ್ದ ಕಾಯವದು ಮಾಯವಾಗುತ್ತಮಿರೆ

ಮುಂದಣ ಗಣೇಶ್ವರರು ನೋಡಿ ಬೆರಗಾಗುತಿರೆ
ಪುಷ್ಪವೃಷ್ಟಿಯ ನಡುವೆ ದೇವಗಣತತಿಯೊಳಗೆ
ಪುಷ್ಪಕಂ ನೆಗೆದುದಾಕಾಶ ದುಂದುಭಿಯೊಳಗೆ
ಪರ್ವತದ ಶಿವಭಕ್ತಕುಲವೊಲಿದು ನೋಡುತಿರೆ
ಪರ್ವಿದುದು ಗಗನ ತಳಮಂ ಜಗಂ ಪೊಗಳುತಿರೆ

ಭವಿಯ ಸಂಚಿನಿಂದೆ ಚೆನ್ನಳಿದ ಮೆಯ್ಯನು ಚೆಲ್ಲಿ ಹೊಳೆವ ಮಡಿಮೆಯ್ಯ ನಾಂತು ಮಹದೇವಿಯು ಕೈಲಾಸಕಿಂತು ಹೂನಡೆಮಾಡಿನಲ್ಲಿ ನಡೆದು ನಂದೀಶ್ವರನ ಬಾಗಿಲೊಳು ವಿಮಾನದಿಂದಿಳಿದು ಪಾರ್ವತಿಯ ಮೊಗದಾವರೆಯ ದಿನಮಣಿಯಪ್ಪ ಪಂಪಾವಿರೂಪಾಕ್ಷಂಗೆ—

ಎರಗೆ ಕಂಡಭವನಾನಂವದಿಂದೇಳೆಂದು
ಕರೆಗೊರಲನತಿ ಕರುಣದಿಂದೆ ನೋಡುತ್ತಂದು
ಗಿರಿಜೆ ಬಲ್ಲಹ ನಮ್ಮ ರುದ್ರಕನ್ನಿಕೆ ಈಕೆ
ವರಗುಪ್ತಗಣನಾಥನಿಂದಿಳೆಗೆ ಪೋದಾಕೆ
ಹುಟ್ಟಿ ಶಿವಭಕ್ತರ್ಗೆ ಬೆಸಕೆಯ್ದ ಕನ್ನೆಯಂ
ನಿಷ್ಠೆ ನೆಲೆಗೊಂಡ ನಿಜಭಕ್ತಿಯೊಳಭಿನ್ನೆಯಂ
ನಿನ್ನನುಜ್ಞೆಯನಿಂತು ಹೊತ್ತು ನಡೆದವರುಂಟೆ
ನಿನ್ನ ಶಾಪವನಿಳೆಯೊಳನುಭವಿಸಿದವರುಂಟೆ
ಪದವಿಯಂ ರಾಜ್ಯಮಂ ಬಿಸುಟು ಹೋದವರುಂಟೆ
ಅದಿರದೆಯೆ ಶ್ರೀಶೈಲದೊಳಗೆ ಪೊಕ್ಕವರುಂಟೆ
ಭವಿಯ ಸಂಗದ ಶರೀರವನೊಲ್ಲದವರುಂಟೆ
ನವದಿವ್ಯದೇಹದಿಂದೈತಂದರಿಂತುಂಟೆ
ಎಂದು ಕೊಂಡಾಡುತಂ ಮುನ್ನಿನಂದದೊಳಿರಿಸಿ
ಇಂದುಮುಖಿ ಮಹದೇವಿಯಂ ಕರುಣದಿಂದಿರಿಸಿ
ರುದ್ರಕನ್ನಿಕೆಯರೊಳು ಸಲಿಸಿ ಕರುಣಾಕರಂ | ಭದ್ರಗುಣಗಣಯುಕ್ತ
ಶಶಿಕಳಾಶೇಖರಂ | ಹಂಪೆಯ ವಿರೂಪಾಕ್ಷನನ ವರತಮೊಪ್ಪಿದಂ
ಇದುವರೆಗೆ ಈ ಕಾವ್ಯದರಸವಾವುದು ?

ಅದು ಒಳಗೊಂಡ ಭಾವಗಳಾವುವು ? ಎಂಬದನ್ನು ಕಿಂಚಿತ್ತು ಚಿತ್ರೈಸಿದೆವು. ಈಗ ರಸಭಾವಗಳನ್ನು ಪೋಷಿಸುವ ನವರೀತಿಯನ್ನೂ ಪದಬಂಧವನ್ನೂ ನೋಡುವ.

ಹರಿದೇವನು ತನ್ನೆದೆಯಲ್ಲಿ ಸೆಲೆಯಿಟ್ಟ ಭಕ್ತಿರಸದಿಂದ ಕಾವ್ಯಗಳನ್ನು ಹಾಡಿದನು. ಆ ಭಕ್ತಿಯು ಅಚ್ಚಾದುದು ಆಳವಾದುದು. ಹೃದಯದ ಭಾವಕ್ಕೆ ಹವಣಪ್ಪ ಮಾತುಗಳು ಆಗಾಗಲೇ ಒದಗುವವು ಕವಿತ್ವವು. ಹರಿದೇವನ ಭಕ್ತಿಯು ಪರಮಾತ್ಮನಲ್ಲಿ ನಿರಹಂಭಾವಮಯವಾದುದರಿಂದ ಅದು ಹೊರಹೊಮ್ಮಿದ ನುಡಿಯು ಶಾಂತಪ್ರಸನ್ನವಾಗಿದೆ. ಸಮಾಸ ಬಾಹುಲ್ಯ ದಿಂದಲೂ, ಬಂಧಗಳ ಬಿಗುಹಿನಿಂಲೂ ಕ್ಲೇಶಕರವಾಗಿಲ್ಲ.

ಸಮಸಂಶ್ಲಿಷ್ಟಾರ್ಥವ್ಯ
ಕ್ತಿಮಧುರಕಾಂತಪ್ರಸನ್ನ ಸುಕುಮಾರೋಜಃ |
ಸಮಭಿ ಮತೋದಾರಾಹ್ವಯ
ಸಮಾಧಿಗಳ್ ಕೃತಿಗುಣಂಗಳೀ ರಯ್ದುಕ್ಕುಂ ||

ಎಂದು ಕಾವ್ಯಾವಲೋಕನದಲ್ಲಿ ಹೇಳಿದ ಮಧುರ ಸುಕುಮಾರ ಕಾಂತ ಉದಾರ ಪ್ರಸನ್ನ ಎಂಬೀ ಗುಣಗಳನ್ನು ಒಳಗೊಂಡು ಒಪ್ಪುತ್ತಿದೆ. ಓದುತ್ತ ಓದುತ್ತ ಅರ್ಥವು ವ್ಯಕ್ತವಾಗುವದರಿಂದ ಪ್ರಸನ್ನವಾಗಿದೆ. ನಿಷ್ಠುರಾಕ್ಷರ ಗಳಿಲ್ಲವಾದುದರಿಂದ ಸುಕುಮಾರವಾಗಿದೆ. ಸಮಗ್ರ ರಸಪೂರ್ಣವಾಗಿರುವ ದರಿಂದ ಮಧುರವಾಗಿದೆ. ಓದುವರ, ಅಲ್ಲ ಕೇಳುವರ ಚಿತ್ತಗ್ರಹಣ ಸಮರ್ಥ ವಾದುದರಿಂದ ಕಾಂತವಾಗಿದೆ. ಪ್ರಕರ್ಷ ವಿಶೇಷಣಗಳಿಂದ ಉದಾರ ವಾಗಿದೆ.

ಇಂತೀ ಗುಣಗಳಿಂದ ಒಪ್ಪುವ ಹರಿದೇವನ ರೀತಿಗನುಗುಣಂಗಳಾದ ಶಬ್ದಾರ್ಥಾಲಂಕಾರಗಳು ಹೇರಳವಾಗಿ ಕಂಗೆಸೆವುವು. ಇದನ್ನೆಲ್ಲ ಓದುಗರು ಉದಾಹರಿಸಿದ ಪದ್ಯಗಳಿಂದಲೂ ರಗಳೆಗಳನ್ನು ತಾವೆ ಓದಿಯೂ ಅನುಭವಿಸ ತಕ್ಕುದು.

ಅಕ್ಕನ ರಗಳೆಯಲ್ಲಿ ಶಿವಭಕ್ತಿಬಾಹಿರನಾದ ಪತಿಯಲ್ಲಿ ವಿರಸಮ ನಾಂತು ಲಿಂಗ ನಿಷ್ಠಳಾದ ಅಕ್ಕನ ಶಿವನಲ್ಲಿ ಸಮರಸಮಾದ ವೈರಾಗ್ಯದ ಇರು

ವನ್ನು ಕಂಡೆವು. ಪ್ರತಿಕೂಲವಾದ ಪತಿಯಲ್ಲಿಯು ತಾನಿತ್ತ ವಚನಬದ್ಧಳಾಗಿ ತನ್ನ ನಿಜಾಚರಣದಲ್ಲಿ ತಪ್ಪದ ಅಕ್ಕನ ಚರಿತ್ರವು ಶಿವಭಕ್ತರಿಗೆ ಮಾರ್ಗದರ್ಶಕವಾಗಿದೆ. ಹೊರಗಿನ ಎಡರುಗಳಿಂದಲೂ ಸಂಕಟಗಳಿಂದಲೂ ಎದೆಗುಂದದೆ ಸತ್ಪಥದಲ್ಲಿ ನಡೆವಂಗೊಂದು ಆಶ್ವಾಸನವಾಗಿದೆ.

ಇನ್ನೊಂದು ಮಾತು ಬರೆಯದೆ ಇದನ್ನು ಮುಗಿಸಲಾರೆನು. ಮಹಾದೇವಿಯಕ್ಕನು ಕೈಲಾಸವಲ್ಲಿ ರುದ್ರಕನ್ನಿಕೆಯಾಗಿ ಮುನ್ನಿನಂತಿರ್ದಳು ಎಂದು ಕವಿಯು ಪೇಳ್ವನು. ಲಿಂಗವಂತರ ಮುಕ್ತಿ ಕಲ್ಪನೆಯು ಏನೆಂಬುವನ್ನು ಈಗ ವಿಚಾರಿಸುವ. ಹರಿದೇವನ ಲಿಂಗವಂತಿಕೆಯನ್ನು ವಿವರಿಸಿ ಲಿಂಗವಂತಿಕೆಯ ಧರ್ಮತಾತ್ವಿಕಗಳನ್ನು ಎಣಿಸುವಾಗ ಈ ಜಗತ್ತು ಶಿವನನ್ನು ಕನ್ನಡಿಸಲು ಒಂದು ವಿಧಾನವೆಂದು ಹೇಳಿದೆನು. ಇದು ಹಗ್ಗದಲ್ಲಿ ತೋರಿದ ಹಾವಲ್ಲ. ಅದನ್ನು ನೋಡುವ ಕಂಣಿನ ಕಾಳಿಕೆಯು ಹರಿದು ನೋಡಿದರೆ ಇಲ್ಲಿಯೇ ಶಿವನು ಕಾಣುವನು. ಶಿವನನ್ನು ನೋಡುತ್ತಲು ಭಕ್ತನು ಶಿವಮಯನಪ್ಪನು. ಶಿವಮಯನಾಗಿ ಉಳಿವುದೇ ಮುಕ್ತಿ. ಇದೆ ರುದ್ರಕನ್ನಿಕೆಯಾಗಿ ಮಹಾದೇವಿಯಕ್ಕನಿದ್ದ ಭಾವವು. ಇದು ದ್ವೈತವಲ್ಲ; ಅಲ್ಲಿ ಮುಕ್ತನು ಶಿವಮಯನಾಗನು; ಅದ್ವೈತವಲ್ಲ—ಅಲ್ಲಿ ಮುಕ್ತನು ಉಳಿಯನು. ವಿಶಿಷ್ಟಾದ್ವೈತವಲ್ಲ; ಅಲ್ಲಿ ಶಿವನು ಮುಕ್ತಮಯನಾಗನು. ಮುಕ್ತನು ಶಿವನ ಶರೀರವಹನು. ಆವರೆ ಲಿಂಗಾಂಗ ಸಾಮರಸ್ಯವೆಂಬ ಶಿವನ ಭಕ್ತಮಯತ್ವವು ಭಕ್ತನ ಶಿವಮಯತ್ವವು.

ಇನ್ನು ಗಿರಿಜಾಕಲ್ಯಾಣದತ್ತ ತಿರುಗುವ.

---

# ಶ್ರೀ ಗಿರಿಜಾಕಲ್ಯಾಣವು



ಇದು ಶ್ರೀ ಮಹಾದೇವಿಯಕ್ಕನ ರಗಳೆಗೆ ಪ್ರತೀಪಕಲ್ಪವಾಗಿದೆ (**Antithesis**). ಅಕ್ಕಗಳ ರಗಳೆಯು ಸಾತ್ವಿಕವಾದ ಪರಮಾತ್ಮಭಕ್ತಿಯ ಬಾಳುವೆಗೆ ಎದುರಾಗುವ ಅಲ್ಲದೆ ತಡೆಯಾಗುವ ಪತಿಯೊಡತಣದ ಬಾಳುವೆಯು ಶಿವಭಕ್ತಳಾದ ಸತಿಗೆ ಏಸೊಂದು ತಾಳಲಾರದ ತಳಮಳವೆಂಬುದನ್ನು

ನಮ್ಮ ಹೃದಯಕ್ಕೆ ನಿವೇದಿಸುತ್ತಿದೆ. ಆ ಕಾವ್ಯದ ತಾತ್ಪರ್ಯವು ಅನಿತಕ್ಕೆ ಮುಗಿಯದು. ಈ ಜನಿಮದ ಗುರಿಯು ಆತ್ಮನು ತನ್ನ ಹುದುಗಿದ ಸ್ವರೂಪ ವನ್ನು ಬಿಚ್ಚಿ ತುಂಬ ಬೆಳೆದು ಶಿವತ್ವವನ್ನು ಕಾಣ್ಬುದು. ಇದು ಆಗಲು ಎಡರುಗಳೂ, ತಡೆಗಳೂ ಲೆಕ್ಕವಿಲ್ಲದೆ ಅಡ್ಡ ನಿಲ್ಲುವುವು. ಇವು ನಮ್ಮ ಬಾಳಿ ನಲ್ಲಿ ಒದಗುವ ದಿನದಿನದ ನಡೆಗಳಲ್ಲಿಯೂ ಸಂಬಂಧಗಳಲ್ಲಿಯೂ ಒಡಮೂಡಿ ತೋರುತ್ತವೆ. ಇದಕ್ಕೆ ಬೇರೆ ಉಗಮವಿಲ್ಲ ಅವಕಾಶವಿಲ್ಲ. ಇಂತಹ ಸಂದ ರ್ಭಗಳಲ್ಲಿ ದಾಂಪತ್ಯವು ಎಲ್ಲಕ್ಕೆ ಹೆಚ್ಚಿನದು, ಬಿಗಿಯಾದುದು. ಉಳಿದ ತೊಡಕುಗಳನ್ನು ಬಿಡಿಸಬಹುದು, ಕಡಿಯಬಹುದು, ಕತ್ತರಿಸಬಹುದು ಇದು ಅಂತಲ್ಲ. ನಮ್ಮ ಮಹಾದೇವಿಯಕ್ಕನ ರಗಳೆಯು ಈ ತೊಡಕನ್ನು ಮುಂದು ಮಾಡಿ ನಮ್ಮ ಬಾಳಿನಲ್ಲಿ ನಮಗೊದಗುವ ಎಡರುಗಳನ್ನು ನಾವೆಂತು ಸರಿಸ ಬೇಕು ಎಂಬ ಮಾತನ್ನು ನಮಗೆ ಕಲಿಸುತ್ತದೆ.

ಗಿರಿಜಾಕಲ್ಯಾಣದ ಕಲ್ಪವು ಇದಕ್ಕೆ ಪ್ರತೀಪವಾಗಿದೆ:– ಆತ್ಮನು ತನ್ನ ಅಂತರಂಗದ ಹುದುಗನ್ನು ಬಿಚ್ಚಲು ಬೇಕಾದ ಅನುವುಗಳು ದೊರೆಯದೆ ಕಳವಳಿಸುತ್ತಿರಬಹುದು. ಅದೊಂದು ಅನುವು ಇಲ್ಲದೆ ಮತ್ತೆ ಬೇಕಾದ ಸುಖದ ಒದವುಗಳಿರಬಹುದು. ಅಂತಹದೊಂದಿರವಿನಲ್ಲಿ ಆತ್ಮನಿಗೆ ತನ್ನ ಬಳಿಗ ಟ್ಟಿದ ಸುಖದ ಒದವುಗಳಿಂದ ಎನಿಸು ನಿರುಂಬಳವೆನಿಸದೆ (ನೆಮ್ಮದಿ ತೋರದೆ). ಕಸವಿಸಿಯೆ ತೋರುವುದು. ಆಗಲಾ ಆತ್ಮನು ತನ್ನ ಸುತ್ತಲಿನವರಿಗೆ ಎಂದಿಲ್ಲದ ಆರಿಗಿಲ್ಲದ ಐಸಿರಿಯೆಂದು ತೋರುವ ಸೌಭಾಗ್ಯವನ್ನು ಬೀಸುಟೆ ತನ್ನ ಎಡೆ(ಪರಿ ಪೂರ್ಣತ್ವ) ಗೆ ಬೇಕಾದುದನ್ನು ಕಷ್ಟಗಳನ್ನು ಅನುಭವಿಸಿಯಾದರು ಪಡೆದು ಸುಖಿಸುವನು. ಆತ್ಮನ ಬಿಚ್ಚಳದ ಪರಿಪೂರ್ಣತೆಗೆ ಈ ನೆಲದ ಬಾಳು ಒಂದು ಸಾಧನವು. ಯೋಗ್ಯದಾಂಪತ್ಯವು ಆ ಬಾಳಿಗೆ ಮೊದಲು. ಅಕ್ಕನ ರಗಳೆಯಲ್ಲಿ ಪ್ರತಿಕೂಲ ದಾಂಪತ್ಯವನ್ನು ದಾಂಟಿ ಶಿವತ್ವವನ್ನು ಸೂರೆಗೊಂಬ ಪರಿಯನ್ನು ಬಿತ್ತರಿಸಿದಂತೆ ಗಿರಿಜಾಕಲ್ಯಾಣದಲ್ಲಿ ಕವಿಯು ಅನುಕೂಲದಾಂಪತ್ಯವು ಆತ್ಮ ವಿಕಾಸಕ್ಕೆ ಎನಿತೊಂದು ಉಪಾಯವೆಂಬುದನ್ನು ಬಣ್ಣಿಸಿರುವನು.

ಇದು ಕರುಣಪ್ರಕರ್ಷದ ಶೃಂಗಾರರಸಮಯವೆಂದು ಹೇಳಿದೆನು. ಆ ರಸದ ವಿವರವನ್ನು ಅರಿವ. ಮತ್ತಿ ಭಕ್ತರಿಗಾಗಿ ಕರುಣರಸಮಯವೆಂಬು ದನ್ನು ತಿಕ್ಕಿ ನೋಡುವ:—

ಸ್ತ್ರೀಪುಂಸರತಿ ಸಮುತ್ಥ
ವ್ಯಾಪಾರಂ ತಾನದಲ್ತೆ ಶೃಂಗಾರಂಮೇ
ಳಾಪದಿನಗ ಸುನಿಲ್ಕೆಯಿಂ
ರೂಪಿತ ಸಂಭೋಗ ವಿಪ್ರಲಂಭಸಮಾಖ್ಯಂ ||

ಎಂದು ಕಾವ್ಯಾವಲೋಕನವು ನಿದರ್ಶಿಸುವುದು

ರಸದ ಉಪನಿಷತ್ತು ಔಚಿತ್ಯವಾಗಿಹುದು. 'ಅನೌಚಿತ್ಯಾದೃತೇನಾನ್ಯದ್ರಸ ಭಂಗಶ್ಯಕಾರಣಂ | ಪ್ರಸಿದ್ಧೌಚಿತ್ಯಬಂಧಸ್ತು ರಸಸ್ಯೋಪನಿಷತ್ಪರಾ || ರಸ ಗಂಗಾಧರ. ಇಲ್ಲಿ ಅಭಿನ್ನಸಾಮರಸ್ಯ ಸಿದ್ಧವಾದ ಪರದೇವತಾದ್ವಯದಲ್ಲಿ ಪರ ಸ್ಪರ ಪ್ರೇಮವು ಅತ್ಯುಚಿತ ಆಲಂಬನವಾಗಿದೆ. "ನಶಿವೇನ ವಿನಾ ಶಕ್ತಿರ್ನ ಶಕ್ತ್ಯಾರಹಿತಃ."

ಈ ಪರದೇವತಾ ಶೃಂಗಾರ ವರ್ಣನದೊಳು ಕವಿಚಾತುರ್ಯವು ಮಿತೋಚಿತ ಶಬ್ದ ಪ್ರಯೋಗಾತ್ಮಕವಾಗಿದೆ. " ತತ್ರರತ್ಯಾದೀನಾಂ ಭಯಾ ತಿರಿಕ್ತಸ್ಥಾಯಿಭಾವಾನಾಂ ಸರ್ವತ್ರ ಸಮತ್ವೇಪಿ ರತೇಃ ಸಂಭೋಗರೂಪಾಯಾ ಮನುಷ್ಯೇಷ್ವಿವ ಉತ್ತಮದೇವತಾಸು ಸ್ಫುಟೀಕೃತ ಸಕಲಾನುಭಾವ ವರ್ಣನ ಮನುಚಿತಮ್" ರಸಗಂಗಾಧರ. ಏಕೆಂದರೆ ರತ್ಯಾದಿಸ್ಥಾಯಿಭಾವಗಳನ್ನು ಮನುಷ್ಯರಂತೆ ಕವಿಯು ಉತ್ತಮ ದೇವತೆಯಲ್ಲಿ ಕಲ್ಪಿಸ ಬಲ್ಲನಾದರೂ ಸಂಭೋಗ ಶೃಂಗಾರದಲ್ಲಿ ಮನುಷ್ಯ ನಾಯಕ ನಾಯಕಿಯರಂತೆ ಸ್ಫುಟವ ರ್ಣನವು ತಕ್ಕುದಲ್ಲ. ಆಲಂಬನೋತ್ಕರ್ಷದಿಂದ ಬಂದ ರಸೋತ್ಕರ್ಷವು ಮಿತ ವರ್ಣನದಿಂದ ಕಳೆಏರಿದ ಜಾಣ್ಮೆಯು ಕಾಳಿದಾಸನಿಗಿಂತ ಹರಿದೇವನಲ್ಲಿ ಮಿಗಿ ಲಾಗಿದೆ. ಇದನ್ನಿಲ್ಲಿ ನೋಡುವ.

ಹರನುದ್ಯದ್ಗಿರಿಜಾಮನೋಹರ ಸುಖಾಂಭೋರಾಶಿ ಚಂಚತ್ಸುಧಾ | ಕಿರಣಂ ತತ್ಸುಖದಿಂದೆ ಮುಂದುದಯಿಸಿರ್ದಾಸ್ಕಂದ ನಿಂತಾರಕಾ | ಸುರನಂ ತೀರ್ಚಿ ಸಮಸ್ತ ಲೋಕಜನತಾ ಸಂತುಷ್ಟಿಯಂ ಮಾಡಿಶಂ | ಕರನೊಪ್ಪಿರ್ದನ ನೂನಸಂಪದಕರಂ ಪಂಪಾಪುರಾಧೀಶ್ವರಂ ||

ಎಂದು ಅತಿಮಿತ ವಚನದಿಂದ ಪರದೇವತಾ - ಭಕ್ತಿಯಿಂದೆ ಮುಗಿಸಿದ ಹರಿದೇವನು ಕುಮಾರ ಸಂಭವದ ಎಂಟನೆಯ ಮತ್ತು ಒಂಬತ್ತನೆಯ ಸರ್ಗಗ ಳನ್ನು ರಚಿಸಿದ ಕಾಳಿದಾಸನಿಗಿಂತ ಮಾರ್ಮಿಕನೆನ್ನುವಲ್ಲಿ ಮಾರುತ್ತರವಿರದು.

ವಿಪ್ರಲಂಭಶೃಂಗಾರದಲ್ಲಿ ಅನೌಚಿತ್ಯ ಪ್ರಸಕ್ತಿ ಇರದು. ಕುಮಾರ ಸಂಭವದ ಐದನೆಯ ಸರ್ಗದಲ್ಲಿ ಕಾಳಿದಾಸಮಹಾಕವಿಯು ಪಾರ್ವತಿಯ ವಿಪ್ರಲಂಭಶೃಂಗಾರವನ್ನು ಸರಸವಾಗಿ ವರ್ಣಿಸಿರುವನು.

ದೃಙ್ಮನಃ ಸಂಗಸಂಕಲ್ಪಾ ಜಾಗರಃ ಕೃಶತಾರತಿಃ |
ಹ್ರೀತ್ಯಾಗೋನ್ಮಾದ ಮೂರ್ಚ್ಛಾಂತಾ ಇತ್ಯಸಂಗದಶಾದಶ |

ಎಂಬ ಕಾಮಾವಸ್ಥೆಗಳು ಮನುಷ್ಯನಾಯಿಕೆಯರಿಗಿರುವಂತೆ ಮಹಾ ದೇವಿಗಾದರು ಕುಮಾರಸಂಭವದಲ್ಲಿ ಬಂದಿವೆ. ಇದು ಅನೌಚಿತ್ಯವಲ್ಲ. ಆದರು ಹರಿದೇವನು ಮಹಾದೇವಿಯ ಮಹತ್ವಕ್ಕನುಗುಣವಾಗಿ ಆಕೆಯನ್ನು ಇವಕ್ಕೀಡುಮಾಡದೆ ರಸವನ್ನು ಪೋಷಿಸುವನು. ಇದವನ ನಿರರ್ಗಲಕವಿತ್ವ ಪ್ರತಿಭೆಗೆ ನಿದರ್ಶನವಾಗಿದೆ.

ಗಿರಿಜಾಕಲ್ಯಾಣದ ಐದನೆಯ ಆಶ್ವಾಸದಲ್ಲಿ ಪಾರ್ವತಿಯು ಹಿಮವಂತ ನಿಂದ ಶಂಭುವಿರ್ದ ಹೇಮಕೂಟದ ತಾಣಕ್ಕೆ ಕಳುಹಿಸಲ್ಪಡೆದು ಆ ಹಿಮ ವಂತನಿಂದೆ ಶಿವಮೂರ್ತಿಯಂ ತೋರಿಸಲ್ಪಡೆದವಳಾಗಿ, ''ಮುಂತಿರ್ದ ವಿಪುಲ ವಿಭ್ರಮನಂ ತಪೋಮಯನಂ ವಿಲಾಸನಿಧಿಯಂ ವೈರಾಗ್ಯಯುಕ್ತನಂ ಸೌರ ಭ್ಯಸದನನಂ ಭಸಿತಕಾಯನಂ ಸೌಂದರ್ಯ ರೂಪನಂ ಜ್ಞಾನಪ್ರದೀಪನಂ ನಿಜಸುಖವಿಲಾಸನಂ ಸ್ವಯಂಪ್ರಕಾಶನಂ ಕಂಡು ಶೃಂಗಾರರಸಕ್ಕೆ ಮನಂ ದಂದು ವೈರಾಗ್ಯರಸಕ್ಕೆ ಮೈದೆಗೆದು ಸಹಚರಿಯರಪ್ಪ ಜಯೆವಿಜಯೆಗಳ್ಗೆ ನಗತನೂಜೆ ನಿರ್ವೇದದಿಂದಿಂತೆಂದಳ್.

''ಇದೆ ವಿಭುಸಾರ್ದನೊಲ್ದು ಪರವಂ ಪರವಂ ಪರವಂಚನೋಕ್ತಿ ಕೊ|ಳ್ಳದು ತಪವತ್ಯಸಾಧ್ಯವಿಷಯಂ ವಿಷಯಂ ವಿಷಯಂತ್ರದಂತೆಸು | ತ್ತಿದುದು ಪತಾಪ ವೆಯ್ದಿ ತನುವಂ ತನುವಂ ಕಪರ್ದಿನೋ | ಡದೊಡೆನಗಾದುದೆಯ್ದೆ ಕುಮುದಂ ಕುಮುದಂ ಕುಮುದಂ ಮೃಗೇಕ್ಷಣೇ ||"

ಕಾಮಾರಿಯ ಕಲ್ಯಾಣಗುಣಗಳು ಪಾರ್ವತಿಯಚಿತ್ತಾಕರ್ಷಕಗಳಾ ಗಿವೆ. ಅವು ಈಶತ್ವದ ಜ್ಞಾನವಿರಾಗತಾದಿಗಳಲ್ಲದೆ ಲೌಕಿಕನಾಯಕಸಾಧಾರಣ ಗುಣಗಳಲ್ಲ. ಪಾರ್ವತಿಯ ಚಿತ್ತವು ಸಾಮಾನ್ಯ ನಾಯಿಕೆಯ ಚಿತ್ತವಲ್ಲ. ಅನಂತಕಲ್ಯಾಣ ಗುಣನಾದ ಪರಮಶಿವನಲ್ಲಿ ನಟ್ಟಭಕ್ತಿಮಯ ಚಿತ್ತವು ತಪೋ ಮಯ ಚಿತ್ತವು.

ಶಿವನನ್ನು ವಶೀಕರಿಸಲು ತನ್ನ ಅಳವನ್ನು ಅಳೆದುನೋಡಿ ಸಂಶಯಚಕಿತಳಾಗಿ ಪಾರ್ವತಿಯು ಸಖಿಯೊಡನೆ ತೋಡಿಕೊಂಡ ಮನದಳಲು ಸಾಮಾನ್ಯ ನಾಯಿಕೆಯದಲ್ಲ. ಅದು ಕಾಮದಶಾವಸ್ಥೆಯ ಚಿತ್ತವಲ್ಲ; ಅಂತಹ ಮಾನಿನಿಗೆ ಮುಗ್ಧನಾದರೆ ಪರಮನು ಕಾಮಾರಿಯಲ್ಲ. ಆದರಿಂದಲೆ ಗಿರಿಜೆಯು-
ತಪವಿಂತಿದು ಮದ್ವಿರಹಾ | ತಪವತ್ಯಧಿಕಂ ತುಡುಂಕಬಾರದಪಾರಂ | ತಪನನ
ತೇಜಕ್ಕಂ ವಿತ್ತಿಪನೆರಿವಿಂಗಂ ವಿಶೇಷಚೋದ್ಯಮಭೇದ್ಯಂ ||

ನಿಗಮಂಗಳ್ ವಿಷ್ಣು ವಿರಿಂ| ಚಿಗಳರಿಯದ ಶಿವನನರಿವೊಡೆನ್ನಳವೇ ಪೇಳ್|
ಬಗೆವೊಡೆ ಸಾತ್ವಿಕ ಶಿವಭಕ್ತಿಗಲ್ಲಧಭವಂ ಸಮಂತು ಸಿಲ್ಕಂನಿಲ್ಕಂ ||

ಅದು ಕಾರಣದಿಂ ಭಕ್ತಿ | ಪ್ರದನ ವಿರೂಪಾಕ್ಷನಂಘ್ರಿಗಳನರ್ಚಿ
ಸುವೆಂ | ಸದಮಲ ಶಿವಸಸು ಸುಖಸಂ| ಪದದೊಳ್ ಬಳಿಕಿರ್ಪೆ ನಪ್ಪಿಶ
ರ್ವನ ತನುವಂ ||

ಎಂದು ಶಿವನನ್ನು ತಾನೊಲಿಸುವುದು ಕಾಮಿನಿಯಂತಲ್ಲ. ಕಾಮನನ್ನು ಗೆದ್ದ ರುದ್ರಕಾಮಾರಿಯನ್ನು ಸಾತ್ವಿಕದ ಪರಿಯಿಂದಲೆ ಸಮರಸ ಭಾವದಿಂದ ಕೂಡುವೆನೆನ್ನುವಳು.

. ಶಿವಶಕ್ತಿಯರ ಈ ತೆರದ ವಿಚಿತ್ರ ಲೋಕೋತ್ತರ ಸಮ್ಮೇಳವನ್ನರಿಯದ ದೇವತೆಗಳು ಕಂದರ್ಪನಿಂದೆ ತಮ್ಮ ಕಾರ್ಯವು ಕೈಗೂಡುವುದೆಂದು ಬಗೆದು ಅವರೀರ್ವರ ಸಂಯೋಗದಿಂದ ಪುಟ್ಟಿದ ಮಗನಿಂದ ತಮ್ಮ ಸಂಕಟವನ್ನು ನೂಕುವೆವೆಂದು ಪರಮನು ಪಾರ್ವತಿಗೊಲೆವಂತೆ ಪಂಚಬಾಣಗಳನ್ನು ಇಸುಯೆಂದು ಬೆಸಸಿದರು.

ಕಾಮನು ತನ್ನಿಂದಲೆ ಶಿವಶಕ್ತಿಸಂಯೋಗವೆಂದು ಬಗೆದು ಪಾರ್ವತಿಯು ಪರಮನ ಸೇವೆಯಂ ಮಾಡುವಲ್ಲಿ ತನ್ನೈದು ಬಾಣಗಳನೆಸೆಯಲು ಮದನಮರ್ದನನಾ ಮದನನನ್ನು ಕಂಣ ಬೆಂಕಿಯಿಂದ ಬೂದಿಮಾಡಿದನು. ಇದೆ, ಪಾರ್ವತಿಯ ಸಕ್ತಿಯನ್ನು ನೋಡಿ, "ಇಂತು ಪಾರ್ವತಿ ಪಲವು ಭೋಗಮಂ ರಾಗದಿಂ ರಾಜಮೌಳಿಗೆ ಪೂಜೆಯ ನೆವದಿಂ ನಿವೇದಿಸಿ ಸಂಪದವನೋಲಯಿಪ ಸಿಂಗರದಂತೆ ಧರ್ಮಮಂ ಬಳೆಯಿಸುವ ಸಂಪದದಂತೆ ಪುಣ್ಯಮಂ ಸೇವಿಸುವ ಸತ್ಕರ್ಮದಂತೆ ಭಕ್ತಿಯಂ ಬಯಸುವ ಪುಣ್ಯದಂತೆ ಜ್ಞಾನಮನೆಳಸುವ ಭಕ್ತಿ

ಯಂತೆ ಮುಕ್ತಿಯನಿಚ್ಛೈಯಿಪ ಶಿವಜ್ಞಾನದಂತೆ ಶಿವನಂಗಸಂಗಮುಂಬಯಸಿ ಮನ್ಮಥ ಮನೋರಥ ದುರ್ಲಭ ವಲ್ಲಭನಂ ನೋೞ್ಪಾಗಳ್—

ಪೊಸ ಜೆಡೆಯೊಳ್ತೊಡಂಕಿ ನೊಸಲೊಳ್ನಡೆದಾಡಿ ಕಪೋಳ ಭಾಗದೊ|
ಳ್ ಪಸರಿಸಿ ಲೋಚನಂಗಳೊಳಮರ್ಚಿತದಾಸ್ಯದೊಳೊಂದಿ ಕಂಠದೊಳ್ |
ಮುಸುಗಿ ಭುಜಾಗ್ರದೊಳ್ ತೊಳಗಿ ಪಕ್ಷದೊಳಾೞ್ದು ಕರಂಗಳೊಳ್ವಿರಾ |
ಜಿಸಿ ಪದದಲ್ಲಿ ಬೀೞ್ದುವು ಭವಾನಿಯ ಮಾನಿಯ ದೈನ್ಯದೃಷ್ಟಿಗಳ್ ||

ಇಂತು ಅಲೌಕಿಕ ಭಕ್ತಿ ಪ್ರೇಮದಿಂದ ಶಿವನನ್ನು ಒಡಗೂಡುವ ಭವಾನಿಯ ತಪೋರಹಸ್ಯವನ್ನು ಅರಿಯದ ದೇವತೆಗಳಿಂದ ವಿಜಯವೀಳಯಮಂ ಕೊಂಡುಬರುವ ದರ್ಪಕನ ದರ್ಪವ ನೋಡಿರಿ—

ಮುನಿಗಳ ಧೈರ್ಯಭೂಮಿರಜವಪ್ಪಿನೆಗಂ ಮನುಚೇತನಾದ್ರಿಭೋಂ|
ಕನೆ ಹುಡಿಯಪ್ಪಿನಂ ಯತಿಚರಿತ್ರತರಂಗಿಣಿ ಪಂಕವಪ್ಪಿನಂ ||
ಘನವಿಮಳ ವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀ |
ಶನಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರವಪ್ಪಿನಂ ||

ಇಂತಪ್ಪದರ್ಪದಿಂಬಂದು ಸಮಯವಂ ಕಾಯ್ದು ಗಿರಿಜೆ ಸಪರ್ಯೆಯನೆಸಗುವ ಸಮಯದಲ್ಲಿ ತನ್ನ ವೀರ್ಯವಂ ತೋರುವನಾಕಾಮನು

ನಡೆತಂದಳ್ ಶಿವಪೂಜೆಗೆಂದಗಜೆಪುಷ್ಪವ್ರಾತಮಂ ಕೊಂಡುಸಂ |
ಗಡದೊಳ್ ಬರ್ಪ ವಿಳಾಸಿನೀನಿಕರದಿಂ ಸೌರಭ್ಯ ಲೋಲುಪ್ತಿಯಿಂ |
ಗಡಣಂಗೊಂಡ ಶಿಲೀಮುಖಪ್ರಕರದಿಂ ಸುಯ್ಗಂಪುವಂ ಪೀದರ್ಪ
ಮುಂ |
ಗಡೆಯೊಳ್ ತೀಡುವ ದಕ್ಷಿಣಾನಿಲನಿಸೊಪ್ಪಂ ಬೆತ್ತುವಿಸ್ತಾರದೊಳ್ ||
ಬಂದು ಸವಿನವಪುಷ್ಪಚಯಮಂಡನಮಂ ಜೆಡೆಯೊಳ್ ಭುಜಂಗ
ಳೊಳ್ ||
ಸಂದ ಕರಂಗಳೊಳ್ ಶಿವನ ತೋಳೊಳುರಃಸ್ಥಲದೊಳ್ ಪದಂಗ
ಳೊಳ್ ||
ನಿಂದು ವಿಲಾಸದಿಂದಗಜೆಸಂಗಡಿಸುತ್ತೆ ಕಟಾಕ್ಷಕಾಂತಿಯೊಳ್
ಸಂದಣಿಗೊಳ್ವ ಕಾಮಕುಲ ಮಂದೊಗೆಯುತ್ತಿರೆ ನಾಡೆನೋಡಿದಳ್ ||

ವ || "ಅಂತು ನೋಟದೊಳ್ ಕೋಟಾನುಕೋಟಿ ಕುಸುಮಾಯುಧಪುರ್ಟಿತ್ತು

ತ್ತಿರೆ ಪುಷ್ಪಾಂಜಲಿಯಂಪಿಡಿದು ನಿಂದು ಕಪರ್ದಿಯ ತಪಮೆಂಬ ಶಶಿಕಾಂತಶಿಲಾ ತಲದೊಳ್ ಬೀಳ್ವ ಚಂದ್ರಕರಂಗಳಂತೆಯುಂ ಶಂಭುವಿನೆಚ್ಚರಿಕೆಯೆಂಬ ಚಂದ್ರೋದಯವಪ್ಪನ್ನೆಗಂ ಸೈರಿಸದೆ ಪರಿದು ಮುತ್ತುವ ಚಕೋರಿಗಳಂತೆಯುಂ ಹರನಕರಣಂಗಳೆಂಬ ಬಲು ನನೆಗಳಲರ್ವನ್ನಮಿರಲಾರದೆ ಪರಿದೆರಗಿ ಸುತ್ತಿ ಮುತ್ತುವ ಮಧುಕರಗಳಂತೆಯುಂ ಬೇಗವೀಗಳೆ ನಿನ್ನ ತಪಮಂ ಪಕ್ವತರಂ ಮಾಳ್ಪೆನೆಂದು ಭೀಂಕೃತಿಯಂನುಡಿದು ಪರಿದು ಪರಿದು ಬೆರಸುವ ಕುಸುಮ ಶರಂಗಳಂತೆಯುಮಿರ್ದ ತನ್ನ ಸರಸದೃಷ್ಟಿಗಳಿಂ ಹರನಂ ನೋಡುತ್ತಂ ತಪೋಭರಮಂ ಬಿಡಿಸಲಿರ್ದ ಮೃಡಾಣಿಯಂ ಕುಸುಮಕೋದಂಡಂಕಂಡು.''

ಉಳಿದ ಕಾಮಿನಿಯು ತಪಸ್ವಿಗಳ ತಪಮಂ ಕೆಡಿಸುವಳು. ಕಾಮಾರಿಯಅರ್ಧಾಂಗಿ ಶೈಲಜೆಯು ಅವನ ತಪಸ್ಸನ್ನು ಕೆಡಿಸಳು. ಅದನ್ನು ತನ್ನ ಮೇಳದಿಂದ ಪರಿಪಾಕಗೊಳಿಸುವಳು. ತಾನೂ ಪರಿಪಕ್ವವಾಗುವಳು.

ಆದುದರಿಂದಲೆ ಕಾಮನು ತನ್ನಳವಿಯಲ್ಲಿ ಸಿಕ್ಕನೆಂಬ ಭ್ರಾಂತಿಯಿಂದ ಬಾಣವಸಿಸಲು ಅಂತರ್ಧಾನವನ್ನೈದಿದ ಶಿವನನ್ನು ಕುರಿತು ಶೈಲಜೆಯು ಮುಳಿಸಿಂದೆ ಜಯೆವಿಜಯೆಗಳ್ಗೆ

ಆನಿಂತಂತರ್ಚಿಸುತ್ತಂ ಗತಿಮತಿಪತಿಯೆನ್ನಾತ್ಮತತ್ವಂ ಪರೇಶಂ | ತಾನೆಂದುತ್ಸಾಹದಿಂದಿರ್ದಚಲಪತಿಯ ಮೇನಾಖ್ಯೆಯೊಂದಳ್ಕರಂಬಿ | ಟ್ಟಾಸಂದಂಗೂಡಿ ಕಾರುಣ್ಯಮನನವರತಂ ಹಾರುತಿರ್ಪಲ್ಲಿ ಪೇಳೆಂ | ತೇನೆಂದುಗ್ರಂ ಸಮುಗ್ರಂ ರಜತಗಿರಿಗೆ ಪೋದಂ ನಿಕೃಷ್ಟಾತ್ಮನಾದಂ ||

ಅಂತುಮಲ್ಲದೆಯುಂ, ತಾನಿರ್ದಲ್ಲಿಗೆ ನಡೆತಂ | ದಾನರ್ಚಿಸೆ ಕಾಮವೈರಿ ನುಡಿಯಿಸದಂತ || ಧ್ಯಾನಕ್ಕೆ ಸಂದನದರಿಂ | ದಾನಿರ್ದಲ್ಲಿಗೆ ಸಮಂತು ತನ್ನನೆ ತರ್ಪೆಂ || ಉಗ್ರತಪೋಭರಾಕೃತಿಯನಾಂತು ಜಗಂ ಬೆರಗಾಗೆ ನಿಶ್ಚಲಾ | ಗ್ರಮು ನೋಬಳ ಪ್ರಬಳೆಯಾಗಿ ಬಿಸಿಲ್ ಮಳೆಶೀತದೊಳ್ಳಗ | ಪ್ರಾಗ್ರದೊಳಂ ಕುಜ ಪ್ರತತಿಯೊಳ್ ಸರಸೀಕುಲದೊಳ್ ವಿರಾಜಿಸು | ತ್ತುಗ್ರನನೀಶನಂ ವಿಪುಳನಿಶ್ಚಲನಂ ಛಲದಿಂದೆ ತಂದಪೆಂ ||

ಎಂದು ತನ್ನ ಅಹಾರ್ಯ ನಿಶ್ಚಯವನ್ನೂ, ಧೃತಿಯನ್ನೂ ತೋರಿಸಿರುವಳು. ಕಾಮವೈರಿ ಎಂಬ ಪದಪ್ರಯೋಗದಿಂದ ತನ್ನ ಪ್ರೇಮವು ಕಾಮವಶವಲ್ಲೆಂದು ತೋರಿಸಿರುವಳು. ತನ್ನ ಆತ್ಮತತ್ವವೆಂದೂ ಪತಿಯೆಂದೂ, ಉದ್ದೇಶಿಸಿ

ಆತ್ಮಾನಂದ ಸಾಕ್ಷಾತ್ಕಾರವೆ ದಾಂಪತ್ಯದ ಪರಮಪ್ರಯೋಜನವೆಂದು ಸೂಚಿಸಿರುವಳು. ಈ ಭಾವದಲ್ಲಿ ಶಿವನನೊಂದುಗೂಡುವ ತವಕವು ಪಾರ್ವತಿಯ ವಿಪ್ರಲಂಭವನ್ನು ತೋರಿಸುವ ಹರಿದೇವನ ರಸವತ್ಪ್ರಬಂಧಗಳಿಗೆ ವಿಷಯವಾಗಿದೆ.

ಈ ಕಾವ್ಯದಲ್ಲಿ ಅಲ್ಲಲ್ಲಿ ತೋರುವ ರಸಾಂತರಗಳೂ ಭಾವಾಂತರಗಳೂ ಈ ನಿರ್ಮಲ ಶೃಂಗಾರಕ್ಕೆ ಉತ್ಕರ್ಷಕಗಳಾಗಿವೆ. ಮೊದಲು ವೀರರಸವ ನೋಡುವ.

ವೀರರಸಕ್ಕೆ ಉತ್ಸಾಹವು ಭಾವವಾಗಿದೆ. ಗಿರಿಜಾಕಲ್ಯಾಣದಲ್ಲಿ ತಾರಕನ ವೀರವನ್ನೂ, ಮದನನ ವೀರವನ್ನೂ ಕವಿಯು ತಂದಿರುವನು. ಇವೆರಡೂ ಕಾವ್ಯದ ಶೃಂಗಾರರಸಕ್ಕೆ ಪೋಷಕವಾಗಿವೆ. ಮದನನ ವೀರರಸವು ಪಾರ್ವತೀಪರಮೇಶ್ವರರ ಆಧ್ಯಾತ್ಮಿಕ ಪ್ರೇಮದ ಲೋಕೋತ್ತರತೆಗೂ ತಾರಕನ ವೀರರಸವು ಪಾರ್ವತೀ ಪರಮೇಶ್ವರರ ಪ್ರೇಮಫಲವಾದ ಷಣ್ಮುಖನ ಅದ್ವಿತೀಯ ವೀರರಸಕ್ಕೂ ಉತ್ತೇಜಕಗಳಾಗಿಹವು. ಹಾಗು ತಾರಕನ ವೀರವು ದೇವತೆಗಳ ಭೀತಿಗೆ ಹೇತುವಾಗಿ ಮದನನ ಸ್ವಾತ್ಮಾರ್ಪಣ ನಿಶ್ಚಯಕ್ಕೆ ಕಳೆದುಂಬುತ್ತಲಿದೆ. ಸ್ವಾತ್ಮಾರ್ಪಣವು ಧರ್ಮವೀರಕ್ಕೆ ಬೀಜವು.

ತಾರಕನ ವೀರವನ್ನು ನೋಡಿರಿ. ಉರಗಾನೀಕಾಬ್ಧಿ ಮರ್ತ್ಯವ್ರಜಗಹನ ಸುರವ್ರಾತ ಧಾರಾಧರಪ್ರ | ಸ್ಫುರಿತೌರ್ವಂ ಪಾವಕಂ ಮಾರುತನೆನಿಸಿ ಕರಂ ಶೋಷಿಸುತ್ತಾವಗಂಸು | ಟ್ಟಿರು ಪುತ್ತೆಬ್ಬೆಟ್ಟಿತಂ ಪೆರ್ಚಿವನಸುರನವಂ ತಾರಕಂ ತೀವ್ರಕೋಪಾ | ಕರರೂಪಂ ಪ್ರಾಯಕಾಯಂ ಪ್ರಬಲಬಲಯುತಂ ಚಂಡಶೀಲಂ ವಿಶಾಲಂ || ಧರಣಿಯನೊಕ್ಕಲಿಕ್ಕಿದಿಗ ಧೀಶರಗಂಟಲನೊತ್ತಿ ಮೆಟ್ಟಿಭಿ | ಕರಫಣಿಲೋಕಮಂ ಹಿಳಿದು ನಾಕಮನೋಡಿಸಿ ನಿಂದವೀರರಂ | ಧುರದೊಳೆ ತತ್ತರಂದರಿದು ತಗ್ಗಿಸುತಪ್ರತಿಮಪ್ರತಾಪಭಂ | ಗುರಭುವನತ್ರಯಂ ನೆಗಳ್ದಸಕ್ರಮುಕಾರಿ ಜಿತಾರಿ ತಾರಕಂ ||

ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ ತಾರಕಾ
ಸುರನ ಪೊಡರ್ಪು ತಾರಕನ ಮತ್ತತೆ ತಾರಕನಾಜ್ಞೆ ತಾರಕಾ |
ಸುರನ ತೆರಳ್ಕೆ ತಾರಕನ ತೀವ್ರತೆ ತಾರಕನುರ್ಕು ತಾರಕಾ
ಸುರನ ನಿಮಿರ್ಕೆ ತಾರಕನ ಮೂರ್ಖತೆ ತಾರಕನುತ್ಪಥಕ್ರಮಂ ||

ಹಿತರೆನಗಿನ್ನಾರ್ಪ್ಪಚ | ಸ್ಪತಿಸೀನೆಂದಂತಿರಹಹಪುಸಿಯಲ್ಲಲ್ಲು |
ನ್ನತಸಂಗರದೊಳಗರಿಯೈ|ಹಿತರೆನ್ನ ನಿಶಾತ ಖಡ್ಗ ಮುಂನಿಡುದೋಳುಂ||
ಆನಿರ್ದುಂ ನೀನಿರ್ದುಂ | ತಾನಿರ್ದುಂ ಮೂವರಿರ್ದುಮೇನಾದುದು ಪೇಳ್ |
ನಾನಾನಿಷ್ಠುರತಾರಕ|ಸೇನಾಮುಖ ನಿಖಿಲಭುವನ ವಿಧ್ವಂಸನದೊಳ್||

ಆನು=ಬ್ರಹ್ಮ ನೀನು=ಇಂದ್ರ ತಾನು=ವಿಷ್ಣು.

## ಮನ್ಮಥನ ಮೋಹನವೀರವನ್ನು ಕಾಣಿರಿ.

ಮುನಿಚಿತ್ತಾಕರ್ಷನೀ ಬಂದನೆ ಖುಷಿವಿಮಳಾಚಾರಸಂಹಾರಿಯೀ ಬಂ| ದನೆ ಧರ್ಮಜ್ಞಾರಿಯೀ ಬಂದನೆ ಜಿತವಿಷಯವ್ರಾತವಿಧ್ವಂಸಿಯೀ ಬಂ| ದನೆ ಶಾಂತಾರಾತಿಯೀ ಬಂದನೆ ಯತಿಹರನೀ ಬಂದನೀ ಬಂದನೀ ಬಂ | ದನೆ ಯೆಂದಲ್ಲಲ್ಲಿ ಭೃಂಗೀಬಹುವಿಧಕಹಳಾನಾದವುಣ್ಮಿತ್ತದೆತ್ತಂ ||

ಮುನಿಗಳ ಧೈರ್ಯಭೂಮಿ ರಜವಪ್ಪಿನೆಗಂ ಮನುಚೇತನಾದ್ರಿ ಬೋಂ | ಕನೆ ಹುಡಿಯಪ್ಪಿನಂ ಯತಿಚರಿತ್ರತರಂಗಿಣಿಪಂಕವಪ್ಪಿನಂ | ಘನವಿಮಳವ್ರತೀಂದ್ರರತಪೋವಿಪಿನಂ ಬಯಲಪ್ಪಿನಂ ರತೀ | ಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರವಪ್ಪಿನಂ ||

## ಪರಮ ಶಿವನಂ ಕಾವನಿಸುವಲ್ಲಿ

ಇದು ಹರಿಯಜಸುರಪತಿಗಳ | ಮುದಮುಡುಗಿಸಿತೀಶರಂ ಕರಂ ಮೂರುಂಲೋ | ಕದ ಚಿತ್ತಮನಲ್ಲಾಡಿಸಿ | ತಿದೆಕೊಳ್ಳಿದೆಕೊಳ್ಳೆನುತ್ತೆ ಮನ್ಮಥನೆಚ್ಚಂ ||

## ಪರಶಿವನ ಸ್ವಾನಂದತಪೋವೀರರೌದ್ರ

ಕಾಮನಿಪ್ಪವಾಮಭಾಗಮಂ ನಿಟಲಾಕ್ಷಂನಸುಗೋಪದಿಂ ನೋಡಿದಾಗಳ್, ನೋಡದಮುನ್ನಂ ಕೋಪಂ| ನಾಡೆಯುಮೊತ್ತರಿಸಿ ನೀಳ್ದ ನಿಟಲೇಕ್ಷಣದೊಳ್ | ಮೂಡೆ ಬೆಳಬೆಳದು ಸುಳಿಸುಳಿ| ದೀಡಿರಿದೊಳಗೊಳಗೆ ಘುಳುಘುಳಿಸಿ ಮುಳಿದಾಗಳ್ ||

ಪೊಗೆದುದು ಪತ್ತಿದತ್ತು ಕಿಡಿಇಟ್ಟುದು ನಾಳ್ದೆಸೆದೋರಿದತ್ತುಬಾನ್ | ಗೊಗೆದುದು ನಿಂದುಪೆಂಬೆಳಗುಮಂ ಪರಪುತ್ತದುಧಂಧಗಿಲ್ದಗಿಲ್ಪುಗಿಲೆನು

ತಟ್ಟೆತಟ್ಟೆದುದು ಮುಟ್ಟೆತು ಮುಟ್ಟೆದತಿಂದು ತೇಗಿದ | ತ್ತಗಿಯದೆನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ ||

ಜಯಶೀಲಂ ಪ್ರಭುಪಾವಕ | ನಯನಂ ವಿಷಕಂಠನಹಿವಿಭೂಷಣಕೋ ಪೋ | ದಯನಭವಂ ಸ್ಮರಭಸ್ಮಾ | ವಯವಂತಾನಾದನ ತುಳಬಳನ ಪ್ರತಿಮಂ||

## ಕಾಮನಂ ಪರಮೇಶಂ ದಹಿಸಲ್ ರತಿಯಶೋಕಂ

ಮದಕರಿಯೆತ್ತಪೋದೆ ವರಮೂರ್ತಿಯದೆತ್ತಲದೃಶ್ಯಮಾದೆ ಮ | ಧ್ವದನ ಸರೋಜಭೃಂಗನೆಯದೆತ್ತಲಡಂಗಿದೆ ನೀನದೆತ್ತಮು | ಗ್ಗಿದೆ ಮಧುಮಿತ್ರ ಯೆತ್ತಲಯವಾದೆ ಮದೀಶ್ವರ ಯೆತ್ತಣಕ್ರಮು | ಕ್ಕೊದವಿದೆ ಯೆತ್ತಸಾರ್ದೆ ಕವಿದೆತ್ತಲಣಂ ತವಿಲಾದೆ ಮನ್ಮಥಾ ||

ಮೊರೆಯೋ ಮೊರೆಯೋ ಶಿವಘೋ | ಕರಿಗೊರಲನ ಕಣ್ಣ ದಾಳಿಕುಸು ಮಾಯುಧನಂ | ನೆರೆಮುತ್ತಿತ್ತಯ್ಯೋ ಯಿದ | ನರಿವವರಿಲ್ಲಕಟಕಟ ಕೃಪಾಳು ಗಳಿಲ್ಲ || ನೆಲನೇ ನಭವೇ ಶಿಖಿಯೇ | ಜಲವೇ ರವಿಯೇ ಶಶಾಂಕನೇ ಮಾರು ತನೇ | ಬಲವಳಿದವಳನನಾಥೆಯ | ನಲಘುತ ರಾಘೌಘೆಯಂ ಪರೀಕ್ಷಿಸಿರೆನ್ನಂ||

## ಇಂತಿದು ಕರುಣರಸಕ್ಕೆ ಉದಾಹರಣವು ಸಾಲ್ಗು.

ಅಲ್ಲಲ್ಲಿ ಶಬ್ದಶಕ್ತಿಯಿಂದಲೂ ಅರ್ಥಶಕ್ತಿಯಿಂದಲೂ ರಸಂಗಳ ವ್ಯಕ್ತಿ ಯಾಗುವುದನ್ನು ರಸಜ್ಞರು ಅರಿಯಬಹುದಲ್ಲದೆ ಬರೆಯಬಾರದು. ನನ್ನಂತ ಹನಿಂದ ಬರೆಯಲು ಆಗದು.

ಕುಮಾರಸಂಭವದ ಮೂರನೆಯ, ನಾಲ್ಕನೆಯ, ಐದನೆಯ ಸರ್ಗಗ ಳನ್ನು ಇದರೊಡನೆ ಹೊಂದಿಸಿ ಹೋಲಿಸಿ ತಾರತಮ್ಯವನ್ನು ಸಹೃದಯರು ಮನಗಾಣಲಿ.

ಮುಖ್ಯವಾದ ರಸಕ್ಕೆ ಅಲಂಕಾರಗಳು ವಿಶೇಷವನ್ನುಂಟುಮಾಳ್ಪವು. ಹರಿಹರದೇವನ ಅಲಂಕಾರಗಳು ಮನೋಹರವಾಗಿವೆ.

## ಉಪಮೆ

ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾಕರನಂತೆ ಕೂರ್ತಮು | ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ | ಲೆಯ

ಪ್ರೊಸಕಂಪಿಸಿಸಂತೆ ಮಲಯಾನಿಲಸಂತೆ ಮರಾಳನಂತೆ ಹಂ | ಪೆಯ ಹರಿದೇವನುನ್ನತಕೃತಿ ಪ್ರಸರಂಭುವನೈಕ ಪ್ರೂಜಿತಂ ||

ಹರಿಯಲ್ಲಿಗೆ ತಮಮಂಕೇ | ಸರಿಯಲ್ಲಿಗೆ ಕರಿಯುಸ ಭ್ರುಶಿಖಿಯಲ್ಲಿಗೆಕೇ| ಉರುಗಸನಟ್ಟುವ ತೆರದಿಂ | ಹರನಲ್ಲಿಗೆತಂದೆ ಕಳುಪುವರೆ ನೀನೆನ್ನಂ ||

ಕಾಮನು ತಾನು ಶಿವನ ತಪೋಭಂಗಕ್ಕೆ ಹೋಗೆನೆಂದು ವಿಷ್ಣುವಂ ಬಿನ್ನೈಸುವಲ್ಲಿಯು.

ತೊಳಗುವ ಶಾರದ ನೀರದ | ದೊಳಗಿಂ ಮಿಂಚಿಳಿವತೆರದಿ ಗಿರಿಸುತೆ ಶಶಿಮುಂ |ಪಳದಧಿದೇವತೆ ಧರಣೀ | ತಳಕ್ಕೆ ಬರ್ಪಂತೆ ಪುಷ್ಪಕದಿನಿಳಿತಂದಳ್||

ತರತರದಿಂ ಕ್ಷೀರಾಬ್ಧಿಯ | ತರಂಗದಂತೆಸೆವಶಶಿಯ ಹಾದಿಯ ಪೊಲ್ ಸೌಂ | ದರಿಯುರ ಮೋಹರಮಿನಿತೊ | ತ್ತರಿಸೆ ನಿರೀಕ್ಷಿಸುತೆ ದರ್ಪಕಂ ಬೆರಗಾದಂ ||

## ರೂಪಕಕ್ಕೆ ತದ್ಗರ್ಭಿತೋತ್ಪ್ರೇಕ್ಷೆಗೆ

ಇದು ಭೂಮಿಸ್ಥಾನದಿಂ ಮುಕ್ತಿಗೆ ನಡೆಯಿಪ ನೀಲಾಶ್ಮಸೋಪಾನ ಮಾಹಾ | ಇದು ಸಂಸಾರಾತಪಶ್ರಾಂತರೊಳತಿ ಸುಖಮೀವಂಬುದಶ್ರೇಣಿ ಮೇಣಿಂ | ತಿದು ದುಷ್ಕರ್ಮಾಬ್ಜ ಷಂಡಂಗಳ ನುರೆಕೊರಗಿಪ್ಪೊಂದು ನೀಹಾರ ಮೆಂಬಂ | ದದೆ ಹೋಮ ಸ್ತೋಮ ಧೂಮಂ ನೆಗೆದುದು ಮುನಿಗಳ್ಮಾಳ್ಪ ಮಂತ್ರಾಗ್ನಿಯಿಂದಂ ||

## ಉತ್ಪ್ರೇಕ್ಷೆಗೆ.

ಅಮೃತಮಯೂಖ ಮಂಡಲದಿನೇಳ್ತರುತಿರ್ಪ ಶಶಾಂಕಮೂರ್ತಿಯೋ| ಅಮರನದೀಪ್ರವಾಹದೊಳಗಿಂದೊಗೆತಪ್ಪ ವಿಶಾಲ ಪುಣ್ಯಮೋ | ಪ್ರಮುದಿತ ಶೈವಕೀರ್ತಿ ಬರುತಿರ್ದಪುದೋಯೆನೆ ಬಂದನಳ್ಕರಿಂ| ವಿಮಳವಿಶಾರದಂ ನವ ಶರದ್ಘನಸನ್ನಿಭನೊಲ್ದು ನಾರದಂ || ಮುನ್ನಂಪಯೋಧಿಪಡೆದೊಡೆ | ತನ್ನಂ ಶಶಿ ಪಡೆದನಾಪ ಯೋಧಿಯನೆಂಬಂ | ತುನ್ನತಿ ವೆತ್ತುದುರಾಜೋ | ತ್ಪನ್ನ ಮಭಿನ್ನಂಪ್ರಸನ್ನಮೊಪ್ಪುವ ಜೊನ್ನಂ ||

## ಅರ್ಥಾಂತರನ್ಯಾಸಕೆ

ಇಂದು ಸುಧಾಂಶುರಾಜನತಿಶೀತಳ ಶೀಲನನೂನದಾನಿಯೇಳ್ | ತಂದೊಡೆ ಕೈರವಕ್ಕೆ ಶಶಿಕಾಂತದ ಕಲ್ಗೆ ಚಕೋರಮಾಲೆಗಾ ನಂದಮುದಾಯು

ಪಂಕಜಕೆ ಚಕ್ರಯುಗಕ್ಕಸತೀಕುಲಕ್ಕೆ ಹೋ। ದಂದುಗಮಾಯ್ತು ಸರ್ವಜನ ಸಮ್ಮತನಾವನಗಾಧಿನಾಯಕಾ ||

## ಸ್ವಭಾವೋಕ್ತಿಗೆ

ಪರಿದಲೆಯಿಟ್ಟು ಪಲ್ಗಿರಿದು ಹರ್ಯನುತುರ್ಬುತ ಪುರ್ಪನೇರಿಸು | ತ್ತುರುಗಿಸಿನೋಡಿ ದಾಂಟಲನುಗೆಯ್ಯುತೆ ತೂಗುತೆ ಝುಂಕಿಸುತ್ತೆಬಾ|ಯ್ದೆರ ದೊಲವುತ್ತೆ ಕೈನೆಗಪಿ ಜಾಗಿಸಿ ಕುರ್ಗುತ ಮೇಡಿಸುತ್ತೆತಾಂ | ನೆರೆನಗಿಸಿತ್ತು ತಾಪಸಕುಮಾರರ ನಲ್ಲಿಯದೊಂದು ಮರ್ಕಟಂ ||

## ಸಮಾಸೋಕ್ತಿಗೆ

ಏದಳತ್ ಕೈರವರಾಜಿ ರಾಜಬಲದಿಂ ಸಂತೋಷಮಂ ಮುಟ್ಟಿಸ। ಮ್ಮುದಮಂ ತಾವರೆಯೆತ್ತಿ ಕಟ್ಟೆತಮಮಂ ಶೀತಾಂಶುವೆಬ್ಬಟ್ಟಿಪೆ || ಚರ್ಿದ ಗುರ್ವಿಂ ವಿರಹಾಳಿಯಂ ಕುಸುಮಬಾಣಂ ಕಾಯ್ದುಬೆನ್ನಟ್ಟಿಮೆ। ಟ್ಟಿದ ನಿಂದ್ರಾ ಚಳಚೂಳಮಂ ಕಿರಣವೀಥೀಸಾಂದ್ರಮಂ ಚಂದ್ರಮಂ ||

ಇಲ್ಲಿ ಚಂದ್ರೋದಯವು ದಿಗ್ವಿಜಯ ವೃತ್ತಾಂತವನ್ನು ನೆನಪಿಗೆ ತರು ತ್ತಿದೆ:– ಉಪಮಾನ ಕಥನವೊಂದರಿ| ನುಪಮೇಯ ಮನರಿವುದದು ಸಮಾಸ ಸೋಕ್ತಿ–ಕಾವ್ಯಾವಲೋಕನ.

## ರೂಪಕಕ್ಕೆ.

ಕರಮೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ। ತ್ಕರದವಿಪತ್ತು ತಾರೆಗಳತತ್ತು ಸುಧಾಂಬುಧಿಯೊತ್ತು ಮತ್ತಮಂ || ಬರದ ಪುಳಿಂದಿತಾಳ್ದಿಸೆವ ಮೂಗಿನ ಮುತ್ತು ಮುಗುಳ್ದುನೋಡಲ। ಚ್ಚರಿಯೆನಿಸಿತ್ತು ಮೂಡ ದೆಸೆಯಿಂದೊಗೆತಪ್ಪಹಿಮಾಂಶು ಮಂಡಲಂ ||

## ಸಮುಕ್ಕೆ.

ಹರನ ಮನೋಹರಂ ಗಿರಿಜೆಯೀ ನಡೆಯೀ ನುಡಿಯೀ ವಿಲಾಸವೀ| ತರಳಕಟಾಕ್ಷವೀ ಪರಿಮಳಾಕೃತಿಯೀದರ ಹಾಸವೀಸುಖಾ| ವರಣತೆಯೀ ಸುಲ ಕ್ಷಣತೆಯೀ ಸೋಬಗೀ ಮಧುರಸ್ವಭಾವಮೀ| ಸುರುಚಿರಕಾಂತಿಯೀ ಹರೆಯ ವೀಸುಕುಮಾರತೆಯೀ ಸುಧಾ ಮಯಂ|| ಗಿರಿಜೆಯ ಸೌಂದರ್ಯಕ್ಕೆ ಹರನೆ ತಕ್ಕವನೆನ್ನುವದರಿಂದ ಗುಣನಿರೂಪಣ ಸಮಯೋಗವು.

ಗೆಡೆಗೊಂ.

ಡಸ್ಸುಗುತಮಾಗಿರೆ ಗುಣದೋಃ ।

ಷಸಿರೂಪಣದಿಂ ವಿಭಾಗಮುದು ಸಮುಯೋಗಂ ||

ಮಮ್ಮಟನಿದಕ್ಕೆ ಸಮಾಲಂಕಾರವೆನ್ನುವನು. ಇನ್ನುಳಿದ ಅರ್ಥಾಲಂಕಾರಗಳನ್ನೂ ಶಬ್ದಾಲಂಕಾರಗಳನ್ನೂ ಉದಾಹರಿಸುತ್ತ ಸಣ್ಣದೀ ನಿಂಬಂಧವನ್ನು ಬಳೆಯಿಸುವದು ಲೇಸೆನಿಸದು. ಅದರಿಂದ ಹರಿದೇವನ ರಸಸಾಗರದ ಳಾವಗಾಹ ವಿಮರ್ಶೆಗೆ ಉದಾಹರಣಗಳಿವು ಸಾಕು.

ಆಶ್ವಾಸದ ಕೊನೆಯ ಪದ್ಯದಲ್ಲಿ ಕವಿಯು ಶಿವನನ್ನು ಕಾಲಸಂಹರನೆಂದೂ ಅಜ್ಞಾನಹರನೆಂದೂ ಸೌಖ್ಯಾಕರನೆಂದೂ ಪುರತ್ರಯಹರನೆಂದೂ ಗಂಗಾಧರನೆಂದೂ ಮುಂತಾಗಿ ವಿಶೇಷಿಸುವುದರಿಂದ ಭಕ್ತರ ಅಜ್ಞಾನ ಮೃತ್ಯು ಕ್ಲೇಶಕರಗಳಾದ ಶರೀರತ್ರಯ ದುಃಖತಾಪಗಳು ಸೂಚಿತವಾಗಿ ಅವುಗಳನ್ನು ನಿವಾರಿಸಲಿಕ್ಕೆ ಶಿವಭಕ್ತಿ ಶಿವಜ್ಞಾನ ಶಿವೇತರ ವೈರಾಗ್ಯಗಳು ಕಾರಣವೆಂದು ಹೇಳಪಡೆಯುತ್ತಿದೆ. ಶಿವನು ತನ್ನ ಆ ಗುಣಗಳಿಂದ ದಿವ್ಯಮಂಗಲ ವಿಗ್ರಹನಾಗಿ ಭಕ್ತರನ್ನು ತನ್ನತ್ತಣ ಭಕ್ತಿಜ್ಞಾನಗಳಿಂದಲೂ ತನ್ನೊಬ್ಬನ ಮೇಲಣ ಅನುರಾಗದಿಂದಲೂ ಅಪಾರ ಸುಖವನ್ನು ಕೊಡಲು ಸಮರ್ಥನೆಂದು ವ್ಯಕ್ತವಾಗುತ್ತಿದೆ. ಅಜ್ಞಾನಾದಿಗಳಿಂದ ಜನಿಸುವ ದುಃಖದಿಂದ ಶಿವನ ಕಾರುಣ್ಯವಂ ಬಯುಸಲು ಮತ್ತು ಶಿವನು ಕಾರುಣ್ಯವಂ ಮಾಡಲು ಆ ಕಾರುಣ್ಯವು ಸ್ಥಾಯಿಭಾವವಾಗುತ್ತದೆ. ಶಕ್ತಿಯುಕ್ತನಾದ ಪ್ರಭುವು ಕಾರುಣ್ಯವಂ ಮಾಡಲು ಸಮರ್ಥನಾಗುವುದರಿಂದ ಗಿರಿಜಾಕಲ್ಯಾಣವು ಭಕ್ತರಭೀಷ್ಟಸಾಧನಕ್ಕೆ ಹೇತುವಾಗಿದೆ. ಎಂಬಿವೆಲ್ಲದರಿಂದ ಭಕ್ತವಿಷಯದಲ್ಲಿ ಶಿವನ ಕರುಣಾರಸ ಪ್ರಧಾನವಾಗಿದೆ.

ಗಿರಿಜಾಕಲ್ಯಾಣವು ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಒಂದು. ಈ ಲೀಲೆಗಳು ಭಕ್ತಜನೋದ್ಧರಣಾರ್ಥವಾಗಿಯೆ ಇರುವುವು. ಅದರಿಂದ ಗಿರಿಜಾಕಲ್ಯಾಣವು ಕೊನೆಯಲ್ಲಿ ಕರುಣಾರಸಪ್ರಧಾನವು. ಮಹಾದೇವಿಯಕ್ಕನ ರಗಳೆಯಲ್ಲಿ ಶಿವಭಕ್ತಿರಹಿತನಿಂಗ ಜುಗುಪ್ಸೆಯುಂಟಾಗುವಂತೆ ಗಿರಿಜಾಕಲ್ಯಾಣದಲ್ಲಿ ಶಿವನಲ್ಲಿ ಆತ್ಮ ರತಿಯಾಗುವುದರಿಂದ ಇದು ಆ ರಗಳೆಗೆ ಪ್ರತೀಪಕಲ್ಪವು (Antithesis) ಆಗಿಹುದು.

ಇದುವರೆಗಿನ ವಿಮರ್ಶದಿಂದ ಹರಿವೇವನ ಕವಿತೆಯಲ್ಲಿಯ ಗುಣವನ್ನು ಸಹೃದಯರು ತಿಳಿಯಬಲ್ಲರು. ಗುಣವೆಂದರೆ ಕಾವ್ಯರಸವನ್ನು ಉತ್ಕರ್ಷಗೊಳಿಸುವ ಧರ್ಮವು. ಶೌರ್ಯಾದಿಗಳು ಆತ್ಮನ ಉತ್ಕರ್ಷವನ್ನುಂಟುಮಾಡುವ ಧರ್ಮಗಳಾಗಿರುವಂತೆ ಶೃಂಗಾರಾದಿ ರಸಗಳನ್ನು ಉತ್ಕರ್ಷಕ್ಕೊದವಿಸುವ ರಸಧರ್ಮಗಳು ಗುಣಗಳು.

ಗುಣಗಳು ರಸಧರ್ಮಗಳೆಂದು ಮಮ್ಮಟಾಚಾರ್ಯನ ಮತವು. ಇನ್ನು ಕೆಲಬರು ಆಲಂಕಾರಿಕರು ಅವು ಕಾವ್ಯದಲ್ಲಿ ಪ್ರಯೋಗವಾದ ವರ್ಣಗಳ ಧರ್ಮಗಳೆನ್ನುವರು. ರಸದಲ್ಲಿಯ ಮಾಧುರ್ಯಾದಿಗಳು, ಆತ್ಮನ ಶೌರ್ಯಾದಿಯು ಆಕಾರದಿಂದ ವ್ಯಕ್ತವಾಗುವಂತೆ, ವರ್ಣಗಳಿಂದ ವ್ಯಕ್ತವಾಗುತ್ತವೆ. ಆದರಿಂದ ವರ್ಣಗಳನ್ನು ಮಧುರವರ್ಣವು ಇತ್ಯಾದಿಯಾಗಿ ವ್ಯವಹರಿಸುವರು.

ಈ ಎರಡು ಮತಗಳ ಊಹಾಪೋಹವನ್ನು ಮಾಡುವುದು ನನ್ನಂತಹ ಅಲ್ಪಜ್ಞನದಲ್ಲ—ಅದರಂತೆಯೆ ಗುಣಗಳೂ ಅಲಂಕಾರಗಳೂ ಆವಾವ ವಿಧದಿಂದ ರಸಪೋಷಕವಾಗುತ್ತವೆಂಬ ವಿಷಯವನ್ನೂ ಚರ್ಚಿಸಲಾರೆನು. ಧೈರ್ಯಾದಿಗಳು ಆತ್ಮನನ್ನು ಸಾಕ್ಷಾತ್ತಾಗಿಯೂ ಕಟಕಾದಿಗಳು ದೇಹದ್ವಾರದಿಂದಲೂ ವಿಶೇಷಿಸುವಂತೆ ಗುಣಗಳು ಸಾಕ್ಷಾತ್ತಾಗಿಯೂ ಅಲಂಕಾರಗಳು ಶಬ್ದಾರ್ಥದ್ವಾರವಾಗಿಯೂ ರಸವನ್ನು ವಿಶೇಷಿಸುತ್ತಿಹವೆಂದು ತಿಳಿಸಿ ಗುಣದ ವಿಷಯಕ್ಕೆ ಸ್ವಲ್ಪ ವಿವರಣೆಯನ್ನು ಮಾಡಲೆಳಸಿಹೆನು.

ಗುಣಾಲಂಕಾರಗಳ ವಿಷಯವನ್ನು ಸಾಮಾನ್ಯವಾಗಿ ಮುಗಿಸುವ ಮೊದಲು ನಾಗವರ್ಮನಿಗೂ ಮಮ್ಮಟಚಾರ್ಯನು ಮೊದಲಾದ ಸಂಸ್ಕೃತ ಆಲಂಕಾರಿಕರಿಗೂ ಒಂದು ಬಗೆಯಲ್ಲಿರುವ ವಿಭೇದವನ್ನು ಹೇಳುವೆನು.

ಕಾವ್ಯಾವಲೋಕನವು,

ನಿರತಿಶಯಕಾವ್ಯಶೋಭಾ |
ಕರಂಗಳಾಗಿರ್ಪಧರ್ಮಮವುಗುಣಮಕ್ಕುಂ |

ಎಂದೆನ್ನುವುದು, ಏರಸಸ್ಯಾಂಗಿನೋಧರ್ಮಾಃ ಶೌರ್ಯಾದಯ ಇವಾತ್ಮನಃ| ಉತ್ಕರ್ಷಹೇತವಸ್ತೇ ಸ್ಯುರಚಲಸ್ಥಿತಯೋಗುಣಾಃ || ಎಂಬಸೂತ್ರಕ್ಕೆ ಸಮಾರ್ಥವಾಗಿದೆ. ಆದರೆ ಸಂಸ್ಕೃತ ಅಲಂಕಾರಜ್ಞರು ಅಲಂಕಾರಗಳಲ್ಲಿ ಪರಿಗಣಿಸುವ ಸಮಾಸೋಕ್ತಿಯನ್ನೂ, ಉದಾತ್ತವನ್ನೂ, ನಾಗವರ್ಮನು ಗುಣ

ದಲ್ಲಿ ಪರಿಗ್ರಹಿಸಿರುವನು. ಸಮಾಸೋಕ್ತಿ ಎಂಬುದು ಸಮಾಧಿ ಎಂಬ ಗುಣವಾಗಿದೆ. ಉದಾತ್ತವು ಉದಾರವೆಂಬ ಗುಣವಾಗಿದೆ.

ಪರೋಕ್ತಿರ್ಭೇದಕೈಃ ಶ್ಲಿಷ್ಟೈಃ ಸಮಾಸೋಕ್ತಿಃ ಎಂದು ಮಮ್ಮಟಾಚಾರ್ಯನು ಹೇಳುವನು. ಅದನ್ನೇ ನಾಗವರ್ಮನು

ಪೆರವರ ಧರ್ಮಂಗಳನೇ
ತೆರದಿಂದಂ ತಂದು ಪೆರವರೊಳ್ ಪತ್ತಿಸಿಕಣ್ ।
ದೆರೆಯೆ ಚತುರೋಕ್ತಿಕೃತಿಯೊಳ್
ನೆರೆದಿರೆ ಪೇಳ್ವುದು ಸಮಾಧಿಯೆನೆ ಪೆಸರ್ವಡೆಗುಂ ||

ಎಂದು ಸಮಾಧಿಗುಣವನ್ನು ಬಣ್ಣಿಸುವನು. ಉದಾಹರಣವನ್ನು ನೋಡಿ.

ವಿನಿಮೀಲಿತನೀಲಾಂಬುಜ
ವನಮುನ್ಮೀಲಿತ ನವೀನ ಕಮಲವನಂತ ||
ದ್ದಿನಮುಖದೊಳ್‌ಮಧುಪಾಳಿಗೆ
ಜನಿಯಿಸಿದುವು ಪಳೆಯ ಸುಸಿಲ, ಪೊಸಸುಸಿಲಿಂಪಂ ||

ಅದರಂತೆಯೆ 'ಉದಾತ್ತಂ ವಸ್ತುನಃ ಸಂಪತ್' ಎಂದು ಮಮ್ಮಟಾಚಾರ್ಯನುಲಿವ
ಉದಾತ್ತವನ್ನು ನಾಗವರ್ಮನು "ಪರಪ್ರಕರ್ಷೋಕ್ತಿಯುಕ್ತಮಪ್ಪುದುದಾರಂ," ಎಂದು

ಮನೆಮನೆದಪ್ಪದೆಯುಂ ಪಳು
ಕಿನಕೇರ್ಗಳ್‌ಪವಳದೆಸೆವಕಂಬಂಕರ್ಕೇ ।
ತನದತೊಲೆಪೊನ್ನಪೊಸಜಂ
ತೆನೀಲದಡಿಗಲ್ಗಳೆಂದೊಡೇ ವರ್ಣಿಪುದೋ ||

ಎಂಬಿದನ್ನುದಾಹರಿಸಿರುವನು.

ಇದು ಸಾಕು. ಗುಣವಿಚಾರಂಗೈವ. ಗುಣಗಳು ಹತ್ತೆಂದು ನಾಗವರ್ಮನೂ ಸಂಸ್ಕೃತ ಅಲಂಕಾರಜ್ಞರಲ್ಲಿ ಹಲವರೂ ಹೇಳುವರು. ಮಮ್ಮಟಾಚಾರ್ಯನು ಅಲ್ಲೆಂದು "ಮಾಧುರ್ಯೌಜಃ ಪ್ರಸಾದಾಖ್ಯಾಸ್ತ್ರಯಸ್ತೇನ ಪುನರ್ದಶ" । ಎಂದು ಹೇಳುವನು.

ಮಾಧುರ್ಯ ಓಜಸ್ಸು ಪ್ರಸಾದವೆಂಬ ಮೂರು ಗುಣಗಳು.

ಹತ್ತು ಗುಣಗಳೆಂದರೆ—

ಸಮಸಂಶ್ಲಿಷ್ಟಾರ್ಥವ್ಯ
ಕ್ತಿ ಮಧುರಕಾಂತ ಪ್ರಸನ್ನಸುಕುಮಾರೋಜ |
ಸ್ಸಮಭಿಮತೋದಾರಾಹ್ವಯ |
ಸಮಾಧಿಗಳ್ ಕೃತಿಗುಣಂಗಳೀರೈದಕ್ಕುಂ ||

ಹರಿದೇವನ ಕಾವ್ಯಗುಣಗಳನ್ನು ನೋಡುವಾಗ ಕಾವ್ಯಪ್ರಕಾಶಕಾರನ ಪಂಕ್ತಿಗಳನ್ನು ಹಿಡಿದು ಎಲ್ಲಿ ಬೇಕಾದರೆ ನಾಗವರ್ಮನನ್ನು ಹಿಂಬಾಲಿಸುವ.

ರಸಗಳಲ್ಲಿರುವ ಮಾಧುರ್ಯವನ್ನೂ, ಓಜಸ್ಸನ್ನೂ, ಪ್ರಸಾದವನ್ನೂ ಪ್ರಕಟಿಸಲಿಕ್ಕೆ ಅಂದರೆ ವ್ಯಂಜಿಸಲಿಕ್ಕೆ ವಿಚಿತ್ರವಾದ ವೃತ್ತಗಳನ್ನು ಬಂಧಗಳಲ್ಲಿ ಕವಿಯು ಉಪಯೋಗಿಸುವುದೆ ಅವನ ಶೈಲಿಯ ಮಾಧುರ್ಯೌಜಸ್ಸು ಅಥವಾ ಪ್ರಸಾದವೆನಿಸುವುದು.

ಇನ್ನು ಮಾಧುರ್ಯಾದಿಗಳ ಲಕ್ಷಣವೇನು ?

ಆಹ್ಲಾದಕತ್ವಂ ಮಾಧುರ್ಯಮ್—| ಮಮ್ಮಟ.

ಅಗ್ರಾಮ್ಯವಚನವೃತ್ತಿ ಸಮಗ್ರರಸಾಪೂರ್ಣಮಪ್ಪುದದು

ಮಧುರಂ | ಕಾವ್ಯಾವಲೋಕನ. ಅಂದರೆ ಚಿತ್ತವನ್ನು ಕರಗಿಸುವ ಗುಣವು ಮಾಧುರ್ಯವು. ಅದು ಗ್ರಾಮ್ಯವಲ್ಲದ ವಚನಗಳಲ್ಲಿದ್ದು ಆ ವಚನಗಳನ್ನು ರಸದಿಂದ ತುಳಿಕಿಸುತ್ತಿದೆ.

ಮಾಧುರ್ಯವು ಶೃಂಗಾರದಲ್ಲಿಯೂ, ಕರುಣದಲ್ಲಿಯೂ, ಶಾಂತದಲ್ಲಿಯೂ ಉಂಟು. ಅದರಿಂದ ಈ ರಸಗಳನ್ನು ಬಣ್ಣಿಸುವಾಗ ಮಧುರಶೈಲಿ ಇರಬೇಕು.

ದೀಪ್ತ್ಯಾತ್ಮ ವಿಸ್ತೃತೇರ್ಹೇತುರೋಜೋವೀರರಸಸ್ಥಿತಿ: | ಮಮ್ಮಟ. ಪಿರಿದುಂ ಸಮಾಸಮಾಗಿರೆ ವಿರಚಿಸುವುದು ತಾನದೋಜಮುಕ್ಕುಂ | ಕಾವ್ಯಾವಲೋಕನ.

ಚಿತ್ತವನ್ನು ವಿಕಾಸಗೊಳಿಸುವ ಗುಣವು ಓಜವು. ಬಹಳವಾಗಿ ದೀರ್ಘಸಮಾಸಗಳಲ್ಲಿ ಈ ಗುಣವು ಇರಲುಚಿತವಾದುದರಿಂದ ದಂಡಿಯ ಮತವನ್ನನುಸರಿಸುವ ಕಾವ್ಯಾವಲೋಕನವು ಓಜಸ್ಸನ್ನು ಸಮಾಸಪೂರ್ಣವೆಂದು

ಹೇಳುವುದು. ಆದರೆ ಸಮಾಸಗಳು ಇಲ್ಲದೆಯೂ ಓಜಸ್ಸು ಇರಬಹುದು. ಈ ಗುಣವು ವೀರರೌದ್ರಬೀಭತ್ಸಗಳಲ್ಲಿಯೂ ಉಂಟು. ಈ ರಸಗಳ ವರ್ಣನಕ್ಕೆ ಓಜೋವರ್ಣಗಳು ಬೇಕು.

ಶುಷ್ಕೇಂಧನಾದಿವತ್ ಸ್ವಚ್ಛ ಜಲವತ್ಸಹಸೈವಯಃ| ವ್ಯಾಪ್ನೋತ್ಯನ್ಯತ್ಪ್ರಸಾದೋ ಸೌಸರ್ವತ್ರವಿಹಿತಸ್ಥಿತಿಃ | ಮಮ್ಮಟ. ಅತಿರೂಢಾರ್ಥಮಗೂಢಂ ಪ್ರತೀತಿ ಸುಭಗಂಪ್ರಸನ್ನಮೆನೆ ಪಡೆಗುಂ-ಕಾವ್ಯಾವಲೋಕನ. ಒಣಗಿದ ಸೌದೆಯನ್ನು ಅಗ್ನಿಯೂ ಹಸನಾದ ಬಟ್ಟೆಯನ್ನು ನೀರೂಶೀಘ್ರವಾಗಿ ಹರಡುವಂತೆ ಆವುದಾನೊಂದು ಗುಣವು ಚಿತ್ತವನ್ನು ವ್ಯಾಪಿಸುವುದೊ ಅದೆ ಪ್ರಸಾದವು. ಅದು ಎಲ್ಲರಸಗಳಲ್ಲಿಯೂ ಉಂಟು. ಥಳಿಲನೆ ಅರ್ಥಜ್ಞಾನವನ್ನುಂಟುಮಾಡುವ ಪ್ರಸಿದ್ಧ ಶಬ್ದಗಳಲ್ಲಿ ಈ ಗುಣವುಂಟು.

ಇಂತೀಹೇಳಿದ ಲಕ್ಷಣಗಳನ್ನು ಚಿತ್ತದಲ್ಲಿಪಿಡಿದು ಹರಿದೇವನ ಕಾವ್ಯಗಳನ್ನು ಓದಿವರೆ ಅವನ ಶೈಲಿಯು ಪ್ರಸನ್ನಮಧುರವಾಗಿಯೂ ತಕ್ಕಲ್ಲಿ ಓಜಃಪೂರ್ಣವಾಗಿಯೂ ಇರುವುದನ್ನು ಕಾಣಬಹುದು. ಮೇಲೆ ಉದಾಹರಿಸಿದ ಕಾವ್ಯಾಂಶಗಳು ಇದನ್ನು ತೋರಿಸಬಲ್ಲುವು. ಅದರಿಂದ ಉದಾಹರಿಸುವ ಗೊಡವೆಗೆ ಹೋಗೆನು.

ಕವಿಚರಿತ್ರಕಾರರು ಉದಾಹರಿಸಿದ ಅಂಶಗಳನ್ನು ಓದುಗರು ನೋಡಬಹುದು. ಹರಿದೇವನ ಕಾವ್ಯಗಳನ್ನುಓದಿ ತಾವೇಪರಿಶ್ರಮಂಬಟ್ಟು ವಿಶ್ರಮವನ್ನು ಹೊಂದಬಹುದು.

ಬಲ್ಲನಿತು ಹರಿದೇವನ ಕಾವ್ಯವಿಮರ್ಶವನ್ನು ಮಾಡಿದೆನು. ಇನಿತಕ್ಕೆ ನಿಲ್ಲಿಸಲು ಅವನೊಬ್ಬ ಮಹಾಕವಿಎಂಬುದನಿತಲ್ಲ. ಮಹಾಕವಿಮಂಶ ಪಿತಾಮಹನು.

ಈ ಹೊಸಕವಿತಾ ಭಾವನೆಗೆ ಉದ್ಗಮಹೇತುವಾವುದು ? ಕರ್ಣಾಟಕ ಭೂಮಿಯಲ್ಲಿ ಅಂಕುರಿಸಿದ ಶ್ರೀಬಸವಾದಿಪ್ರಮುಥರ ಧರ್ಮತಾತ್ವಿಕವು. ಹರಿದೇವನು ಈ ಧರ್ಮವನ್ನೂ ಅದರ ತಾತ್ವಿಕಗಳನ್ನೂ ಎದೆಯಲ್ಲಿ ಮಡಗಿ ನಡೆದು ಜಗತ್ತಿಗೆ ಆದರ ಕಹಳೆಯನ್ನೂದಿದನು. ಬಸವನ ತತ್ವಗಳಿಗೆ ತಲೆದೂಗಿ ಬದಿಗೆನಿಂದು ಬಣ್ಣಿಸಿದವನಲ್ಲ. ಲಿಂಗವಂತನೆ ಅವನು ಎಂಬುದನ್ನು

ಈ ವಿಮರ್ಶದಿಂದ ತೋರಿಸಿದೆನೆಂದು ಮತ್ತೊಮ್ಮೆ ಹೇಳದೆ ಇರಲಾರೆನು. ವೀರಶೈವದಲ್ಲಿ ಮುಖ್ಯಾಂಶವೆಂದರೆ ಭಕ್ತರಲ್ಲಿ ಜಾತಿಭೇದವಿಲ್ಲ. ಎಲ್ಲಕಾಯಕಗಳು ಶಿವಸೇವೆ. ನಮ್ಮಬಾಳು ಶಿವನೊಡನೆ ಸಮರಸ.

ಈ ಮೂರನ್ನು ನಾವು ಹರಿದೇವನ ಕಾವ್ಯದಲ್ಲಿ ಕಾಣುತ್ತೇವೆ. ಅವನ್ನವನು ತನ್ನ ಜೀವಿತದ ತಿರುಳನ್ನಾಗಿರಿಸಿರುವನು. ಅವನು ಲಿಂಗವಂತನು.

ವೀರಶೈವನೂ, ವೀರಶೈವ ಮಹಾಕವಿಕುಲ ಪಿತಾಮಹನೂ, ಬಸವಾದಿ ಶರಣಮಾರ್ಗಾನುಗನೂ ಎನಿಸಿದ ಹರಿದೇವಕಾವ್ಯ ವಿಮರ್ಶವನ್ನು,

ದೇಹಾತ್ಮಾನೌ ಕನಕಕಟಕೌ ಖಾನಿಲೌ ಭಾನುಭಾಸೌ |
ಪುಷ್ಪಾಮೋದೌ ಜಲಗುಣರಸೌ ಚಂದ್ರಮಶ್ಚಂದ್ರಕಾಂತೀ |
ಯದ್ವಲ್ಲೋಕೇಸಮರಸಜುಷೌ ಸುಪ್ರಸಿದ್ಧೌ ಜನಾನಾಮ್ |
ತದ್ವದ್ಭಾತಾಂ ಸಮರಸಯುತೌ ಶ್ರೇಯಸೇಲಿಂಗಭಕ್ತೌ ||

ಎಂಬ ಮಂಗಲದಿಂದ ಮುಗಿಸುವ.

**ವೀರ್ಯಂ ಭದ್ರಂ ಶಿವಂ.**

# ಹರಿಹರನ ಗಿರಿಜಾಕಲ್ಯಾಣಮ್

“ ಕರುಣಂಗೆಯ್ಗೊಲವಿಂದೆ **ಹಂಪೆಯ ವಿರೂಪಾಕ್ಷಂ** ಶಿವಾ ವಲ್ಲಭಂ ”

(ಗಿ. ಕ. ೧. ೧೩೦)

* * * *

“ . . . . . . . . . ತನ್ನ ವಿವಾಹ ವರ್ಣನಾ ।
ಸಂಗತಿಯಿಂದು ಮತ್ಕೃತಿಗೆ **ಪಾರ್ವತಿ** ಮಾಳ್ಕೆ ಮಹೋತ್ಸವಂಗಳಂ ” ॥

(ಗಿ. ಕ. ೧. ೪.)

---

ಹರಿಹರ ಕವಿಯ ಗಿರಿಜಾ—ಕಲ್ಯಾಣ ಕಾವ್ಯದಲ್ಲಿ ಗುಂಫಿತವಾದ ಪಾರ್ವತೀವಿವಾಹ ಸಂದರ್ಭವನ್ನು ಕುರಿತ ಲೇಖವಿದು.

ಗಿರಿಜಾಕಲ್ಯಾಣವು ಜಗತ್ತಿನ ಕಲ್ಯಾಣವು. ಪಾರ್ವತಿ ಜಗಕ್ಕೆ ಜನನಿ, ದೇವಿ, ಆದರ್ಶಪತ್ನಿ, ಗೌರಿ, ನಮ್ಮ ನಾರೀಜನಕ್ಕೆ ಉಪಾಸ್ಯದೇವತೆ, ಪಾರ್ವತೀ ಪರಮೇಶ್ವರರು ಜಗತ್ತಿನ ಮಾತಾಪಿತೃಗಳು, ಅಂತೆಯೆ ಆರ್ಯ ವಧು ಮದುವೆಯ ಕಾಲದಲ್ಲಿಮೊದಲು ಗೌರೀ—ಹರ ಪೂಜೆಮಾಡಿ, ಗೌರೀ ಹರರ ಆಶೀರ್ವಾದವನ್ನು ಕೋರಿ, ಆ ಆದರ್ಶ ಪತಿಪತ್ನಿಯರ ಉದಾಹರಣ ವನ್ನು ಮುಂದಿರಿಸಿಕೊಂಡು ಪಾಣಿಗ್ರಹಣಕ್ಕೆ ಹೊರಡುವಳು. ಮದುವೆ ಆದ ತರುವಾಯವೂ ಆಕೆ ಗೌರಿಗೆ ನಿತ್ಯ ಪೂಜೆಯನ್ನು ಸಲಿಸುವಳು. ಒಂದೊಂದು ಮಾಸ ಒಂದೊಂದು ಹೆಸರಿನಿಂದ ವರ್ಷವೆಲ್ಲ ಆಕೆಯ ಪೂಜೆ ಯನ್ನು ಮಾಡಿದರೂ ಆರ್ಯನಾರಿಗೆ ತೃಪ್ತಿಯಿಲ್ಲ. *ಪಾರ್ವತಿಯ ಮದು ವೆಯ ಕಥಾನಕವು ಜನಕ್ಕೆ ಪ್ರಿಯವಾದುದಲ್ಲದೆ ಆಕಲನೀಯವೂ ಆಗಿದೆ. ಹರಿಹರ ಕವಿ, ಗ್ರಂಥಾರಂಭದಲ್ಲಿ ಹೇಳಿದ ಆ ಕಥೆಯ ಸಾರವನ್ನೇ ಕೆಳಗೆ ಹೇಳುವೆವು:—

---

*ಚೈತ್ರ ವೈಶಾಖಗಳಲ್ಲಿ-ಚೈತ್ರಗೌರಿ. ಜ್ಯೇಷ್ಠದಲ್ಲಿ-ವಟಸಾವಿತ್ರಿ. ಶ್ರಾವಣದಲ್ಲಿ- ಜೀವಂತಿಕೆ, ಮಂಗಲಗೌರಿ. ಭಾದ್ರಪದದಲ್ಲಿ- ಶುಕ್ಲಪಕ್ಷದಲ್ಲಿ- ಸ್ವರ್ಣಗೌರಿ, ಹರಿತಾಲಿಕೆ; ಕೃಷ್ಣಪಕ್ಷದಲ್ಲಿ- ಗಜ ಗೌರಿ. ಆಶ್ವಿನದಲ್ಲಿ- ದುರ್ಗಾದೇವಿ; ಸೀಗೇಗೌರಿ. ಕಾರ್ತಿಕದಲ್ಲಿ- ಹರಪಾರ್ವತಿ (ಗೌರೀಹುಣ್ಣಿವೆ). ಪುಷ್ಯದಲ್ಲಿ- ಶಂಕರಿ.

೨. **ಗಿರಿಜಾಕಲ್ಯಾಣದ ಕಥಾಸಾರ:**— ಶಿವಪತ್ನಿಯಾದ ಸತಿ, ತನ್ನ ತಂದೆ ದಕ್ಷನು ಮಾಡಿದ ಶಿವನಿಂದೆಯನ್ನು ಕೇಳಿ ಅಸಮಾಧಾನಗೊಂಡು ಶಿವನಿಂದಕನಿಂದ ಹುಟ್ಟಿದ ಕಾಯವೆಂಬ ಜುಗುಪ್ಸೆಯಿಂದ ತನ್ನ ಕಾಯವನ್ನು ತೊರೆದು, ಗಿರಿರಾಜನ ಮಡದಿ ಮೇನಾದೇವಿಗೆ ಪಾರ್ವತಿ ಎಂಬ ಮಗಳಾಗಿ ಅವತರಿಸಿದಳು. ಹುಟ್ಟಿದಾಗಳೇ ಆಕೆ ಶಿವಭಕ್ತೆ. ಶಿಶುವಾಗಿರುವಾಗಳೇ ಮನೆಯಿಂದ ಪರಿಪರಿದು ಶಿವಾಲಯಕ್ಕೆ ಹೋಗುವಳು. ಆ ಬಾಲಿಕೆಗೆ ಶಿವಪೂಜೆಯ ಆಟಗಳೇ ಆಟಗಳು. "ಹಸಿವನು ಅರಿಯದೆ ನೀರಳ್ಕೆಯನು ಅರಿಯದೆ" ಯಾವಾಗಲೂ ಶಿವಪೂಜಾನಿರತೆಯಾಗಿ ಶಿವನ ಮರುಳುಗೊಂಡಂತೆ ಇರುವಳು. ಈ ಸಮಾಚಾರವನ್ನು ಆಕೆಯ ಗೆಳತಿಯರು ಗಿರಿರಾಜನಿಗೆ ಹೇಳಿದರು. ಆತನು ಅದಕ್ಕೆ ಮೆಚ್ಚಿ ಇಂತಹ ಶಿವಭಕ್ತೆಯಾದ ಮಗಳ ತಂದೆ ತಾನೆಂಬ ಹೆಮ್ಮೆಯಿಂದ ಈ ಮಗಳನ್ನು ಚೆನ್ನಾಗಿ ಸಲಹುತ್ತಿದ್ದನು.

ಬರಬರುತ್ತ ಪಾರ್ವತಿ ಪ್ರಾಯಕ್ಕೆ ಬರಲು ಗಿರಿರಾಜನು ಮಗಳಿಗೆ ಅನುರೂಪನಾದ ವರನನ್ನು ಹುಡುಕುತ್ತಿದ್ದನು. ಒಂದು ದಿನ ನಾರದಮುನಿ ಬಂದು—'ಈಕೆ ವಿರೂಪಾಕ್ಷನ ಅರ್ಧಾಂಗಿ ಈಕೆಯನ್ನು ಆತನಿಗೆ ಸಲಿಸು' ಎಂದು ಹೇಳಿದನು. ಆಗ ಗಿರಿರಾಜನು ಪಾರ್ವತಿಯನ್ನು ಹೇಮಕೂಟಾಚಲದಲ್ಲಿ ತಪಸ್ಸಮಾಧಿಯಲ್ಲಿದ್ದ ಮಹೇಶ್ವರನಲ್ಲಿಗೆ ಕರೆದೊಯ್ದು, ಆತನನ್ನು ತೋರಿ— ಮಗಳೇ ಈತನೇ ನಿನ್ನ ಪತಿ, ಒಲಿಸಿಕೊಳ್ಳು ಎಂದು ತಿಳುಹಿ, ಆಕೆಯನ್ನು ಅಲ್ಲಿಯೇ ಇರಹೇಳಿ ತಾನು ಮರಳಿ ಬಂದನು. ಪಾರ್ವತಿ ಮಹಾದೇವನ ಕರುಣೆಯಾವಾಗ ಆದೀತೆಂದು ಇದಿರುನೋಡುತ್ತ ಅಲ್ಲಿಯೇ ಆತನ ಪೂಜೆಯನ್ನು ಮಾಡುತ್ತ ಇದ್ದಳು. ಸಮಾಧಿಯಿಳಿದರಲ್ಲವೆ ಆತನಕರುಣೆ-ಗಿರುಣೆ! ಅತ್ತ ದೇವತೆಗಳ ಕಾರ್ಯಕ್ಕಾಗಿ, ಕಾಮನು ಅವರ ಬಲುಮೆಯಿಂದ ಶಿವನ ತಪೋಭಂಗವನ್ನು ಮಾಡುವೆನೆಂದು ಒಪ್ಪಿ, ತನ್ನ ಪರಿವಾರಬಲದೊಡನೆ ಹೇಮಕೂಟಕ್ಕೆ ಬಂದನು. ಆತನ ಬರವಿನಿಂದ ಶಿವನ ತಪೋವನದ ಖಗಮೃಗಗಳಲ್ಲಿಯೂ ಪರಿವಾರದಲ್ಲಿಯೂ ಕಾಮಸಂಚಾರವಾದಂತಾಯಿತು. ಈ ಪರಿವರ್ತನವನ್ನು ಕಂಡು ಶಿವನ ನಂಬುಗೆಯ ಆಳಾದ ನಂದೀಶ್ವರನು ಕೆರಳಿ ಸುತ್ತಲು ಒಮ್ಮೆ ನೋಡಲು ಕಾಮನೂ ಅವನ ಪರಿವಾರಬಲವೂ ಎತ್ತಲೋ ಓಡಿದುವು. ಕಾಮನು ಎದೆಗುಂದಿದನು. ಈ ಹೊತ್ತಿಗೆ ಸಮವಾಗಿ

ಪಾರ್ವತೀದೇವಿ ಹೊದೊಡವುಗಳನ್ನು ಇರಿಸಿಕೊಂಡು ಹೊಸ ಅಂದದಿಂದ ಎಂದಿನಂತೆ ಶಿವಪೂಜೆಗೆ ಬರುವುದನ್ನು ಕಂಡು, ಕಾಮನು ತನ್ನ ಕಾರ್ಯವು ಇನ್ನು ಕೈಗೂಡುವುದೆಂಬ ಆಶೆಯುಳ್ಳವನಾದನು. ಪಾರ್ವತಿಯ ಅನುಕೂಲತೆಯಿಂದ ಹುರಿಗೊಂಡ ಕಾಮನು ಆಕೆ ಪೂಜೆಗಾಗಿ ಶಿವನ ಹತ್ತಿರ ಇರುವ ಸಮಯವನ್ನು ಸಾಧಿಸಿ ಆತನ ಮೇಲೆ ತನ್ನ ಪಂಚಬಾಣಗಳನ್ನು ಎಸೆದನು. ಶಿವನು ಸಮಾಧಿಯಿಳಿದು ಕಣ್ದೆರೆದನು. ಇದಿರಿಗೆ ಕಾಮೋನ್ಮಾದವನ್ನೇ ಹುಟ್ಟಿಸುವಂತಹ ವೇಷದಿಂದ ವಿರಾಜಿಸುವ ಪಾರ್ವತಿ! ಮನವು ಕದಲಿತು. ತನ್ನ ಮನಸ್ಸಿನ ಕದಲಿಕೆಗೆ ಕಾರಣವೇನೆಂದು ಶಿವನು ಅತ್ತಿತ್ತ ನೋಡಲು ಆಚೆ ಬಿಲ್ಲನ್ನೇರಿಸಿಕೊಂಡು ನಿಂತ ಕಾಮನು ಕಾಣಿಸಿದನು. ಕೂಡಲೆ ಆ ರುದ್ರನು ಉರಿದೆದ್ದನು. ಆತನ ಬಿಸುಗಣ್ಣುರಿ ಕಾಮನನ್ನು ಕ್ಷಣಾರ್ಧದಲ್ಲಿ ಸುಟ್ಟು ಬೂದಿಮಾಡಿತು. ತರುವಾಯ ಆ ಸ್ಮರಹರನು ಪಾರ್ವತಿಯನ್ನು ಕಣ್ಣೆತ್ತಿಕೂಡ ನೋಡದೆ ಎತ್ತಲೋ ಮಾಯವಾದನು. ಬಳಿಕ ಪಾರ್ವತಿ ತಪೋಬಲದಿಂದ ಹರನನ್ನು ತನ್ನ ಬಳಿಗೇ ಬರಮಾಡುವೆನೆಂದು ಪಂಥತೊಟ್ಟು ದೀರ್ಘಕಾಲ ಉಗ್ರತಪವನ್ನು ಮಾಡುತ್ತ ಇದ್ದಳು. ಮಹೇಶನು ತಪಕ್ಕೆ ಮೆಚ್ಚಿ ವಟುವೇಷದಿಂದ ಬಂದು ಪಾರ್ವತಿಯ ಚಿತ್ತವನ್ನು ಪರೀಕ್ಷಿಸಿ ನಿಜರೂಪವನ್ನು ತೋರಿ ಆಕೆಯನ್ನು ತನ್ನ ಹೆಂಡತಿಯೆಂದು ಅಂಗೀಕರಿಸಿದನು. ಬಳಿಕ ಲೋಕದ ನಡೆವಳಿಯಂತೆ ಶಿವನು ಗಿರಿರಾಜನಲ್ಲಿ ಕನ್ಯಾರ್ಥಿಯಾಗಿ ಪಾರ್ವತಿಯನ್ನು ಬೇಡಿ ವೈಭವದಿಂದ ಆಕೆಯನ್ನು ಪರಿಗ್ರಹಿಸಿದನು.

೩. **ಬೇರೆ ಗ್ರಂಥಗಳಲ್ಲಿ ಬಂದ ಗಿರಿಜಾಕಲ್ಯಾಣ ಕಥೆ:**– ಪ್ರಪಂಚದ ಮಾತಾಪಿತೃಗಳೆನಿಸಿದ ಪಾರ್ವತೀ ಪರಮೇಶ್ವರರ ಮದುವೆಯ ಕಥೆ ಜನಗಳಿಗೆ ಅತಿ ಪ್ರಿಯವಾದುದು; ಶ್ರವಣಾಸೇಚನಕವೂ ಅಹುದು. ಅದನ್ನು ಎಲ್ಲಕ್ಕೂ ಮೊದಲು ಹೇಳಿದ ಕಥೆಗಾರನು ಆವನೋ? ಆ ಋಷಿಯ ದಿವ್ಯ ಮುಖದಿಂದ ಹೊರಟ ಅಮೃತಮಯವಾದೀಕಥೆ ಅನಾದಿಕಾಲದಿಂದ ಜಗವನ್ನು ಸಂತಸಗೊಳಿಸುತ್ತಿದೆ. ಈ ಕಥೆಯನ್ನು ಕಾವ್ಯವಾಣಿಯಿಂದ ಮೊದಲು ಹಾಡಿದವನು ಅಮರಕವಿ **ಕಾಲಿದಾಸನು.**

**ಶ್ರೀ ಶಿವಪುರಾಣದ** ಸತೀ ಖಂಡದಲ್ಲಿ ಶಿವಪತ್ನಿಯಾದ ಸತಿಯು ಕಾಯವನ್ನು ತೊರೆದ ಸಮಾಚಾರವೂ ಪಾರ್ವತೀಖಂಡದಲ್ಲಿ ಪಾರ್ವತಿಯ

ಮದುವೆಯ ಸಮಾಚಾರವೂ ವಿಸ್ತಾರವಾಗಿ ಹೇಳಿವೆ. ಕಾಲಿದಾಸನ **ಕುಮಾರಸಂಭವ ಕಾವ್ಯ**ದಲ್ಲಿ ಬಂದ ಗಿರಿಜಾಕಲ್ಯಾಣ ಕಥೆಗೂ ಶಿವಪುರಾಣದ ಗಿರಿಜಾಕಲ್ಯಾಣ ಕಥೆಗೂ ಸ್ವಲ್ಪ ಹೆಚ್ಚುಕಡಮೆಗಳಿದ್ದರೂ ಒಂದನ್ನೊಂದು ಹೋಲುತ್ತವೆ. ಕುಮಾರಸಂಭವವು ಶಿವಪುರಾಣಕ್ಕಿಂತ ಪ್ರಾಚೀನವು. ಬಹುತರ ಎಲ್ಲ ಪುರಾಣಗಳು ಕಾಲಿದಾಸನಿಂದ ಈಚೆಯವೆಂದು ಐತಿಹಾಸಿಕರು ಹೇಳುವರು. ಈ ಕಾರಣದಿಂದ ಶಿವಪುರಾಣದ ಗಿರಿಜಾಕಲ್ಯಾಣಕ್ಕೆ ಕುಮಾರಸಂಭವದ ಗಿರಿಜಾಕಲ್ಯಾಣವು ಮೂಲವೆಂದು ಹೇಳಬೇಕಾಗುವುದು. ಹಾಗೆ ಹೇಳುವುದಕ್ಕೆ ಅವುಗಳಲ್ಲಿ ಹೋಲಿಕೆಗಳೂ ಹೇರಳವಾಗಿವೆ. *ಶಿವಕವಿ ಎನಿಸಿದ ಹರಿಹರಾರಾಧ್ಯನು (೧೦೨೨) ತನ್ನ ಗಿರಿಜಾಕಲ್ಯಾಣಕ್ಕೆ ಶಿವಪುರಾಣವನ್ನು ಅವಲಂಬನವಾಗಿ ಇಟ್ಟುಕೊಂಡಿರಬೇಕು. ಇದರಿಂದಲೇ ಕುಮಾರಸಂಭವದ ಗಿರಿಜಾಕಲ್ಯಾಣ, ಹರಿಹರನ ಗಿರಿಜಾಕಲ್ಯಾಣ ಇವುಗಳಲ್ಲಿ ಹೋಲಿಕೆಯು ವಿಶೇಷವಾಗಿದೆ. ಒಟ್ಟಿನಲ್ಲಿ ಕುಮಾರಸಂಭವದ ಗಿರಿಜಾಕಲ್ಯಾಣ, ಶಿವಪುರಾಣದ ಗಿರಿಜಾಕಲ್ಯಾಣ, ಹರಿಹರನ ಗಿರಿಜಾಕಲ್ಯಾಣ ಇವು ಮೂರೂ ಸ್ವಲ್ಪ ಹೆಚ್ಚುಕಡಮೆ ಒಂದೇತರದಲ್ಲಿವೆ. ಕುಮಾರಸಂಭವದ ಗಿರಿಜಾಕಲ್ಯಾಣ ಕಥೆಗೆ ಮೂಲವಾವುದೆಂಬುದನ್ನರಿಯೆವು. ಈ ಪುಣ್ಯಕಥೆಯನ್ನು ಅನಾದಿ ಕಾಲದಿಂದ ಜನರು ಹೇಳುತ್ತ ಕೇಳುತ್ತ ಬಂದಿರಬೇಕು. ಅದನ್ನೇ ಕಾಲಿದಾಸನು ಮೂಲವಾಗಿ ಇಟ್ಟುಕೊಂಡಿರಬಹುದು. ಪಾರ್ವತೀಚರಿತೆ ಪರಂಪರೆಯಿಂದ ಬಂದಿರುವುದೆಂಬುದನ್ನು ಕಾಲಿದಾಸನು ಒಂದೆಡೆಯಲ್ಲಿ ಸೂಚಿಸಿರುವನು.* ಶ್ರೀಮದ್ಭಾಗವತದ ಚತುರ್ಥಸ್ಕಂಧದಲ್ಲಿ ಸತೀಚರಿತ್ರವು ವಿಸ್ತೃತವಾಗಿ ಬಂದಿದೆ; ಪಾರ್ವತೀ ಚರಿತ್ರವು ಅಲ್ಲಿ ಇಲ್ಲ.

---

*ಶ್ರೀ ಶಿವಪುರಾಣದ ಪಾರ್ವತೀ ೬-೩೪ ಅಧ್ಯಾಯಗಳನ್ನೋದುವಾಗ ಕುಮಾರ ಸಂಭವದ ಹೋಲಿಕೆಯನ್ನು ಅಲ್ಲಲ್ಲಿ ಕಾಣ ಬಹುದು.

* तदप्यपाकीर्णमतः प्रियंवदां वदन्त्यपर्णेति च तां पुराविदः ॥

कु सं. ५२-८.

**ಶ್ರೀ ಸೌರಪುರಾಣ**ದಲ್ಲಿ ಪಾರ್ವತೀವಿವಾಹ **ಕಥೆ ಈ ತೆರದಲ್ಲಿದೆ-ಕಾಮನು** ಇಂದ್ರನ ಪ್ರೇರಣೆಯಿಂದ ಶಿವನ ಸಮಾಧಿಭಂಗವನ್ನು ಮಾಡುವೆನೆಂದು **ವಸಂತ** ಸಹಾಯನಾಗಿ ರತಿಯೊಡನೆ ಶಿವನ ತಪೋವನಕ್ಕೆ ಬಂದನು. ಆದರೆ ದ್ವಾರ ದೇಶದಲ್ಲಿದ್ದ ಶೈಲಾದಿಗೆ ಅಂಜಿ ಕಾಮನು ವಾಯುರೂಪವನ್ನು ತಾಳಿ ಶಂಕರನ ಸಮೀಪಕ್ಕೆ ಹೋದನು. ಅಲ್ಲಿಕಾಮನು ಬಹುಕಾಲ ನಿರೀಕ್ಷಿಸುತ್ತ ನಿಂತನು. ಮುಂದೆ ಶಂಕರನ ಸಮಾಧಿಭಂಗವಾಯಿತು. ಇದಿರಿಗೆ ಪಾರ್ವತೀದೇವಿ; ಆಚೆಗೆ ಬಿಲ್ಲನ್ನು ಏರಿಸಿ ನಿಂತಿದ್ದ ಕಾಮನು; ಹರನ ನೇತ್ರಾಗ್ನಿಯಿಂದ ಕಾಮನು ಭಸ್ಮೀಭೂತನಾದನು. ಬಳಿಕ ಹರನು ಪಾರ್ವತಿಯನ್ನು ಕುರಿತು— ದೇವೀ, ನಿನ್ನ ಬಯಕೆಯೇನು ? ವರವನ್ನು ಕೇಳಿಕೊಳ್ಳು ಎಂದನು. ಆಗ ಪಾರ್ವತಿ— ದೇವಾ, ಕಾಮನು ನಿನ್ನಿಂದ ದಗ್ಧನಾಗಿರುವಾಗ ನಿನ್ನವರವನ್ನೇನ ಮಾಡಲಿ ? ಕಾಮನಿಲ್ಲದಿರುವಾಗ ಸ್ತ್ರೀ ಪುರುಷರಿಗೆ ( ರತಿರೂಪವಾದ ) ಭಾವವು ಎಲ್ಲಿ ? ಭಾವವು ಇಲ್ಲದಿರುವಾಗ ಸುಖಪ್ರಾಪ್ತಿಯೆಲ್ಲಿ ? ಎಂದಳು. ಆಗ ಹರನು ದೇವೀ, ನಾನು ಕಾಮನನ್ನು ದಹಿಸಲಿಲ್ಲ; ಜ್ವಲನಸ್ವಭಾವದ ಹಣೆಗಣ್ಣಿಗೆ ಆತನು ಆಹುತಿಯಾದನು. ಎಂದನು. ಇದಕ್ಕೆಪಾರ್ವತಿ — ಕಾಮನು ತಾನಾಗಿ

---

**श्री सौरपुराणे**:—

ततःसभगवान् देवोनेत्रे उन्मील्य शंकरः ।

अपश्यद्गिरिजांदेवीम् ५३ ५२.

बरंब्रूहि महादेवि दास्याम्यद्यसुरेश्वरि । ५४-२.

हुतेतु कामे बदनीलकण्ठ बरेणकिं देव करोमि तेऽद्य ।

विनैब कामेन नचास्तिभावः पुंसयोर्भास्करकोटिकल्प ।।

भावस्यहानेः सुखसन्निकर्षः कथं भवेद्ब्रूहि सुरेशवन्द्य ।। ५४. ३. ४.

**पार्वती**:—

जीवत्वयं महादेव कामोलोक प्रतापनः ।

बिना कामेन भगवन्नाहं याचेर्थंचन ।। ५४. १७.

**ईश्वरः**—

भवत्वनङ्गोमदनस्त्वत्प्रियार्थं सुलोचने ।।

ಆಹುತಿಯಾದನೇ ? ನಿನ್ನ ತಪ್ಪೇನೂ ಇಲ್ಲವೇ ? ನಿನ್ನಂತಹ ವಿಶ್ವದೊಡೆಯನು ನನ್ನಂತಹ ಭಕ್ತೆಯನ್ನು ವಂಚಿಸುವುದೇ ? ನಾನುಒಪ್ಪಲಾರೆನು ಎಂದು ಹಟ ಹಿಡಿದಳು. ಕಾಮನು ಅನಂಗನಾಗಿ ಬದುಕಲಿ ಎಂದು ಹೇಳಿ ಶಿವನು ಕೂಡಲೆ ಅಂತರ್ಧಾನ ಹೊಂದಿದನು. ಪಾರ್ವತಿ ತನ್ನ ತಂದೆಯಮನೆಗೆ ಬಂದಳು. ಶಂಕರನು ತನ್ನಮೇಲೆ ಅನುಗ್ರಹ ಮಾಡಿರುವನೆಂದು ಆಕೆ ಹೇಳಲು ಗಿರಿರಾಜನು ಮಗಳ ಮದುವೆಯನ್ನು ಹವ್ಮಿಸ್ಮಿದನು. ಮಂದರ ಪರ್ವತದಲ್ಲಿ ಬಹುವಿಜೃಂಭಣೆಯಿಂದ ಪಾರ್ವತೀ ಪರಮೇಶ್ವರರ ಮದುವೆ ನಡೆಯಿತು.

ಚೆನ್ನಬಸವ ಪುರಾಣದಲ್ಲಿಯೂ ಪಾರ್ವತಿಯ ಮದುವೆಯ ಕಥೆ ಬಂದಿದೆ. ಆದರೆ ಅದು ಹರಿಹರನ ಗಿರಿಜಾಕಲ್ಯಾಣದ ಕಥೆಯನ್ನು ಅನುಸರಿಸಿ ಬರೆದುದಾಗಿರಬೇಕು.

## ೪. ಗಿರಿಜೆಯ ಕಲ್ಯಾಣವು ( ಮದುವೆ ) ರೂಪಕವೇ ? ನಿಜವೇ ?

ಪಾರ್ವತೀ ಪರಮೇಶ್ವರರು ಪತಿಪತ್ನಿಯರಾಗಿ ಹೊರಗೆ ಬೇರೆಬೇರೆ ತೋರಿದರೂ ಒಳಗೆ ಅವರಿಗೆ ಏಕರೂಪ್ಯ; ಸಾಮರಸ್ಯ. (೧೦-೮೨)ಆಐಕ್ಯವು ನಿತ್ಯವಾದುದು. ಮದುವೆಗೆ ವರ ಕನ್ಯೆಎಂಬ ಭಿನ್ನವ್ಯಕ್ತಿಗಳು ಬೇಡವೇ? ಶಿವನು ಪರಮಾತ್ಮ. ಪಾರ್ವತಿ ಆಪರಮಾತ್ಮನ ಭಾಗ. ವೇದಾಂತದೃಷ್ಟಿಯಲ್ಲಿ ಜೀವನೇ ಶಿವನಿಂದ ಅಭಿನ್ನನಾಗಿರುವಲ್ಲಿ ( ೮-೪೨ ) ಪಾರ್ವತಿಗೆ ಆತನಿಂದ ಭೇದವೆಲ್ಲಿಂದ ಬಂದೀತು ? ಆದರೆ ಶಿವ ಶಿವಶಕ್ತಿಯರಲ್ಲಿ ಭೇದವಿಲ್ಲದಿದ್ದರೂ *ಪಾರ್ವತೀ ಪರಮೇಶ್ವರರ ರೂಪದಲ್ಲಿ ಅವರಿಗೂ ಸಾಂಸಾರಿಕದೆಶೆ ಇರುವುದರಿಂದ ಮಾಯಾವರಣದಿಂದ ಸಾಂಸಾರಿಕರಿಗಿರುವಂತೆ ಅವರಲ್ಲಿ ಭೇದಭಾವನೆ ಉಂಟೆಂದು ಇಟ್ಟುಕೊಂಡು ನಾವು ಸಾಗಬೇಕು.

ಇದಲ್ಲದೆ ಪಾರ್ವತೀ ಪರಮೇಶ್ವರರನ್ನು ಪರಬ್ರಹ್ಮಸ್ವರೂಪದಲ್ಲಿ ಕಾಣುವದು ಸಾಮಾನ್ಯಮಾನವನಿಗೆ ಮೀರಿದಮಾತು. ದೇವರನ್ನು ಮನುಷ್ಯ ರೂಪದಲ್ಲಿ ನೋಡುವದು ಆತನಿಗೆ ಸಾಧ್ಯವು, ಅಂತೆಯೇ ನಮ್ಮದೇವರಿಗೆ ಕಣ್ಣು-ಮೋರೆ-ಕೈ-ಕಾಲುಗಳು. ನಮ್ಮದೃಷ್ಟಿಯಲ್ಲಿ ದೇವರಿಗೂ ಸಂಸಾರ;

---

* ಅವಿಭೇದ ಪ್ರಕೃತಿಗಳೆನಿಪವಯವದಿಂದೊಪ್ಪುವರ್ಧನಾರೀಶ್ವರದೊಳ್ ॥ [ಗಿ. ೪ ೧೮.೮೨]

ಹೆಂಡಿರು ಮಕ್ಕಳು, ವಸ್ತುವಾಹನಾದಿಗಳು. ಆದುದರಿಂದ ಆತನಿಗೆ ಮದುವೆಯನ್ನು ಮಾಡಿದೆವು.

ಇನ್ನು ನಾವು ದೇವನನ್ನು ಸಂಸಾರಿಯನ್ನಾಗಿ ಮಾಡಿದಾಗ ಆತನು ಸಗುಣನು. ಅನಂತ ಕಲ್ಯಾಣಗುಣ ನಿಲಯ. ಆತನು ನಮ್ಮಂತೆ ಅಲ್ಪನಲ್ಲ. ಆತನ ಗುಣಗಳು ಅತ್ಯುದಾತ್ತವಾದಂತಹುವು. ಎಂದಬಳಿಕ ಪಾರ್ವತೀ ಪರಮೇಶ್ವರರ ಪ್ರೇಮಗುಣವೂ ತೀರ ಉಚ್ಚವಾದುದು. ಅರ್ಧನಾರೀಶ್ವರ ರೂಪದಲ್ಲಾಗಲಿ ಸತೀಶಿವರೂಪದಲ್ಲಾಗಲಿ ಅವರ ದಾಂಪತ್ಯಪ್ರೇಮದ ಗಾಢತೆ ಕಲ್ಪನಾತೀತವಾದುದು. ಆ ದಂಪತಿಗಳೇ ಪಾರ್ವತೀ ಪರಮೇಶ್ವರರು. ಹೆಂಡತಿ ಹಿಂದಿನ ಜನ್ಮದಲ್ಲಿ ಪತಿನಿಂದೆಯನ್ನು ಕೇಳಿದಷ್ಟಕ್ಕೇ ಆ ದೇಹವೇ ತ್ಯಾಜ್ಯವೆಂದು ಅದನ್ನು ತೊರೆದು ಪತಿಪ್ರೇಮದ ಪರಮ ಕಾಷ್ಠೆಯನ್ನು ತೋರಿದವಳು; ಗಂಡನೋ! ಹೆಂಡತಿಯ ಅಗಲಿಕೆಯಲ್ಲಿ ಸ್ತ್ರೀ ಜಾತಿಗೇ ಪರಾಙ್ಮುಖನಾಗಿ ಲೋಕ ವ್ಯವಹಾರಕ್ಕೆ ಹೊರತಾಗಿ ತಪಸ್ವಿಯಾದವನು. ಹೀಗೆ ಅನ್ಯೋನ್ಯವಾಗಿ ಅತ್ಯುದಾತ್ತ ಪ್ರೇಮಭರಿತರಾದ ಈ ವಧೂವರರಿಗೆ ಮದುವೆಯ ವಿಧಿ ಏಕೆ ಬೇಕು? ಎಂದು ಕೆಲವರು ಹೇಳುವರು. ಸ್ವರ್ಗೀಯಪ್ರೇಮದ ಸ್ಥಳದಲ್ಲಿ ಮದುವೆ ಕೇವಲ ನೀರಸ ವಿಷಯವೆಂದು ಹಲವುಜನ ಕವಿಗಳು ಭಾವಿಸುವರು. ದಿವ್ಯಪ್ರೇಮದಲ್ಲಿ ಮದುವೆ ಒಂದು ಅನಾವಶ್ಯಕವಾದ ಜೊಂಜಾಟವೆಂದು ಅವರ ಮತ. ನಿಜ; ಏಕೆಂದರೆ, ಆ ಪ್ರೇಮದ ಭವಿಷ್ಯವು ಪ್ರೇಮದಲ್ಲಿಯೇ ಮುಗಿಯುವುದು. ಹೀಗಿರುವಾಗ ದಿವ್ಯಪ್ರೇಮದ ಪಾರ್ವತೀ ಪರಮೇಶ್ವರರಿಗೆ ಮದುವೆ ಏಕೆ?

ಅಹುದು, ಮದುವೆ ಬೇಡ; ಆದರೆ ಪ್ರಕೃತಿಪುರುಷರ-ಶಕ್ತಿ ಶಿವರ-ಮಿಲನವು ಸಾಮಾನ್ಯರಿಗೆ ಅಗಮ್ಯವಾದುದು. ಅದಕ್ಕೆ ಲೌಕಿಕ ಯುವತಿ ಯುವಕರ ಸಮಾಗಮದ ರೂಪವನ್ನು ಕೊಟ್ಟು ಹೇಳಿದರೆ ಅದನ್ನು ಅವರು ನೋಡಲಾಪರು. ಅವರ ದೃಷ್ಟಿಯಲ್ಲಿ ದೇವನು ಪುತ್ರದಾರ ವಸ್ತುವಾಹನಾದಿ ಪರಿವಾರಪರಿವೃತನು. ನಮ್ಮಂತೆ ಆತನಿಗೂ ಮದುವೆ ಬೇಕು. ದಿವ್ಯ (ಸ್ವರ್ಗೀಯ) ಪ್ರೇಮದ ಸ್ಥಳದಲ್ಲಿಯೂ ಮನುಷ್ಯನು ಮದುವೆ ಬೇಕೆಂದು ಹೇಳುವವನು. ಉದಾತ್ತ ಪ್ರೇಮಕ್ಕೂ ಮದುವೆ ಪರಿಪೋಷಕವೆಂದೇ ಆತನ ಭಾವನೆ.

ಮದುವೆಯಿಲ್ಲದ ಸ್ತ್ರೀಪುರುಷರ ಮಿಲನವು ಕೇವಲ ಪಾಶವ ವ್ಯಾಪಾರವು. ಕರ್ತವ್ಯಜ್ಞಾನಶೂನ್ಯವಾದ ಕಾಮಸೇವನೆ. ಮದುವೆ ಕ್ಷಣಿಕವಾದುದಲ್ಲ; ಜೀವನಾವಧಿಕವಾದುದು. ನಾರಿಯು ಕೇವಲ ಭೋಗ್ಯಳಲ್ಲ, ಸಮ್ಮಾನಾರ್ಹಳು ಎಂದು ಮದುವೆ ಬೋಧಿಸುವುದು. ಇದು ಕ್ಷಣಿಕ ಸಂಭೋಗದಂತೆ ತುಚ್ಛವಾದುದಲ್ಲ. ಇದಕ್ಕೊಂದು ಮಹಾಭವಿಷ್ಯತ್ತು ಇದೆ ಎಂದು ಮದುವೆ ನಮ್ಮನ್ನು ಎಚ್ಚರಿಸುವುದು. ಮದುವೆ ಗೃಹಸುಖದ ಧುರಿ. ಸಂತಾನಕಲ್ಯಾಣದ ಮೂಲವು; ಸಮಾಜಮಂಗಲದ ಮಾರ್ಗವು; ಮದುವೆ ವ್ಯಕ್ತಿಯ ಶಾಂತಿಯನ್ನಷ್ಟೇ ಅಲ್ಲ, ಸಮಾಜದ ಶಾಂತಿಯನ್ನೂ ಕಾಯುವುದು. ಮದುವೆ ಕುತ್ಸಿತನಾದ ಕಾಮನಿಗೆ ಸುಂದರ ರೂಪವನ್ನು ಕೊಡುವುದು. ಇದು ಉದ್ದಾಮ ಪ್ರವೃತ್ತಿಯ ಬಾಯಿಗೆ ಕಡಿವಾಣವು. ಬಹಳ ಹೇಳುವುದೇನು, ಇದು ಭೂಲೋಕವನ್ನು ಸ್ವರ್ಗದ ಮೇರೆಗೆ ಒಯ್ಯುವ ಸೋಪಾನ; ಪಶುಗಳಿಗೂ ಕಾಡುಜನರಿಗೂ ಮದುವೆ ಬೇಡ; ಆದರೆ ಮದುವೆ ಇಲ್ಲದ ಸ್ತ್ರೀಪುರುಷ ಸಮಾಗಮವನ್ನು ನಾಗರಿಕನು ಒಪ್ಪನು. ಮಹಾಭಾರತಕಾರನನ್ನು ಹಿಡಿದು ಯಾವ ಕವಿಯೂ ಮದುವೆ ಇಲ್ಲದ ಸ್ತ್ರೀಪುರುಷ ಸಮಾಗಮನ್ನು ತನ್ನ ಕಾವ್ಯದಲ್ಲಿ ಸೇರಿಸಲಿಲ್ಲ.

ಹೀಗೆ ಮದುವೆ ಪವಿತ್ರವೆಂದು, ಪ್ರಿಯವೆಂದು ತಿಳಿದ ಮನುಷ್ಯನಿಗೆ ದೇವದೇವಿಯರ ಮದುವೆಯೂ ಬೇಕು. ತುಲಸೀವಿವಾಹವನ್ನು ವರ್ಷವರ್ಷ ಮಾಡಿದರೂ ಮಾಡುವವರಿಗೆ ಅದರಲ್ಲಿ ಅಸಡ್ಡೆಯಿಲ್ಲ.

ಮದುವೆ ನಮಗೆ ಬೇಕು. ಮದುವೆಯ ಕಾವ್ಯವು ಅದಕ್ಕೂ ಹೆಚ್ಚಾಗಿ ಬೇಕು. ಪಾರ್ವತೀ ಪರಮೇಶ್ವರರ ಮದುವೆ ಕಲ್ಪಿತವಾಗಿದ್ದರೆ ಆಗಿರಲಿ, ಅದು ನಮಗೆ ಪ್ರಿಯವಾದುದು. ಮತ್ತೆ ಮತ್ತೆ ಅದನ್ನೋದಿ ಆನಂದಪಡುವುದಕ್ಕೆ ಅನುಕೂಲವಾದ ಮದುವೆಯ ಕಾವ್ಯವು ನಮಗೆ ಇನ್ನೂ ಹೆಚ್ಚಿಗೆ ಪ್ರಿಯವಾದುದು.

## ೫. ವಧೂವರರು.

ಗಿರಿಜಾಕಲ್ಯಾಣವು ಒಂದು ಮಹಾಕಾವ್ಯವು. ಇದರ ವಿಷಯವು ಪಾರ್ವತಿಯ ಮದುವೆ. ನಾಟಕವೂ ಮಹಾಕಾವ್ಯವೂ ಮಾನುಷ ಚರಿತ್ರೆಯ

ಅವಲಂಬನದಿಂದ ರಚಿತವಾಗುವವು. ನಾಟಕದಲ್ಲಿ ವ್ಯಕ್ತಿ-ಚರಿತ್ರ ಚಿತ್ರಣವು ಮುಖ್ಯವಾದುದು; ಆದರೆ ಮಹಾಕಾವ್ಯದಲ್ಲಿ ಚರಿತ್ರ ಚಿತ್ರಣವು ಅಷ್ಟೊಂದು ಮುಖ್ಯವಲ್ಲ. ಚರಿತ್ರವು ಸಾಗುತ್ತಿರುವಾಗ ಕವಿತ್ವವನ್ನು ಮೆರೆಯಿಸುವುದೇ ಅಲ್ಲಿ ಕವಿಯ ಗುರಿ. ಕವಿಯು ನಿಸರ್ಗ, ನಿಸರ್ಗ ವ್ಯಾಪಾರಗಳು, ಯುದ್ಧಾದಿಗಳು, ಮಾನವ ಮನೋಭಾವಗಳು ಮುಂತಾದುವುಗಳ ವರ್ಣನೆಗಳನ್ನು ಆ ಚರಿತ್ರೆಗೆ ಸಂಬಂಧಪಡುವಂತೆ ಮಾಡಿ, ಆ ವರ್ಣನೆಗಳಲ್ಲಿ ತನ್ನ ಕವಿತ್ವದ ಬೆಡಗನ್ನು ತೋರಿಸಲು ಅವಕಾಶವನ್ನು ಕಲ್ಪಿಸಿಕೊಳ್ಳುವನು.

ಗಿರಿಜಾಕಲ್ಯಾಣ ಕಾವ್ಯವು ಪಾರ್ವತೀಪರಮೇಶ್ವರರ ವಿವಾಹ ವೃತ್ತಾಂತವನ್ನವಲಂಬಿಸಿದುದು. ಪಾರ್ವತೀ ಪರಮೇಶ್ವರರು ದೇವದೇವಿಯರಾದರೂ ಕಾವ್ಯಗತವಾದ ಅವರ ಚರಿತ್ರವು ಮಾನುಷ ಚರಿತ್ರವೆ. ನಮ್ಮ ಮದುವೆಯಂತೆಯೇ ಅವರ ಮದುವೆ. ನಮ್ಮ ಮದುವೆಗೆ ಬೇಕಾಗುವ ಸಮಾಚಾರಗಳೇ ಅವರ ಮದುವೆಗೂ ಬೇಕು.

ಮದುವೆಯ ಕಾವ್ಯವೆಂದೊಡನೆ ಇದರಲ್ಲಿ ವಧೂವರರ ಪರಸ್ಪರಾನುರಾಗೋದಯ, ಅವರ ಸಂಘಟನೆಯ ಸಂದರ್ಭಗಳು, ಮದುವೆಯ ಘಟನೆ, ವಿವಾಹ ಸಮಾರಂಭ ಮೊದಲಾದ ಇಂತಹ ವಿಷಯಗಳೇ ಬರುವುವೆಂದು ಮೊದಲಿಗೆ ತೋರುವುದು. ಆದರೆ ಕಾವ್ಯವನ್ನು ಓದಲಾರಂಭಿಸಿದರೆ ಎಲ್ಲಿದೆ ಸಂಘಟನೆ? ಎಲ್ಲಿದೆ ಅನುರಾಗ? ಪುಟಗಳನ್ನು ಮಗುಚಿ ಹಾಕಿ ಬೇಸತ್ತರೂ ಮದುವೆಯ ಸಮಾಚಾರಗಳೇ ಇಲ್ಲ. ಮೂರನೆಯ ಆಶ್ವಾಸಕ್ಕೆ ಬಂದಾಗ ವಧುವಿನ ಜನ್ಮ ಬಾಲ್ಯಗಳ ವರ್ಣನೆಯೇನೋ ಬರುವುದು. ಆದರೆ ಇಡಿ ಕಾವ್ಯದಲ್ಲಿ ಮದುವೆಯ ವೃತ್ತಾಂತವು ಸ್ವಲ್ಪ; ಅದೂ ಕೂಡ ವಧುವಿನ ತಂದೆಯಾದ ಗಿರಿರಾಜನ ವರ್ಣನೆ, ಆ ಗಿರಿರಾಜನ ನಿವಾಸವಾದ *ಹಿಮಾಲಯದ ವರ್ಣನೆ, ಅದರ ಮೇಲಿನ ವನದ ವರ್ಣನೆ, ಅಲ್ಲಿ ನಡೆದ ಬೇಟೆಯ ವರ್ಣನೆ ಮುಂತಾದುವುಗಳಲ್ಲಿ ಹುದುಗಿಹೋಗಿದೆ. ಕೊನೆಯ ಮೂರು ಆಶ್ವಾಸಗಳಲ್ಲಿಯೇ ಮದುವೆಯ ಸಮಾಚಾರವು ಬರುವುದು. ಗಿರಿಜೆಯ ಮದುವೆಗೆ

---

*ಹಿಮವಂತನಿಗೆ ಎರಡು ರೂಪಗಳು. ಒಂದು ಮಾನವರೂಪ, ಇನ್ನೊಂದು ಪರ್ವತರೂಪ. ಶ್ರೀ ಶಿವಪುರಾಣ.

ಬೇಟೆ ಬೇಡ; ಆದರೆ ನಮ್ಮ ಮಹಾಕಾವ್ಯಕ್ಕೆ ಬೇಕು. †ಇದಲ್ಲದೆ ಈ ಬೇಟೆ ಹಿಮಾಚಲದ ಮೇಲೆ ನಡೆದಂತೆ ವರ್ಣಿತವಾಗಿದ್ದರೂ ಅದು ಎಲ್ಲಿ ನಡೆದ ಬೇಟೆಯೆಂದರೂ ಸಲ್ಲುವದು. ಅಲ್ಲಿ ಬೇಟೆ ಯಾವರೀತಿಯಿಂದಾದರೂ ನಡೆ ದಿರಲಿ ನಡೆಯದಿರಲಿ ಕವಿಗೆ ಅತ್ತ ಗಮನವಿಲ್ಲ; ಆ ವರ್ಣನೆ ಸರ್ವಾಂಗ ಸುಂದರವಾಗಬೇಕೆಂಬದೊಂದನ್ನೇ ಆತನು ಗಮನಿಸುವನು. ಬೇಟೆಯನ್ನು ಎಷ್ಟು ಬಗೆಯಿಂದ ವರ್ಣಿಸಬಹುದೋ ಅಷ್ಟು ಬಗೆಯಿಂದ ವರ್ಣಿಸದೆ ಆತನು ಸಮಾಧಾನಬಡುವುದಿಲ್ಲ. ಮದುವೆಯ ಕಾವ್ಯದಲ್ಲಿ ಬೇಟೆಯೇಕೆಂದು ಒಬ್ಬ ಮುಖ್ಯ ದೃಷ್ಟಿಯುಳ್ಳ§ ತೋಳಲಾಡಿದರೆ ಆತನಿಗೆ ನಮ್ಮ ಕಾವ್ಯಗಳ ಶ್ರವಣ ಪಠನಗಳು ಬೇಡ. ಉದ್ದಕ್ಕೆ ಸಾಗುವ (ಮದುವೆಯ) ಕಥೆಗಿಂತ ನಿಂತು ನಿಂತು ಸಾಗುವ ಮೆರವಣಿಗೆಯ 'ಮಜಲಿ' ನಂತಹ ಬೇಟೆಯ ವರ್ಣನೆ ಮುಂತಾದುವನ್ನು ಹೆಚ್ಚಿಗೆ ಮೆಚ್ಚುವವರೇ ಹಲವರು. ನಮ್ಮ ಕಾವ್ಯಗಳಲ್ಲಿ ಅರವಟ್ಟಿಗೆ ಬರಲೇಬೇಕು. ಅಲ್ಲಿ ನೀರನ್ನು ಹಾಕುವ ಬೆಡಗಿನ ಹೆಂಗುಸರು, ಅವರು ಹನಿಸುವ ನೀರಿಗೆ ಬಾಯನೀರಡಿಕೆ ಆರಿದರೂ ಅವರ ಬೆಡಗಿಗೆ ಕಣ್ಣ ನೀರಡಿಕೆ ಆರದ ಮರುಳ ದಾರಿಕಾರರು ಇವರನ್ನು ವರ್ಣಿಸದಿದ್ದರೆ ಅದೊಂದು ಲೋಪವೆಂದೇ ನಮ್ಮ ಕವಿಗಳು ಎಣಿಸುವರು. ಆದುದರಿಂದ ನಮ್ಮ ಕಾವ್ಯ ಗಳು ಇಂತಹ ಅನಾವಶ್ಯಕಗಳಾದ, ಆದರೆ ಸುಂದರವಾದ ಹಲವು ಅಂಗಗ ಳನ್ನು ಕಟ್ಟಿಕೊಂಡು ಬಹುಮಂಥರಗತಿಯಿಂದ ಸಾಗುವಂತಹುವು. ಗೆಜ್ಜೆ ಟೀಕೆಯ ಅಡ್ಡಿಕೆಯೊಳಗೆ ಹಾಯ್ದ ಎಳೆ ಮರೆಯಾಗಿರುವಂತೆ ವರ್ಣನೆಗಳ ಆಡಂಬರದಲ್ಲಿ ಕಥೆಯು ಮರೆಯಾಗಿರುವುದು.

ಈ ಕಾವ್ಯದ ನಾಯಕ ನಾಯಿಕೆಯರಾದ ಪಾರ್ವತೀ ಪರಮೇಶ್ವರರು ದಿವ್ಯರೂಪರು; *ಅತಿ ದಿವ್ಯರು! ಅವರ ಚರಿತ್ರಗಳು ಮನುಷ್ಯರಿಗೆ ಅನ್ವ ಯಿಸುವಂತಹುವೇ ಅಲ್ಲ; ಅತಿಮಾನುಷಿಕಗಳು. ನಾಯಿಕೆಗಿಂತ ನಾಯ

---

† ಮಹಾಕಾವ್ಯದ ಅಷ್ಟಾದಶವರ್ಣನಗಳನ್ನು ಸಾಹಿತ್ಯ ಶಾಸ್ತ್ರಕಾರರು ಹೇಳುವರು.

§ ಟಾಂಗದ ಕುದುರೆಯಂತೆ ಮುಖ್ಯವಾದ ಒಂದನ್ನೇ ನೋಡುವವ.

* ನಾಯಕರು ದಿವ್ಯ, ಅದಿವ್ಯ, ದಿವ್ಯಾದಿವ್ಯ ಎಂದು ತ್ರಿವಿಧರು. ದೇವತ್ವವುಳ್ಳವರು ದಿವ್ಯ ನಾಯಕರು. ಉ—ಶ್ರೀಕೃಷ್ಣ. ಮನುಷ್ಯರು ಅದಿವ್ಯರು; ಉದಾ:— ದುಷ್ಯಂತ. ದಿವ್ಯಾ ದಿವ್ಯ— ದೇವತ್ವವಿದ್ದರೂ ತಾನು ಮನುಷ್ಯನೆಂದು ತಿಳಿದವ. ಉದಾ:— ಶ್ರೀರಾಮಚಂದ್ರ.

ಕನು ಇನ್ನೂ ಹೆಚ್ಚಿಗೆ ಅತಿಮಾನುಷಿಕನು—ಅಲೌಕಿಕನು. ಕವಿ, ಇಂತಹ ಅಲೌಕಿಕ ಚರಿತ್ರಗಳನ್ನೇ ಮನುಷ್ಯಚರಿತ್ರೆಗೆ ಹೋಲುವಂತೆ ಮಾಡಿ ಹೇಳಿರುವನು. ನಾಯಕ ನಾಯಿಕೆಯರು ದಿವ್ಯರಾಗಿದ್ದರೂ ಅವರ ಚರಿತೆ ನಡುನಡುವೆಯಾದರೂ ಮಾನವ ಚರಿತ್ರೆಯಂತೆ ಇರದಿದ್ದರೆ ಆಕಾವ್ಯವು ವೇದವೋ ಪುರಾಣವೋ ಆಗಿಬಿಡಬಹುದು. ಆ ಅಲೌಕಿಕ ಅತಿ ದಿವ್ಯ-ನಾಯಕ ನಾಯಿಕೆಯರನ್ನು ಕೆಳಗಿಳಿಸಿ ಕೇವಲ ಮಾನವರನ್ನಾಗಿ ಮಾಡುವುದು ಸದ್ಭಕ್ತನಾದ ಕವಿಗೆ ಸೇರದು. ಕಾಲಿದಾಸನೇ ಆಗಲಿ, ಹರಿಹರನೇ ಆಗಲಿ ತಮ್ಮ ಆರಾಧ್ಯ ದೇವದೇವಿಯರನ್ನು ಕೇವಲ ಮಾನವ ರೂಪದಲ್ಲಿ ಚಿತ್ರಿಸಲು ಒಪ್ಪರು. ಇನ್ನು ಚರಿತ್ರವು ಮಾನವರೂಪದಲ್ಲಿ ಬಂದಹೊರತು ಕಾವ್ಯವು ಮಾನವನಿಗೆ ಪ್ರಿಯವಾಗದು. ಆದುದರಿಂದ ನಾಯಕ ನಾಯಿಕೆಯರ ಚರಿತೆ ಮಾನುಷ ದೈವಿಕ ಎಂಬೀ ತೊಡಕಿನಲ್ಲಿಯೇ ಈ ಕಾವ್ಯರಥವು ಸಾಗತಕ್ಕುದು. ಅದರ ಒಂದು ನೆಲೆ ಮಾನುಷಿಕವಾದರೆ ಇನ್ನೊಂದು ನೆಲೆ ಅತಿ ಮಾನುಷಿಕವು-ದೈವಿಕವು. ಇಂತು ಈ ಚರಿತೆ ದೈವಿಕವೂ ಅಹುದು, ಮಾನುಷಿಕವೂ ಅಹುದು. ಈ ದಿವ್ಯ ಮಾನುಷ ಚರಿತೆಗಳನ್ನು ಬೆರಕೆ ಮಾಡಿದರೂ ಅವುಗಳ ಹೊಂದಿಕೆ ಮಾಡಿ ಕಾವ್ಯದ ಸೊಬಗನ್ನು ಹೆಚ್ಚಿಸುವುದು ಮಹಾಕವಿಯ ಜಾಣ್ಮೆ. ಶಾಕುಂತಲದ ನಾಯಕ ನಾಯಿಕೆಯರು ಮನುಷ್ಯರು. ಆದರೆ ಅವರ ಚರಿತೆಯಲ್ಲಿ ದಿವ್ಯತೆ *ಕೂಡಿಕೊಂಡಿದೆ. ಶಕುಂತಲೆ, ದುಷ್ಯಂತನ ಓಲಗದದಿಂದ ಒಮ್ಮೆಲೆ ಅಂತರ್ಧಾನ ಹೊಂದುವಳು. ಇಂದ್ರಸಾರಥಿ ಮಾತಲಿಯು ದುಷ್ಯಂತನನ್ನು ಅದೇ ದೇಹದಲ್ಲಿ ಸ್ವರ್ಗಕ್ಕೆ ಕರೆದೊಯ್ದು ಮರಳಿ ಭೂಲೋಕಕ್ಕೆ ತಂದಿಳಿಸುವನು. ದುರ್ವಾಸ ಋಷಿಯ ಶಾಪದಿಂದ ದುಷ್ಯಂತನು ತಾನು ಮಾಡಿಕೊಂಡ ಮದುವೆಯನ್ನೇ ಮರೆಯುತ್ತಾನೆ. ದೃಶ್ಯಪ್ರಬಂಧಗಳು ಕೂಡ ಹೀಗೆ ದಿವ್ಯ ಚರಿತಗಳಿಂದ ಕೂಡಿಕೊಂಡಿರುವಾಗ ಪುರಾಣ ಕಲ್ಪವಾದ, ದಿವ್ಯ ನಾಯಕ ನಾಯಿಕೆಯರ ಗಿರಿಜಾ ಕಲ್ಯಾಣದಂತಹ ಶ್ರವ್ಯ ಕಾವ್ಯವು ಅದನ್ನು ಬಿಡದಿರುವುದು ಅರಿದಲ್ಲ.

**೬. ವಧೂವರರಲ್ಲಿ ಕಾಣಬರುವ ಅತಿಶಯ (ಅಲೌಕಿಕತೆ):—**

ಮೊದಲಿಗೇ ನೋಡಿರಿ. ಕಥಾನಾಯಿಕೆಯಾದ ಪಾರ್ವತಿಯ ಜನನ ವರ್ಣನೆಯನ್ನು. ಆಕೆ ಜನ್ಮಾಂತರ ಸ್ಮರಣವುಳ್ಳಾಕೆ; ಇದಲ್ಲದೆ ಆಕೆಗೆ

ಶಿವನೊಡನೆ ಸಾಮರಸ್ಯದ ಜ್ಞಾನ. ಇದೇ ಈಗ ಶಿವನನ್ನಗಲಿ ಬಂದವಳಂತೆ ಆಕೆಗೆ ಅತ್ತಕಡೆಯ ಧ್ಯಾನ. ದೇವೋನ್ಮಾದದಲ್ಲಿರುವವಳಂತೆ ಹುಟ್ಟಿದ ಹುಡಿಗೆ ಶಾರೀರಿಕ ಅಸ್ವಸ್ಥತೆ ಇಲ್ಲದಿದ್ದರೂ ಕಣ್ಣನ್ನೇ ತೆರೆಯಳು. ಇದೀಗ ಮಾನವ ತನದ ಮೇರೆಯನ್ನು ಮೀರಿದ ಚರಿತೆ.

ಶಿವಲಿಂಗೇಕ್ಷಣ ಲೋಲುಪೆ |
ಶಿವಪ್ರಸಾದಾತ್ತಚಿತ್ತೆ ಶಿವಶಕ್ತಿಶಿವೋ |
ತ್ಸವೆ ಶಿವ ಪುಣ್ಯಾಂಭೋನಿಧಿ |
ಶಿವನಂ ನೆರೆ ಸಚ್ಚಿಮುಚ್ಚಿ ಕಣ್ಮುಚ್ಚಿರ್ದಳ್ || ೩. ೪೯.

ಶೈಶವ ಬಾಲ್ಯಗಳೂ ಹೀಗೆಯೇ. ಪುಲಿಯುಗುರು, ಅರಳೆಲೆ, ಮಾಗಾಯಿ, ಗೆಜ್ಜೆಯ ಕಡಗಗಳನ್ನಿಟ್ಟ ಶಿಶು, ತಾಯ ಮೊಲೆವಾಲನ್ನು ಮರೆತು ಶಿವಾಲಯಕ್ಕೆ ಪರಿಪರಿದು ಹೋಗುವುದು! ಶಿವಪೂಜೆಯ ಆಟಗಳೇ ಆ ಬಾಲೆಯ ಆಟಗಳು; ಆ ಬಾಲೆಯ ಶಿವಭಕ್ತಿಯ ಏಕಾಗ್ರತೆ ಅನಿರ್ವಚನೀಯವಾದುದು- ವಿರೂಪಾಕ್ಷ ಪೂಜೆಗೆ ತೊಡಗಿದಳೆಂದರೆ—

ಬರೆದರೊ ಬೈತರೊ ಪೊಲ್ದರೊ ।
ಪೊರೆದರೊ ಬೆಚ್ಚರೊ ಮರ ಮರವ್ವೆ ಕರುವಿಟ್ಟರೋಕಂ |
ಡರಿಸಿದರೊ ಕಡೆದರೋ ಎನೆ |
ಗಿರಿರಾಜ ತನೂಜೆ ಪೂಜೆಯೊಳ್ ರಾಜಿಸುವಳ್ ||
* ೩. ೧೦೨

* ರಸಿಕಕವಿ ಭವಭೂತಿಯ ಮಾಲತೀ ಮಾಧವದೊಳಗಿನ ಮಾಧವನು ತನ್ನ ಪ್ರಿಯೆಯಾದ ಮಾಲತಿ ತನ್ನ ಚಿತ್ತಭಿತ್ತಿಯಲ್ಲಿ ಹೇಗೆ ನೆಲಸಿರುವಳೆಂಬುದನ್ನು ಹೇಳುತ್ತಾನೆ. ಆ ಶ್ಲೋಕದ ನೆನಪು ಇಲ್ಲಿ ಆಗುವುದು.

लीनेव प्रतिबिंबितेवलिखितेवोत्कीर्णरूपेवच ।
प्रत्युप्तेवच वज्रलेपघटितेवान्तर्निखातेवच |
सा नश्चेतसिकीलितेवविशिखैश्चेतोभुवः पञ्चभि-
श्चिन्तासन्तति तन्तुजालनिबिडस्यूतेव लग्ना प्रिया ||

ಇಂದೆಂತಹ ಧ್ಯಾನ ! ಎಂತಹ ಏಕಾಗ್ರತೆ ! ಅದೂ ಕೌಮಾರ ಬಾಲ್ಯದಲ್ಲಿ!

ಯೌವನದಲ್ಲಿಯೂ ಇದೇ ಸ್ಥಿತಿ. ಪಾರ್ವತಿ ಪ್ರಾಯಕ್ಕೆ ಬರಲು ಒಮ್ಮೆ ನಾರದ ಮುನಿ ಬಂದು ಮೇನಾದೇವಿಗೂ ಗಿರಿರಾಜನಿಗೂ—"ನಿಮ್ಮ ಮಗಳು ಈಕೆ ಸಾಮಾನ್ಯಳಲ್ಲ; ವಿರೂಪಾಕ್ಷನ ಅರ್ಧಾಂಗಿ ! ಆತನಿಗೇ ಈಕೆಯನ್ನು ಸಲಿಸಿರಿ'' ಎಂದು ಹೇಳಿಹೋದನು. ಅಷ್ಟಕ್ಕೆಯೆ ಪಾರ್ವತಿ ತಂದೆಯನ್ನು ಮುಂದೆ ಮಾಡಿಕೊಂಡು ವರನು ವಾಸಮಾಡಿದ್ದ ಹೇಮಕೂಟ ಗಿರಿಗೆ ಬರುವಳು. ಇಷ್ಟೇ ಅಲ್ಲ ಭಾವಿಪತಿಯ ಸೇವೆಗಾಗಿ ತಾನೊಬ್ಬಳೇ (ಇಬ್ಬರು ಸಹಚರಿಯರೊಡನೆ) ಅಲ್ಲಿ ನಿಲ್ಲುವಳು— ಈ ಇಪ್ಪತ್ತನೆಯ ಶತಾಬ್ದಿಯಲ್ಲಿಯೂ ಕನ್ಯಾವರ ಪ್ರರೋಚನವಿಧಾನದಲ್ಲಿ *ಕನ್ನೆಯು ಇಷ್ಟೊಂದು ದಿಟ್ಟತನವನ್ನು ತೋರಿಸುವುದು ಕಾಣಿಸದು.

ವರನೋ ! ಪಾರ್ವತಿಯನ್ನು ಮದುವೆಯಾಗಬೇಕೆಂದು ತನ್ನ ಮನೆಯಿಂದ (ಕೈಲಾಸದಿಂದ) ಹೊರಟು (ಹಿಮಾಚಲಕ್ಕೆ ಇಲ್ಲವೆ ಹರಿಹರನ ಪ್ರೀತಿಯ ಸ್ಥಳವಾದ ಹೇಮಕೂಟಕ್ಕೆ) †ಬಂದವನಿಗೆ ಆದರ ಅರಿವೇ ಇಲ್ಲ. ಅಲ್ಲಿಯೇ ಗಾಢವಾದ ತಪಸ್ಸಿನಲ್ಲಿ ಮಗ್ನನಾಗಿ ಬಿಡುವನು; ಇತ್ತ ಕಡೆಯ ಎಚ್ಚರೇ ಇಲ್ಲ—

ಮಾತಿನ ವೇಧೆಯ ಬೋಧೆಯ |
ಭೂತಾದಿಯ ಪಂಚ ವಿಂಶತಿಗಳಂ ಮೀರಿ |
ಜ್ಞಾತೃ-ಜ್ಞಾನ-ಜ್ಞೇಯ
ವ್ರಾತಮನಳಿದುಳಿದು ತಾನೆ ತಾನಾಗಿರ್ದಂ || ೫. ೩೬

ಪೊರಗಂ ಬಳಸದ ಮಾಯೆಗೆ |
ತೆರಹಂ ಕುಡುದಚ್ಚಬಚ್ಚ ಬರಿಯರಿವಿನ ಸೈ |
ವೆರಗಿನ ಮರಹಿನ ಕುರುಹಿನ |
ಕರೆಗೊರಲಂ ನಿಜಸಮಾಧಿಯೊಳ್ ಸಂದಿರ್ದಂ ||೫. ೩೮.

---

* ಒಬ್ಬರನ್ನೊಬ್ಬರು ಸೇರುವಂತೆ, (ಕಣ್ಣಪ್ರೀತಿ ಹುಟ್ಟುವಂತೆ) ಮಾಡುವುದು.

† ಶಿವಪುರಾಣ ಪಾರ್ವತೀಖಂಡ ಅಧ್ಯಾ. ೯. ಶಿವನು ಪಾರ್ವತಿಯ ಪ್ರಾಪ್ತಿಗಾಗಿ ಹಿಮಾಚಲಕ್ಕೆ ಬರುವನು. ಅಲ್ಲಿ ತಪಸ್ಸಿಗೆ ಕುಳ್ಳಿರುವನು.

ಜಗದ್ವಿಲಕ್ಷಣಸ್ಥಿತಿ ! ತನ್ನಬಳಿಗೆ ಬಂದ ಭಾವಿಶ್ವಶುರನನ್ನು ಸತ್ಕರಿಸುವ ಲೌಕಿಕತೆ ಇನ್ನೆಲ್ಲಿ ಬಂದೀತು ?

ಲೋಕದಲ್ಲಿ ವರನು ಕನ್ಯೆಯನ್ನು ನೋಡುವುದಕ್ಕೆ ಹೋಗುವ ವಾಡಿಕೆಯಿದ್ದರೆ ಇಲ್ಲಿ ಕನ್ಯೆಯೇ ವರನನ್ನು ನೋಡುವುದಕ್ಕೆ ಹೋಗುವಳು. ಅಲ್ಲಿ ತಂದೆ ಮಗಳಿಗೆ ವರನನ್ನು ತೋರಿಸುವನು. ಕನ್ಯೆ ವರನ ಪ್ರಥಮ ದರ್ಶನದಲ್ಲಿಯೇ—

ಶಿವನೀತಂ ನಿಜವಲ್ಲಭಂ ಮಮ ಗುರು ಪ್ರಖ್ಯಾತನತ್ಯೂರ್ಜಿತಂ |
ಭವನೆನ್ನಾಳ್ದನೆನಿಪ್ಪುದಂ ತಿಳಿದೆನಾಂ ನೀಂ ಪೋಗು ನಿತ್ಯಾರ್ಚನೋ |
ತ್ಸವದಿಂ ಸಂತಸದಿಂ ಸದಾತುರತೆಯಿಂ ಸಾನಂದದಿಂದಿರ್ಪೆನೆಂ |
ದು ವಿಳಾಸಾಬ್ಧಿ ಭವಾನಿ ನೋಡಿ ನುಡಿದಳ್ ಭೂಭೃತ್ಕುಲಾಧೀಶನೊಳ್ || ೫–೪೪.

ತನಗೆ ಗುರುತು ಸಿಕ್ಕಿತೋ ಎಂಬಂತೆ ನುಡಿಯುತ್ತಾಳೆ— ಈತಂ ಎನ್ನ ವಲ್ಲಭಂ; ನೀಂ ಪೋಗು, ಆನಂದದಿಂದಿರ್ಪೆಂ ಎಂದು ತಂದೆಗೆ ಹೇಳಿ ಆತನಿಗೆ ಹೋಗಲಪ್ಪಣೆ ಕೊಡುವಳು ! ಇದು ದಿಟ್ಟತನವೋ ? ವರನೊಡನೆ ಇದ್ದ ಪೂರ್ವಸ್ನೇಹದ ವಿಸ್ರಂಭವೋ ?

ಇನ್ನು ವರನನ್ನು ಮದುವೆಗೆ ಹುರಿಗೊಳಿಸುವುದೂ ಈ ಕನ್ಯೆಯ ಕೆಲಸವೇ. ವೈರಾಗ್ಯಮಗ್ನನಾಗಿ ಭಸಿತಕಾಯನಾಗಿ ತಾನೇ ತಾನಾಗಿರ್ದ ವರನನ್ನು ಸಂಸಾರದ ದಾರಿಗೆ ತರುವ ಕೆಲಸವನ್ನು ಕನ್ಯೆ ತಾನೇ ಕೈಕೊಂಡಳು. ಶಿವನ ಒಲವನ್ನು ಆಕೆಯೇ ಬಲ್ಲಳು. ಈ ಕೆಲಸದಲ್ಲಿ ಆಕೆಯ ದಾರಿಯು ವಿಲಕ್ಷಣವಾಗಿಯೇ ಇದೆ. ಆಕೆ ಮನದಲ್ಲಿ—

ಬಗೆವೊಡೆ ಸಾತ್ವಿಕ ಶಿವಭ |
ಕ್ತಿಗಲ್ಲದಭವಂ ಸಮಂತು ಸಿಲ್ಕಂ ನಿಲ್ಕಂ || ೫–೪೯.

ಎಂದು ನಿರ್ಣಯಿಸುವಳು.

ನೋಡಿರಿ— ಎಲ್ಲಿಯ ಕಾಮಮೂಲಕವಾದ ಮದುವೆ, ಎಲ್ಲಿಯ ವಿರಕ್ತಿಮೂಲಕವಾದ ಸಾತ್ವಿಕಭಕ್ತಿ ! ಮದುವೆ ಮಾಡಿಕೊಳ್ಳಲು ಹೊರಟವಳಿಗೆ ಸಾತ್ವಿಕಭಕ್ತಿ ಏತಕ್ಕೋ ?

ಮತ್ತೆ ಆಕೆ ಆಲೋಚಿಸುವುದೇನೆಂದರೆ,

ಅದು ಕಾರಣದಿಂ ಭಕ್ತಿ |
ಪ್ರದನ ವಿರೂಪಾಕ್ಷನಂಘ್ರಿಗಳನರ್ಚಿಸುವೆಂ ||
ಸದಮಳ ಶಿವಸುಖ ಮುಖ ಸಂ |
ಪದದೊಳ್ ಬಳಿಕಿರ್ಪೆನಪ್ಪಿಶರ್ವನ ತನುವಂ || ೫-೫೦.

ಮೊದಲು ಸಾತ್ವಿಕಭಕ್ತಿಯನ್ನು ತೋರಿ ಆತನನ್ನು ಒಲಿಯಿಸಿಕೊಂಡು ಬಳಿಕ ಆತನ ವಾಮಾಂಗವನ್ನೇ ಸೂರೆಗೊಳ್ಳುವೆನೆಂದೆನ್ನುವಳು. ಆ ಹಿಡಿತ ವನ್ನು ಆ ದೇವಿಯೇ ಬಲ್ಲಳು. ನೋಡಿ– ಅದಕ್ಕಾಗಿ ಆಕೆ ಎಂತಹ ಸೇವೆ ಯನ್ನು ಮಾಡಲಾರಂಭಿಸಿದಳು! ದಿನದಿನವೂ ಸೇವಂತಿ, ಇರವಂತಿ, ಪಾದರಿ, ಪಡ್ಡಳಿ, ಮಲ್ಲಿಗೆ, ಸಂಪಿಗೆ, ಜಾಜಿ, ತಾವರೆ ಮೊದಲಾದ ಹೂಗಳು, ಮರುಗ, ಮಡಿವಾಳಮುಂ. ಪತ್ರಗಳು ಇವುಗಳನ್ನಾಯ್ದು ತರುವುದು; ಅವುಗಳ ಅಲಂಕಾ ಳನ್ನು ಕಟ್ಟುವುದು; ಬಳಿಕ ತಾನು— "ಸೇವಂತಿಗೆಯ ಪನಿನೀರಿಂದೆ ಮಜ್ಜ ನಂಗೆಯ್ದು, ಪರಾಗದ ಅಂಗರಾಗಮಂ ಅಮರ್ಚಿ, ತಾವರೆಯ ನೂಲ ದುಕೂ ಲಮಂ ಉಟ್ಟು, ಕದಂಬ ಕುಸುಮಮಂ ಸಿರಿಮುಡಿಯೊಳ್ ತುರುಂಬಿ ಕೇತ ಕಿಯ ಸಣ್ಣನಪ್ಪನುಣ್ಣೆಸಳ ಕರ್ಣಪತ್ರಮಂ ಇಕ್ಕಿ, ಮಕರಂದದ ತಿಲಕಮಂ ಇಟ್ಟು, ಪುಷ್ಪಮಂಜರಿಯ ಕರ್ಣಾವತಂಸಮಂ ಅಳವಡಿಸಿ, ಮಲ್ಲಿಗೆಯ ನನೆಯ ಏಕಾವಳಿಯಂ ಮುತ್ತಿನ ಹಾರದೊಳಡಗೂಡಿ, ಮೊಲ್ಲೆಯ ಮುಗು ಳ ಕಂಕಣಮಂ ಕೈಗೊಳಿಸಿ . . . . . (೫-೭೭) ಇಂತು ಸಿಂಗರಿಸಿಕೊಳ್ಳು ವುದು. ತರುವಾಯ ತಾನು ಕಟ್ಟಿಟ್ಟ ಹೂದೊಡವುಗಳನ್ನು ತನ್ನ ಕಾಂತನಿಗೆ ಹಾಕುವುದು, ಬಿಡಿಹೂಗಳನ್ನು ಆತನ ಬಳಿಯಲ್ಲಿ ಸುರಿಯುವದು; ಹೂಗ ಳನ್ನು ಸುರಿಯುವಾಗ ಅದು,

ಇರುಳುಂ ಪಗಲುಂ ಕಾಮಂ |
ತರದಿಂ ತೆಗೆದೆಚ್ಚ ಕುಸುಮಬಾಣಮಿದೆಂದಾ ||
ಗಿರಿಶಂಗೆ ತೋರ್ಪ ತೆರದಿಂ |
ನೆರಪಿದಳಭವಾಂಘ್ರಿಗಳ್ಗೆ ಪುಷ್ಪಾಂಜಲಿಯಂ || ೫-೭೭.

ಹೀಗೆ ತೋರುತ್ತಿದೆ; ಪೂಜೆಯಂತೆ ತೋರುವುದಿಲ್ಲ. ಮತ್ತು—

ಊರುದ್ವಯದೊಳ್ ಕರದೊಳ್ |
ಚಾರು ಭುಜಾಗ್ರಂಗಳೊಳ್ ಸುಬಾಹುಗಳೊಳ್ವು ||
ಣ್ಯೋರಃ ಸ್ಥಳದೊಳ್ ಗಿರಿಸುತೆ |
ಹಾರೈಸುತೆ ಕುಸುಮಮಾಲೆಯಂ ಪಸರಿಸಿದಳ್ || ೫-೮೧.

ಹೀಗೆ ಮೈಮುಟ್ಟಿ ಕೈಮುಟ್ಟಿ ಮಾಲೆಗಳನ್ನು ತೊಡಿಸುವಾಗ ಆಕೆಯ ಮನಸ್ಸು ಸ್ಥಿರವಾಗಿಲ್ಲ—

ತವ ತವಗೆ ಮುಂಚುವಿಂದ್ರಿಯ |
ನಿವಹಮನೋವೃತ್ತೆ ಗಿರಿಜೆ ಹರಕಂಧರದೊಳ್ ||
ನವಕುಸುಮ ಮಾಲೆಯಂ ಸಾ |
ರ್ಚುವ ನೆವದಿಂ ಸೋಂಕಿ ಸೋಂಕಿ ಪುಳಕಿಸುತಿರ್ದಳ್|| ೫-೮೨

ಈ ಭಕ್ತಿಯ (?) ಪೂಜೆಯಲ್ಲಿ ಇನ್ನೂ ಚಮತ್ಕಾರವಾದ ಉಪಚಾರಗಳು ನಡೆಯುವವು. ವರನಿಗೆ ತನ್ನ ನರುಸುಯ್ಯ ಧೂಪ," (೫-೮೩) ತನ್ನ ನಗೆಮೊಗದ ಕಾಂತಿಯ ಆರತಿ ! (೫-೮೪), ತನ್ನ ದೃಷ್ಟಿಗಳ ಮಂತ್ರಪುಷ್ಪಾಂಜಲಿ ! (೫-೮೬).

ಇಂತಹ ವಿಲಕ್ಷಣವಾದ (ಪ್ರೇಮಮಯವಾದ) ಪೂಜೆಯ ಕಾಲದಲ್ಲಿ ಆಕೆಯ ಮನೋವಿಕಾರಗಳು ಸ್ಫುಟವಾಗುತ್ತಿವೆ.

ಬೆಮರ್ವಳ್ ಬೆರ್ಚುವಳುರ್ಬುವ |
ಳಮರ್ವಳ್ ಪೆರಸಾರ್ವಳಂಜಿ ನಿಲ್ವಳ್ಸೋಂಕಲ್ ||
ನಿಮಿರ್ವಳ್ ನೆನೆವಳ್ ಮುನಿವಳ್ |
ಸಮಸಲ್ವಳ್ ಗಿರಿಜೆ ಸೆಡೆದು ಸುಯ್ವಳ್ ಕಾಯ್ವಳ್ || ೫-೮೩

ಎಷ್ಟೆಷ್ಟೋ ಮನೋಭಾವಗಳ ಕದಲಾಟ ! ತಾಕಲಾಟ ನಡೆದಿದೆ. ಇಂತಹ ಪೂಜೆಯನ್ನು ಪೂಜೆಯೆಂದು ಆರು ಹೇಳುವರು ? ಪ್ರೌಢಕಾಂತೆ ಕಾರಣಾಂತರದಿಂದ ಮುನಿದಂತಿರುವ ಕಾಂತನನ್ನು ರ . . . . . ಗೆ ಅನುನಯಿಸುವ ಕಾಮಸೇವೆಯಿದು ಎನ್ನುವಂತಿದೆ. ಮದುವೆಯಾಗದಿರುವಾಗಲೇ ವರನೊಡನೆ ವಧು ಹೀಗೆ ನಡೆದುದನ್ನು ನಾವು ಕಂಡೂ ಕೇಳ್ದೂ ಅರಿಯೆವು. ಸಾತ್ವಿಕ ಭಕ್ತಿಯಿಂದ ಶಿವನನ್ನು ಒಲಿಯಿಸಿಕೊಳ್ಳುವೆನೆಂಬ ಸಂಕಲ್ಪದಿಂದ

ಇಂತಹ ಪೂಜೆಯನ್ನು ಮಾಡುವುದರ ರಹಸ್ಯವನ್ನು ಸಾತ್ವಿಕ ಭಾವೋನ್ಮತ್ತೆಯಾಗಿ ಪರಮಾತ್ಮನಿಗೆ ಭಕ್ತಿಯ ಆರೋಗಣೆಯನ್ನು ಸಲಿಸಬಲ್ಲ (೫-೮೫) ಆ ಶಿವಪತ್ನಿಯೇ ಬಲ್ಲಳು.

ಯುವತಿಯ ಇಂತಹ ಸೇವೆ ನಡೆದರೂ ವರನು ನಿಶ್ಚಲ; ಕೇವಲ ಸ್ಥಾಣು! ಪಾರ್ವತಿ ವರನನ್ನು ದಾರಿಗೆ ತರುವ ಕೆಲಸದಲ್ಲಿ ಯಶವು ದೊರೆಯದೆ ಇರುವಾಗ ಈ ಕೆಲಸಕ್ಕಾಗಿಯೇ ದೇವತೆಗಳಿಂದ ಪ್ರೇರಿತನಾದ ಕಾಮನು ಅಲ್ಲಿಗೆ ಬಂದು ಆತನೂ ಕೈಸಾಗದೆ ಇರುವನು. ಪಾರ್ವತಿ ತನ್ನ ಕೆಲಸಕ್ಕಾಗಿ ಆತನಿಗೆ ಉತ್ತೇಜನ ಕೊಡುವಳು.

ನಾನಾವಿಧದಿಂ ರುದ್ರನ |
ನೂನ ತಪೋಭರದ ಬೆಸುಗೆಯಂ ಬಿಡಿಸೊಲವಿಂ ||
ಶ್ರೀನಂದನ ನೀನಂಜದಿ |
ರಾನಿರ್ದಪೆನಾನೆ ರಕ್ಷೆಯಾಗಿ ಸಹಾಯಮ್ || ೮–೧೮.

ನೀನು ಅಂಜದಿರು, ನಾನು ಇರುವೆನು, ಎಂದು ಆಶ್ವಾಸನವೀಯುವಳು. ತನಗೆ ಬೇಡಾದ ಕೆಲಸದಲ್ಲಿ ಪತಿ ತೊಡಗಿದ್ದರೆ, ಸೇರದೆ ವಿಘ್ನವನ್ನೊಡ್ಡುವ ಪುರುಡಿನ ಹೆಂಡತಿ. ಪತಿಯ ಅಂಜಿಕೆ ಮುರಿದ ಪ್ರೌಢಪತ್ನಿ.

ಏನಾದರೂ ಸ್ಥಾಣು ಸ್ಥಾಣುವೇ. ಕೊನೆಗೆ ಹರಿ ವಿರಿಂಚ್ಯಾದಿಗಳ ಮನದ ಬಯಕೆಯೂ ಕಂದರ್ಪನ ಪಂಚಬಾಣಾನುಸಂಧಾನವೂ ಪಾರ್ವತಿಯ ಮನೋರಥವೂ ಮುಪ್ಪುರಿಗೊಂಡು ಸಂಸಾರಕ್ಕೆಳೆಯಲು, "ತಪೋಭರದ ಬಿಸುಗೆ ಬಿಡುವಂತೆ ಕಣ್ಣ ಸಂಪುಟಂ ಬಿರ್ಚಿದ" ಆ ಭೂತೇಶ್ವರನು— "ಆನೇಕೆ! ಈ ಮಾನಿನಿ ಏಕೆ! ಈ ತಾಪಂ ಎಲ್ಲಿಯದು? ಎತ್ತಣಿಂ ಬಂದುದು? ಆರಿಂದಾದುದು?" ಎಂದು ಕಾಮನಿರ್ಪ ವಾಮಭಾಗಮಂ ಕೋಪದಿಂದ ನೋಡಲು ಗಗನದಲ್ಲಿ ನಿಂತಿದ್ದ ಹರಿ ಸುರಪತಿ ಪ್ರಮುಖದೇವತೆಗಳು "ಮಹೇಶ ಕರುಣಿಪುದು" (क्रोधं प्रभो संहर संहर) ಎಂದು ಬೇಡಿಕೊಳ್ಳುತ್ತಿದ್ದರೂ ಹಣೆಗಣ್ಣುರಿಯಿಂದ ಆ ಕಾಮನನ್ನು ಕ್ಷಣಾರ್ಧದಲ್ಲಿ ಸುಟ್ಟು ಬೂದಿಮಾಡಿಬಿಟ್ಟನು. ಮತ್ತು ಮೊದಲಿನ ಭಸ್ಮಲೇಪದ ಮೇಲೆ ಮತ್ತೆ ಕಾಮದಹನಭಸ್ಮವನ್ನು ಬಳಿದುಕೊಂಡು—

ಮುಂತಿರ್ದೊಪ್ಪುವ ಗಿರಿಜಾ |
ಕಾಂತೆಯನೀಕ್ಷಿಸದೆ ನುಡಿಯಿಸದೆ ಸೋಂಕದೆನಿ |
ಶ್ಚಿಂತಂ ಸ್ವತಂತ್ರ ನಹಿಧರ |
ಸಂತರ್ಧಾನಕ್ಕೆ ಸಂದಂ ...................... || ೮. ೫೩.

ಎಲ್ಲಿಯೋ ಹೊರಟೇ ಹೋದನು ! ಏನೋ ಗಾದೆಯ ಮಾತನ್ನು ಹೇಳುತ್ತಾ ರಲ್ಲವೇ– ಕರೆದು ಹೆಣ್ಣುಕೊಟ್ಟರೆ ಅಳಿಯನಿಗೆ ........! ಇಲ್ಲ ; ಆತನಿಗೆ ಹೆಂಗುಸರ ಸೇವೆಯೇ ಸೇರದು; *ಅದಕ್ಕಾತನು ಒಲಿಯನು. ಆ ಶೂಲಿ ಮೆಚ್ಚು ವುದು ಮೈಯನ್ನು ಕೊರಗಿಸುವ ಉಗ್ರತಪಕ್ಕೆ !

ಇನ್ನು ಪಾರ್ವತಿಯು ತಪಕ್ಕೆ ನಿಲ್ಲುವಳು– ಆಕೆಯ ಗರಿಗರಿಯಾದ ಕೇಶ ಪಾಶವು ಜಡೆಯಾಯಿತು; ಅಂಗರಾಗದ ಸ್ಥಳದಲ್ಲಿ ಭಸಿತವು; ದುಕೂ ಲದ ಸ್ಥಳದಲ್ಲಿ ನಾರ ಸೀರೆ; ಹಾರಗಳ ಸ್ಥಳದಲ್ಲಿ ರುದ್ರಾಕ್ಷಮಾಲೆಗಳು. ಬೇಸ ಗೆಯ ಪಂಚಾಗ್ನಿ ತಪ, ಮಳೆಗಾಲದ ತರುತಳತಪ, ಚಳಿಗಾಲದ ಉದವಾಸ ತಪ. ಈ ತಪದ ತಾಪಕ್ಕೆ ಶಿವನ ಎದೆ ಕರಗಿತು; ಮನಸ್ಸಿನಿಂದ ಪಾರ್ವತಿ ಯನ್ನು ಸ್ವೀಕರಿಸಿದನು. ಆದರೂ ಆಕೆಯ ಮನವನ್ನು ಪರಿಕಿಸಿ ನೋಡುವ ಆಸೆ. ಅದೇಕೋ ? "ವಿಶ್ವತಶ್ಚಕ್ಷು" ಎನಿಸಿದ ದೇವದೇವನು ಮಾನವನ ಹೃದಯ ಗುಹೆಯ ಕತ್ತಲೆಯನ್ನು ಭೇದಿಸಿ ನೋಡಲಾರನೇ ? ನೋಡಬ ಲ್ಲನು ! ಆದರೆ ಅದೊಂದು ಲೋಕಲೀಲೆ.

## ೭. ವಿವಾಹದ ಪಂಚಸಂಧಿಗಳು:—

ನಮ್ಮ ಮದುವೆಯೇ ಆಗಲಿ ದೇವ ದೇವಿಯರ ಮದುವೆಯೇ ಆಗಲಿ ಅವು ನಾಟಕದಂತೆ ಮುಖ, ಪ್ರತಿಮುಖ, ಗರ್ಭ, ವಿಮರ್ಶ ಉಪಸಂಹಾರ ಎಂಬ **ಪಂಚಸಂಧಿಗಳಿಂದ** ಕೂಡಿದುದು. ಈ ನಾಟಕದಲ್ಲಿ ಪಾರ್ವತೀ ವಿವಾ ಹವೇ ಕಾರ್ಯವು(ಫಲವು). ಈ ಕಾರ್ಯದ ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಾಗಮ ಎಂಬೀಐದು ಅವಸ್ಥೆಗಳು ಕ್ರಮದಿಂದ ಮೇಲೆಹೇ ಳಿದ ಐದುಸಂಧಿಗಳಲ್ಲಿ ತೋರಿಬರುವುವು. ಪಾರ್ವತಿಯಲ್ಲಿ ಹರನನ್ನು ಕುರಿತ, ಹುಟ್ಟಿದಾಗಲೇ ಹುಟ್ಟಿದ ಒಲವೂ, ಹರನು ಪಾರ್ವತಿಯನ್ನು ಮದುವೆಯಾ ಗುವ ಉದ್ದೇಶದಿಂದ ಹೇಮಕೂಟಕ್ಕೆ ಬಂದು ನಿಲ್ಲುವುದೂ ಮುಖಸಂಧಿ;

---

* स्त्रीसन्निकर्षं परिहर्तुमिच्छन् अन्तर्दधे भूतपतिः सभूतः ॥ कु. सं. ३ ७४.

ಕಾರ್ಯದ ಆರಂಭವನ್ನು ಹೇಳಿದುದರಿಂದ. ನಾರದ ವಚನದಿಂದ ಗಿರಿರಾಜನು ಪಾರ್ವತಿಯನ್ನು ಶಿವನಿಗೆ ಸಮರ್ಪಿಸಬೇಕೆಂದು ಸಂಕಲ್ಪಿಸುವುದೂ, ಪಾರ್ವತಿ, ಹೇಮಕೂಟದಲ್ಲಿ ಶಿವನ ನಿತ್ಯಪೂಜೆಯಲ್ಲಿ ನಿರತೆಯಾಗುವುದೂ, ಆ ಪೂಜೆಗೆ ಶಿವನು ಒಪ್ಪಿಗೆ ಕೊಡುವುದೂ ಪ್ರತಿಮುಖಸಂಧಿ; ಕಾರ್ಯವಿಷವಾಗಿ ವಧೂವರರ ಪ್ರಯತ್ನವನ್ನು ಹೇಳಿದುದರಿಂದ. ಕಾಮನು ಹರನ ಸಮಾಧಿಯನ್ನು ಕೆಡಿಸಿದುದು ಗರ್ಭಸಂಧಿ; ಕಾರ್ಯವು ಆಗಬಹುದೆಂಬ ಆಶೆ ತೋರುವುದರಿಂದ. ತಪಕ್ಕೆ ಮೆಚ್ಚಿ ಹರನು ಮೈದೋರಿ ಪಾರ್ವತಿಯನ್ನು ಸ್ವೀಕರಿಸಿದುದು ಉಪಸಂಹಾರಸಂಧಿ; ಕಾರ್ಯಸಿದ್ಧಿ- ಫಲಪ್ರಾಪ್ತಿ- ವರ್ಣಿತವಾಗಿರುವುದರಿಂದ.

**ಮುಖಸಂಧಿ**- ಮದುವೆಗೆ ಬೇಕಾದುದು ವಧೂವರರ ಪರಸ್ಪರಾನುರಾಗವು. ವರನು ಸತೀವಿಯೋಗಾನಂತರದಲ್ಲಿ ಅನನ್ಯ ಪತ್ನೀಕನಾಗಿ ಸತಿ ದೊರೆತರೆಯೆ ಮತ್ತೆ ಸಂಸಾರ, ಇಲ್ಲವಾದರೆ ಇಲ್ಲಿಗೇ ತೀರಿತೆಂದು ಸಂಸಾರ ಪರಾಙ್ಮುಖನಾಗಿ ಸತಿಯು ಅವತಾರವೆತ್ತಿ ಬರುವುದನ್ನೇ ನಿರೀಕ್ಷಿಸಿಕೊಂಡು ತಪಕ್ಕೆ ನಿಂತವನು! ಗೂಢಪ್ರೇಮವುಳ್ಳವನು. ಪಾರ್ವತಿಯು, ಹುಟ್ಟಿದಾಗಲೇ ಶಿವನಲ್ಲಿ ನೆಟ್ಟು ಹೋದ ಸಹಜಾನುರಾಗವುಳ್ಳಾಕೆ. ಇಲ್ಲಿ ಕಾಲಿದಾಸನ ಪಾರ್ವತಿಗೂ ಹರಿಹರನ ಪಾರ್ವತಿಗೂ ಭೇದವುಂಟು. ಕಾಲಿದಾಸನ ಪಾರ್ವತಿ " सा निर्मिता विश्वसृजा प्रयत्नादेकस्थसौंदर्य दिदृक्षयेव " ಎಂಬಂತೆ ಸೌಂದರ್ಯಖನಿ ಎನಿಸಿದವಳಾದರೂ ಸಾಮಾನ್ಯ ಬಾಲಿಕೆ; ಶಿವನ ಬಳಿಯಲ್ಲಿ ಸೇವೆ ಮಾಡಿಕೊಂಡಿರು ಎಂದು ತಂದೆ ಹೇಳುವವರೆಗೆ ಆಕೆಯಲ್ಲಿ ಶಿವಾನುರಾಗವು ಕಾಣಬರುವುದಿಲ್ಲ; ಆದರೆ ಹರಿಹರನ ಪಾರ್ವತಿಗೆ ಬಾಲ್ಯದಲ್ಲಿಯೇ ಕೇವಲ ಶಿವಧ್ಯಾನ. ಆಧ್ಯಾನ ಕಾಲದಲ್ಲಿ ಆ ಅಚಲಪುತ್ರಿ— ಬರೆದರೊ ಬೈತರೊ ಕರುವಿಟ್ಟರೊ ಕಂಡರಿಸಿದರೊ ಎಂಬಂತೆ ಅಚಲೆ; ಇದಲ್ಲದೆ—

ಬೇಡೆಂದೊಡೆ ಮೂಣಳ್ ನಲಿ |
ದಾಡುವಳಪ್ಪುವಳಮರ್ಚುವಳ್ ಪುಳಕಿಪ್ಪಳ್ ||
ಮಾಡುವ ಲಿಂಗಾರ್ಚನೆಯೊಳ್ |
ನೋಡಳ್ ನುಡಿಯಳ್ ಭವಾನಿಯೇ ನೆಂದರಿಯಳ್ || ೩. ೧೦

ಹೀಗೆ ಭಕ್ತಿಯ ಪೂಜೆಯಲ್ಲಿಯೂ ಆಕೆ ನಲಿದು ಆಡುವಳು, ಅಮರ್ಚುವಳು;

ಪುಳಕಿಪ್ಪಳು; ಈ ತೆರದಲ್ಲಿ ಪತ್ನಿಯ ಅನುರಾಗವನ್ನು ತೋರ್ಪಡಿಸುವಳು, ಹರಿಹರನ ದೃಷ್ಟಿಯಲ್ಲಿ ಪಾರ್ವತಿ ತವರ್ಮನೆಗೆ ಬಂದಾಗಳಿನಂತೆ ಶಿವನಿಂದ ದೂರದಲ್ಲಿದ್ದರೂ ಆಕೆ ಶಿವನಲ್ಲಿಯೇ ಮನಸ್ಸು ಹತ್ತಿದವಳು. ಕಾಲಿದಾಸನ. ಪಾರ್ವತಿ ಹಿಮವಂತನ ಪುತ್ರಿ; ಹರಿಹರನ ಪಾರ್ವತಿ ವಿರಹಿಣಿಯಾದ ಶಿವಪತ್ನಿ.

**ಪ್ರತಿಮುಖ ಸಂಧಿಯಲ್ಲಿ** ಈ ಭೇದವು ಇನ್ನೂ ಸ್ಫುಟವಾಗಿ ಕಾಣಿಸುವುದು. ಶಿವನನ್ನು ಒಲಿಸಿಕೊಳ್ಳುವುದಕ್ಕಾಗಿ ಹೇಮಕೂಟದಲ್ಲಿ ಶಿವಪೂಜಾನಿರತೆಯಾದಾಗ ಕಾಲಿದಾಸನ ಪಾರ್ವತಿ—

अवचितबलिपुष्पा वेदिसम्मार्गदक्षा ।
नियमविधिजलानां बर्हिषाञ्चोपनेत्री ॥
गिरिशमुपचचार प्रत्यहं सा सुकेशी ।
नियमितपरिखेदा तच्छिरश्चन्द्रपादैः ॥

ಕೇವಲ ಮನೆದೊತ್ತಿನಂತೆ ಹರನ ಸೇವೆಯನ್ನು ಮಾಡುತ್ತಿರುವಳು; ಮತ್ತು-

पर्याप्त पुष्पस्तबकावनम्रा ।
सञ्चारिणी पल्लविनी लतेव

ಎಂಬಂತೆ ತಾನು ಮಾತ್ರ ವಿಪುಲ ಪಲ್ಲವ ಪುಷ್ಪಸ್ತಬಕಾಲಂಕೃತೆ (ಕು. ೨.೫೪). ದೂರದೂರದಲ್ಲಿ ನಿಂತೇ ಪುಷ್ಪಾಂಜಲಿಯನ್ನು ಹರನ ಪಾದಕ್ಕೆ ಅರ್ಪಿಸುವಳು. (ಕು. ಸಂ. ૩.೬೧) ಆದರೆ ಹರಿಹರನ ಪಾರ್ವತಿ, ಸೇವೆಗಾಗಿ ಶಿವನ ಬಳಿಗೆ ಬಂದಾಗ ಪ್ರೌಢ ಪತ್ನಿ ತನ್ನ ಮನೆಗೆ ಬಂದಾಗಳಿನಂತೆ ನಡೆಯುವಳು. ತನ್ನನ್ನು ಕಳುಹಬಂದ ತಂದೆಗೆ— 'ಶಿವನೀತಂ ನಿಜವಲ್ಲಭಂ; ನೀಂ ಪೋಗು; ಸಾನಂದದಿಂದಿರ್ಪೆಂ' ಎಂದು ತಂದೆಯನ್ನು ಹೋಗ ಹೇಳುವಳು. ಶಿವನಿಗೆ ಪುಷ್ಪಮಾಲಿಗಳನ್ನು ಆತನ ತೋಳು, ಕೊರಳು ಮುಂತಾದ ಅವಯವಗಳನ್ನು ಮುಟ್ಟಿ ಮುಟ್ಟಿ ಹಾಕುವಳು (೫-೮೧). ಮತ್ತು—

ತಮತಮಗೆ ಮುಂಚುವಿಂದ್ರಿಯ |
ನಿವಹಮನೋವೃತ್ತೆ ಗಿರಿಜೆ ಹರಕಂಧರದೊಳ್ ||
ನವಕುಸುಮ ಮಾಲೆಯಂ ಸಾ |
ರ್ಚುವ ನೆವದಿಂ ಸೋಂಕಿ ಸೋಂಕಿ ಪುಳಕಿಸುತಿರ್ದಳ್ ||
(೫-೮೨)

ಇಂತು ಮೈಮುಟ್ಟಿ ಪೂಜಿಸುವ ಸಲುಗೆ ಆಕೆಗೆ. ಪತ್ನಿಗೆ ಪತಿಯ ಹತ್ತಿರ ಹೋಗಲು ಸಂಕೋಚವೆಲ್ಲಿಯದು ?

**ಗರ್ಭಸಂಧಿಯಲ್ಲಿ** ಕಾಲಿದಾಸನ ಶಿವನು ತಾನಾಗಿ ಸಮಾಧಿಯಿಂದಿಳಿದು ಕಣ್ದೆರೆದಿರುವಾಗ ಪುಷ್ಪಾಲಂಕೃತೆಯಾದ ಪಾರ್ವತಿ ಶಿವನ ಬಳಿಗೆ ಬರಲು, ಸಮಯವನ್ನು ಕಾದುಕೊಂಡು ನಿಂತಿದ್ದ ಕಾಮನು ಸಂಮೋಹನಾದಿ ಬಾಣಗಳಿಂದ ಶಿವನ ಮನಸ್ಸನ್ನು ಕದಲಿಸುವನು. ತನ್ನ ಮನಸ್ಸಿನ ಕದಲಿಕೆಗೆ ಕಾರಣವೇನೆಂದು ಅತ್ತಿತ್ತ ನೋಡುತ್ತಿದ್ದ ಶಿವನು, ಒಂದೆಡೆಗೆ ಬಿಲ್ಲನ್ನು ಹಿಡಿದು ನಿಂತ ಕಾಮನನ್ನು ಕಂಡು ಆತನನ್ನು ಸುಟ್ಟು ಬೂದಿ ಮಾಡುವನು. ಆದರೆ ಹರಿಹರನ ಶಿವನಿಗೆ ದೇವತೆಗಳ ಮತ್ತು ಪಾರ್ವತಿಯ ಮನೋರಥದ ಒತ್ತಾಸೆಯುಳ್ಳ ಕಾಮನಿಂದ ಸಮಾಧಿಭಂಗವಾಗುವುದು. ಆಗ ಆತನು ಕಣ್ದೆರೆದು ಅಪರಾಧಿಯಾಗಿದ್ದ ಕಾಮನನ್ನು ಸುಟ್ಟು ಬೂದಿಮಾಡುವನು. ಈ ಭಾಗವು ಇಬ್ಬರಲ್ಲಿಯೂ ಸ್ವಲ್ಪ ಹೆಚ್ಚುಕಡಮೆ ಸಮಾನವಾದರೂ ಕಾಮದಹನಾನಂತರದಲ್ಲಿ ಇವರ ಪಾರ್ವತಿಯರಲ್ಲಿ ಭೇದವು ಕಾಣಬರುವುದು. ಶಿವನು ಪಾರ್ವತಿಯ ಸಮಾಚಾರವನ್ನೇ ಕೇಳದೆಯೂ ಕಣ್ಣೆತ್ತಿ ನೋಡದೆಯೂ ಹೊರಟು ಹೋಗಲು ಕಾಲಿದಾಸನ ಪಾರ್ವತಿ—ತನ್ನ ತಂದೆಯ ಅಭಿಲಾಷೆ, ತನ್ನ ಯೌವನ ಇವು ವ್ಯರ್ಥವಾದುವಲ್ಲಾ ಎಂದು ಎದೆಗುಂದುವಳು; ಸಖಿಯರಿದಿರಿಗೆ ಈ ತರದ ಅಪಮಾನವೇ ಎಂದು ನಾಚುವಳು; ರುದ್ರನ ಮದನ ದಹನದ ಸಂರಂಭಕ್ಕೆ ಮೈಮರೆವಳು; ತಂದೆ ಬಂದು ಆಕೆಯನ್ನೆತ್ತಿಕೊಂಡು ಹೋಗುವನು.* ಆದರೆ ಹರಿಹರನ ಪಾರ್ವತಿ, ತನ್ನ ಪತಿಯ ಸ್ವಭಾವವನ್ನೂ ಆತನ ಪ್ರೇಮದ ಗಾಢತೆಯನ್ನೂ ಬಲ್ಲ ಪತ್ನಿ. ತನ್ನನ್ನು ನೋಡದೆ ಹೊರಟು ಹೋದ ಆತನ ಆಚರಣೆಯಲ್ಲಿ ಕುಂದನ್ನೆಣಿಸುವಳೇ ಹೊರತು ಧೈರ್ಯಗೆಡುವುದಿಲ್ಲ. ತನ್ನನ್ನು ಮಾತಾಡಿಸದೆ ಹೊರಟುಹೋದ ಅಪಮಾನದಿಂದ ನೊಂದು ತನ್ನ ಬಳಿಗೇ ಆತನು ಬರುವಂತೆ ಮಾಡುವೆನೆಂದು ಹಟಹಿಡಿಯುವಳು. ಕಾಲಿದಾಸನ ಪಾರ್ವತಿ ಈ ಸಮಯದಲ್ಲಿ ತನ್ನನ್ನೇ ತಾನು ಕಾಪಾಡಿಕೊಳ್ಳಲಾರದವಳು ದಗ್ಧಪತಿಕಳಾದ ರತಿಯನ್ನೇನು ನೋಡಿ

---

* ಕು. ಸಂ ೩. ೭೫-೭೬.

ಯಾಳು ? ಆದರೆ "ತಾಯೇ ತವರೇ ಕರುಣಿಸು" ಎಂದು ತನ್ನನ್ನು ಬೇಡಿಕೊಂಡು ಹಂಬಲಿಸುವ ರತಿಗೆ ಹರಿಹರನ ಪಾರ್ವತಿ—

ಬೇಡುಡುಗು ಶೋಕರವಮಂ |
ನೀಡಾಗದೆ ನಿನ್ನ ವಲ್ಲಭನನೀಶ್ವರನಂ ||
ಬೇಡುವೆನಾವರ್ಥದೊಳಂ |
ಮಾಡುವೆನೆಲೆ ಪರಮ ಹರ್ಷಮಂ ನಿನಗೆ ರತೀ || ೮–೮೦.

ಎಂದು ವಚನ ಕೊಡುವಳು. ಕಾಲಿದಾಸನ ಪಾರ್ವತಿ ಮದುವೆಯಾಗದ ಕನ್ಯೆ; ಶಿವನು ತನ್ನ ಭಾವಿಪತಿಯೆಂದು ಮಾತ್ರ ನೋಡುವಳು. ಆದರೆ ಹರಿಹರನ ಪಾರ್ವತಿ ಪ್ರೌಢ ಪತ್ನಿ. ಪತಿಯಿಂದ ಬೇಕಾದ ಕೆಲಸ ಮಾಡಿಸಿಕೊಳ್ಳುವೆನೆಂಬ ಧೈರ್ಯವುಳ್ಳ ಸ್ವಾಧೀನ ಪತಿಕೆಯಾದ ಪತ್ನಿ.

**ವಿಮರ್ಶಸಂಧಿ:**— ತಪವು ಅತ್ಯುಗ್ರವಾದುದು; ಆದರೆ ಅದು ಸಹೇತುಕವು. ಪರಮೇಶ್ವರನ ಕೇವಲ ಪ್ರೀತಿಯಾಗಲಿ, ಮೋಕ್ಷವಾಗಲಿ ಅದರ ಉದ್ದೇಶ್ಯವಾಗಿಲ್ಲ; ಶಂಕರನ ಪ್ರೇಮವನ್ನು ಪಡೆವುದೇ ಉದ್ದೇಶವು. ತಪವನ್ನು ಮಾಡುವಾಗ ಆಕೆ "ಶಂಕರ ಪ್ರೇಮ ರಸೋನ್ಮಗ್ನಾಂಗಿ" (೯–೯); ಆಕೆ ನೆನೆಯುವುದು 'ವರನಂ ಮಹೇಶನಂ' (೯–೧೨). ಆಕೆ ಬೇಸಗೆಯಲ್ಲಿ ಸೂರ್ಯಶಿಲೆಯಂ ಛಲದಿಂದೆ ಮೆಟ್ಟುವಳು (೯–೧೩). ಚಳಿಗಾಲದಲ್ಲಿ ಸರೋವರದಲ್ಲಿ, ಗಿರಿಕಟಕದಲ್ಲಿ ತಪಕ್ಕೆ ನಿಲ್ಲುವಳು. ಈ ತಪವು ಶಿವನನ್ನು ಕುರಿತು- ನೀನು ಹೇಗೆ ಬರುವದಿಲ್ಲವೋ ನೋಡಿಬಿಡುವೆ, ನೀನು ಬಾರೆಯಾದರೆ ನಾನು ತನುವನ್ನೇ ನೀಗುವೆನು, ಎಂಬಂತೆ ಆಕೆಯ ಹಟವನ್ನು ತೋರಿಸುತ್ತದೆ. ಹೆಂಡತಿಯ ಅಸುದೊರೆವಂತಹ ಈ ತಪವು ವಿರೂಪಾಕ್ಷನ ಕರಣಂಗಳಿಗೆ ಹೋಗಿ ಮುಟ್ಟಿತು. ಪುರಹರನು ಎಚ್ಚತ್ತನು. ಆತನ ಕೆಚ್ಚುಗಟ್ಟಿದ ಧೈರ್ಯವು ಒಡೆಯಿತು. ಕಾರುಣ್ಯವು ಪಿಡಿದೆಳೆಯಿತು (೯–೮೪). ಇನ್ನು ತಡವಾದರೆ ಮೊದಲಿನಾಕೆ (ಸತಿ) ತಂದುಕೊಂಡಂತೆ ಈಕೆಯೂ ಅನರ್ಥವನ್ನೇ ತಂದುಕೊಂಡಾಳು ಎಂದು ಬೆಚ್ಚಿ ಆತುರನಾಗಿ ಆಕೆಯನ್ನು ಮನ್ನಿಸುವುದಕ್ಕೆ ಹೊರಡಲನುವಾಗುವನು.

ಇಲ್ಲಿಯೂ ಪತಿಯು (ತಾನಿದ್ದಲ್ಲಿಗೇ ಬರಬೇಕೆಂಬ) ತನ್ನ ಮಾತನ್ನು ನಡೆಸಲೇಬೇಕೆಂಬ ಹಟಹಿಡಿಯುವ, ಹಾಗೆ ಆತನಿಂದ ಕೆಲಸ ಮಾಡಿಸಿಕೊ

ಳ್ಳುವ ಹಸ್ತಗತಪತಿಕಳಾದ ಸಲುಗೆಯ ಪ್ರೌಢ ಭಾರ್ಯೆಯಂತೆ ಪಾರ್ವತಿ ತೋರುವಳು.

**ಉಪಸಂಹಾರಸಂಧಿ** ಅತಿ ಮನೋಹರವು. ಶಿವನೀಗ ಬ್ರಹ್ಮಚಾರಿ ವೇಷದಿಂದ ಪಾರ್ವತಿಯ ಆಶ್ರಮದಲ್ಲಿ ಬಂದಿದ್ದಾನೆ. ಅತಿಥಿಸತ್ಕಾರವು ನಡೆದಿದೆ. ಆದರೆ ಸಹಚರಿಯರು ಮಾಡುವ ಸತ್ಕಾರದಲ್ಲಿ ಆತನ ಮನವೇ ಇಲ್ಲ. ಮನೆಗೆ ಬಂದ ಹೊಸ ಅತಿಥಿ, ಮೊದಲಿಗೇ " ಈ ಲಲನೆ ಆದಾರ್, ತಪಂ ಅಗಣ್ಯಂ ಆವನ ಪುಣ್ಯಂ " *ಎಂದು ಮನೆಯ ಯಜಮಾನಿತಿಯ ವಿಷಯವನ್ನೇ ಹಿಡಿದು ಪ್ರಶ್ನೆಮಾಡಿ ಕಾಲ್ಗೆದರಿ ಜಗಳವನ್ನು ಹೂಡುವನು. "ಇದರ ಚಿಂತೆ ನಿಮಗೇಕೆ" ಎಂದು ಸಖಿಯರಿಂದ ಬಿರುನುಡಿ ಬಂದರೂ ನಸುನಗುತೆ (ಮೊಂಡ.) ಈ ಪೊಸಕನ್ಯೆಯ " ತಪಮಂ ಮಾಣಿಸುವರಿಲ್ಲಾ ? ಸಹಾಯ ಸಂಪದವಿಲ್ಲಾ ? " ಎಂದು ಮತ್ತೆ ಆಕೆಯ ವಿಷಯವಾಗಿಯೇ ಪ್ರಶ್ನೆಮಾಡುವನು. ಯಜಮಾನಿತಿಗೆ ಮುನಿಸು ಬಂದಿತು. ಮನೆಗೆ ಬಂದ ಈ ಅ........ ಪ್ರ........ ಅತಿಥಿ ಇಲ್ಲದ ಉಸಾಬರಿಯನ್ನು (ಕಾರಭಾರವನ್ನು) ಮಾಡಿದರೆ ಮುನಿಸು ಬಾರದೇ ? ಕಣ್ಮುಚ್ಚಿ ಜಪಮಾಡುತ್ತ ಇದ್ದವಳು ಅತಿಥಿಗೆ ಇನ್ನೇನು ಮಾಡುವಳೋ ಎಂಬಂತೆ ಕಣ್ದೆರೆದಳು. ಆದರೆ ಈ ಅತಿಥಿಯನ್ನು ನೋಡಿದೊಡನೆ ಆಕೆಯ ಮುನಿಸು ಮಾಯವಾಗಿ ಹೋಯಿತು. ಇಷ್ಟೇ ಅಲ್ಲ, ಆಕೆಗೆ ಹರ್ಷವೇ ಆಯಿತು. (೯–೯೬.)

ಇದೊಂದು ಸುಂದರವಾದ ದೃಶ್ಯ. ಇಲ್ಲಿ ಪತಿ ತನ್ನ ಪತ್ನಿಯ ಹತ್ತಿರ. ಆದರೆ ಪತ್ನಿಗೆ ತನ್ನ ಹತ್ತಿರ ಇದ್ದವನು ಪತಿ ಎಂಬ ತಿಳಿವಳಿಕೆ ಇಲ್ಲ; ಆಕೆಗೆ ತನ್ನ ಪತಿ ಈ ಅತಿಥಿಯ ವಟುವೇಷದ ತೆರೆಯ ಒಳಗೆ ಅಸ್ಪಷ್ಟವಾಗಿ ಕಾಣಿಸುವಂತೆ ಬೋಧೆಯಾಗುತ್ತಿದೆ; ಪತಿಗೆ ಪತ್ನಿಯ ಸ್ಪಷ್ಟದರ್ಶನ; ಪತ್ನಿಗೆ ಪತಿಯ ಅಸ್ಪಷ್ಟ ದರ್ಶನ. ಅಂತೆಯೆ ಪತ್ನಿ ಅತಿಥಿಯ ಮೇಲೆ ಮಧುರದೃಷ್ಟಿಗಳನ್ನೆರಚುತ್ತಾಳೆ (೯–೯೭). ಅವು ಮಧುರಗಳಾಗಿದ್ದರೂ ಪತಿಗೆ ಉರವಣೆಯಿಂದ ತಾಗುತ್ತಿವೆ (೯–೯೭). ಆತನು ಪತ್ನಿಯನ್ನು ನೋಡುತ್ತಾನೆ

---

* ೯೯೩. — ಅಪರಿಮಿತ ತಪವ ಮಾಡಿ ಪತಿಯನ್ನು ಪಡೆವೆನೆನ್ನುವಷ್ಟು ಮಟ್ಟಿಗೆ ಪರಮಾನುರಾಗವುಳ್ಳ ಪತ್ನಿಯನ್ನು ಮದುವೆಯಾಗುವ ಪತಿ ಎಂತಹ ಪುಣ್ಯಶಾಲಿ!

ವೇಷಾಂತರದಿಂದ; ವೇಷವನ್ನು ಬಿಡುವ ಸಮಯವಿನ್ನೂ ಬಂದಿಲ್ಲ. ಕೇವಲ ಆತುರ. ಪತ್ನಿ ಸಂಶಯಗ್ರಸ್ತೆ; 'ಎಲೆ ಧೂರ್ತ ವಿಪ್ರ' ಎಂದು ಆತನನ್ನು ಕೆಣಕುವಳು (೯–೧೦೯).

ಪತಿ ಸೋತನು; ಮನಗರಗಿದನು, ರೋಮಾಂಚಿತನಾದನು; ಹೂಡಿದ ಜಗಳವನ್ನು ಹೇಗೋ ಮುಂದುವರಿಸುವನು. "ಶಿವನು ಪತಿಯಾಗಬೇಕೆಂದು ತನ್ನ ಈ ತಪಸ್ಸು" ಎಂಬುದನ್ನು ಪಾರ್ವತಿಯ ಬಾಯಿಂದ ಹೊರಡಿಸಬೇಕೆಂಬುದೇ ಜಗಳವನ್ನು ಹೂಡಿದ ವಟುವಿನ ಮನದೊಳಗಿನದು. ಆವನಂ ಉದ್ದೇಶಿಸಿ ತಪವಿದು? ಎನಗರುಪಿದೊಡೇನೊ ದೊಷವೇ' ಎಂದು ಆಗ್ರಹಗೊಳಿಸುವನು. ಹೆಂಡತಿಯ ಬಾಯಿಂದ ಗಂಡನ ಹೆಸರನ್ನು ಹೇಳಿಸಿಕೊಳ್ಳುವ ಸಲುಗೆಯ ಹುಡುಗಾಟವಿದು! ಪಾರ್ವತಿ ಹೇಳುವುದಕ್ಕೆ ನಾಚಿದರೂ 'ಬೆಸಗೊಂಡಪಂ ಅಮಳದ್ವಿಜಂ' ಎಂದು ಧರ್ಮಸಂಕಟಕ್ಕೊಳಗಾಗಿ—

ಎನುತುಂ ಗದ್ಗದಿಸುತೆ ಪುಳ |
ಕನಿಕಾಯಮನಾನುತಶ್ರುವಂ ತಳೆಯುತ್ತುಂ |
ಘನ ಹರ್ಷಚಿತ್ತೆಯಾಗು |
ತ್ತೆ ನಗೇಶ್ವರಪುತ್ರಿ ಶಂಕರನ ಪೆಸರ್ಗೊಂಡಳ್ || ೯–೧೧೦.

ಕೊನೆಗೆ ಹೆಸರನ್ನು ಹೇಳುವಳು. ಅಹಾ! ಪತಿಯ ಹೆಸರಿನ ನೆನಪಾದಾಗಲೇ ಆಕೆಗೆ ಎಷ್ಟು ಪ್ರೀತಿ! ಎಷ್ಟು ಭಕ್ತಿ! ಅದೆಷ್ಟು ಸಂತುಷ್ಟಿ! ಆದರೆ ಶಂಕರನಿಗಾಗಿ ತಪವಿರ್ದಪೆನೆಂಬ ನುಡಿಯನ್ನು ಕೇಳಿ ಈ ದುಷ್ಟ ಬ್ರಾಹ್ಮಣನು (೯–೧೧೧) ಒಮ್ಮೆಲಿ ಘೊಳ್ಳನೆ ಅಟ್ಟಹಾಸ ಮಾಡುವನು. ಶಿವನಿಗಾಗಿ ತಪವೆಂದರೆ ಇದೊಂದು ನಿನ್ನ ಅನುಚಿತವಾದ, ಅವಿಚಾರದ ಕೆಲಸ ಎಂಬುದನ್ನು ಆತನು ಈ ನಗೆಯಿಂದ ತೋರಿ, ಶಿವನ ವ್ಯಾಜನಿಂದೆಯನ್ನು ಯಥೇಷ್ಟವಾಗಿ ಮಾಡತೊಡಗುವನು. ಕಾಲಿದಾಸನೂ, ಶಿವಪುರಾಣಕಾರರೂ, ಹರೀಶ್ವರನೂ ಈ ಸಂದರ್ಭವನ್ನು ಬಹು ಚೆನ್ನಾಗಿ ಚಿತ್ರಿಸಿರುವರು. ಸಂದರ್ಭವೇ ಹಾಗೆ ಕವಿತ್ವಕ್ಕೆ ಕಳೆಯೇರಿಸುವಂತಹುದು!

ಕೆಳಗಿನ ಪದ್ಯದಲ್ಲಿ ಹರಿಹರನ ಮಾತಿನ ಜಾಣ್ಮೆಯನ್ನು ಕಾಣಬಹುದು

ಬ್ರಹ್ಮಚಾರಿಯು ಅಣಕವಾಡುತ್ತಾನೆ—

ಅಕ್ಕಕ್ಕೆ ಕಾಮಹರನೊಳ್ ।
ಮುಕ್ಕಣ್ಣನೊಳಖಿಳ ವೇದಶಾಸ್ತ್ರಕ್ರಮಮಂ ।
ಮಿಕ್ಕವನೊಳ್ ಪಿತೃವನದೊಳ್ ।
ಪೊಕ್ಕವನೊಳದೆಂತು ಚಿತ್ತವಿಟ್ಟೆ ಲತಾಂಗೀ ? ॥ ೯-೧೧೧

ಅಹಾ! ಎಂತಹ ವರನನ್ನು ಆರಿಸಿದೆ! ಯಾರೂ ಎಂದೂ ಹೆಣ್ಣು ಕೊಡದಂತಹ ವರ; ವರನಿಗೆ ಬೇಕಾಗುವ ಒಂದಾದರೂ ಗುಣವಿದೆಯೆ? ಮುಖ್ಯವಾಗಿ ಬೇಕಾದ ಕಾಮವಾಸನೆಯೇ ಆತನಲ್ಲಿಲ್ಲವಲ್ಲ ? ಕಾಮಹರ. ಸೌಂದರ್ಯವೋ? ವಿಚಿತ್ರ! ಹಣೆಯ ಮೇಲೊಂದು ಕಣ್ಣು! ಹೋಗಲಿ, ನಾಲ್ಕು ಜನರಂತೆ ಇರುವವನೇ? ಅದೂ ಇಲ್ಲ; ಅಖಿಲ ವೇದಶಾಸ್ತ್ರಗಳ ಬಂಧನವನ್ನು ಹರಿದು ಬಿಸುಟಿದ ಸಮಾಜ ಬಹಿಷ್ಕೃತ; ಇನ್ನೂ ಮೀರಿದೆ ಆತನ ಅನಾಚಾರ-ಸ್ಮಶಾನವಾಸಿ !

ಮರುಗಬೇಕಾದ ಸಮಯವಿದು—

ಭೀಕರ ಮಪ್ಪ ಶೂಲಿಯಭಿಲಾಷೆಯೋಳೀತಪವಾತನೇಕೆ ನೀ ।
ನೇಕೆ ಕೃಪಾಣವೇಕೆ ಲತೆಯೇಕೆ ಲಸತ್ಕರಿಯೇಕೆ ರಂಭೆ ತಾ ।
ನೇಕೆ ಕೃಶಾನುವೇಕೆ ಪೊಸಪೂವಿನ ಮಾಲೆಯದೇಕೆ ಭಾನು ।
ವೇಕಾಕುಮುದಂಗಳೇಕೆ ಸಿಡಿಲೇಕೆ ಮರಾಳನದೇಕೆ ಲೋಕದೊಳ್॥

೯-೧೧೨

ಆತ-ನೀನು, ಅಯ್ಯೋ! ಎಂತಹ ಅನುಚಿತ ಸಮಾಗಮ ! ಲೋಕದಲ್ಲಿ ಸಮಾಗಮವಾಗಬಾರದ ಇಂತಹ ಹಲವು ಜೋಡಿಗಳಿವೆ; ಖಡ್ಗ ಬಳ್ಳಿ, ಆನೆ ಬಾಳೆಗಿಡ, ಅಗ್ನಿ ಹೂಮಾಲೆ; ಸೂರ್ಯ ಕುಮುದ; ಸಿಡಿಲು ಹಂಸ. ಒಮ್ಮೊಮ್ಮೆಯಾದರೂ ಸಮಾಗಮವು ಸಂಭವಿಸುವಂತೆ ಲೋಕದಲ್ಲಿ ಈ ವಸ್ತುಗಳು ಏಕೆಯೋ? ನಿನ್ನ ಆತನ ಸಮಾಗಮವು ಚಿರಸಮಾಗಮವಾಗಲಿ ರುವುದಲ್ಲವೇ ? ಹೇಗೆ ತಾಳಲಿ ?

ಇದು ನೋಡು—

ನೀನು-ಆತನು ಉತ್ತರಧ್ರುವ—ದಕ್ಷಿಣಧ್ರುವ.

ನೀನಿನಿಯಳ್—ವಿಷಮಾತಂ ।
ನೀನತಿಮೃದು—ಕಠಿಣಗುಣಗಣಾಶ್ರಯನಾತಂ ॥
ನೀನಬಲೆ—ಉಗ್ರನಾತಂ
ನೀನುರುತರಭೀರು—ಸರ್ಪಭೂಷಣನಾತಂ ॥೯-೧೧೨

ಅಮೃತ—ವಿಷ; ಅತಿಮೃದು–ಅತಿಕಠಿಣ; ಅಬಲೆ–ಉಗ್ರ; ಅತಿಭೀರು-ಸರ್ಪಧಾರಿ.

ನೀನು ಸಹಜಭೀರು; ಯಾವನ ಪತ್ನಿಯಾಗಬೇಕೆನ್ನುವೆಯೋ, ಯಾವನ ಹತ್ತಿರ ನೀನು ಇರಬೇಕಾಗುವುದೋ ಆತನ ಭಯಂಕರತೆಯನ್ನು ಆಲೋಚಿಸಿರುವೆಯಾ?

ಪುಲಿದೊವಲುಡುಗೆಯ ಹಾವಿನ ।
ನೆಲೆದೊಡಿಗೆಯ ನೊಸಲಕಣ್ಣ ಖಟ್ವಾಂಗದ ಪಂ ।
ದಲೆಗಳ ಮಾಲೆಯ ಶೂಲದ ।
ಕಲಿಗಂಜದೆ ಮನವನೆಂತು ಮಾಡಿದೆ ಮುಗುದೇ? ॥ ೯-೧೧೪

ಉಟ್ಟುದು ಹುಲಿಯ ತೊಗಲು, ಮೈಗೆ ಸುತ್ತಿಕೊಂಡುವು ಹಾವುಗಳು, ಹಣೆಯಲ್ಲಿ ಉರಿಗಣ್ಣು; ಕೊರಳೊಳಗೆ ಹಸಿಯ ನರಕಪಾಲಗಳ ಸರ; ಒಂದು ಕೈಯೊಳಗೆ ಹೊರಸಿನ ಕಾಲಿನಂತಹ ವಿಚಿತ್ರವಾದ ಆಯುಧ, ಇನ್ನೊಂದು ಕೈಯೊಳಗೆ ಮುಳ್ಳು; ದೇವರೇ ಗತಿ! ಇಂತಹನನ್ನು ನೆನೆಸಿದರೆಯೇ ಅಂಜಿಕೆ ಬರುವುದು; ನಾಳೆ ನೀನು ಆತನೊಡನೆ..........? ಹುಚ್ಚೀ, ಇವನಮೇಲೆ ಮನಸ್ಸೇ?

ಪಾರ್ವತಿಯ ಪರೀಕ್ಷೆಗಾಗಿ ಬಂದ ಕಾಲಿದಾಸನ ಶಿವನು ಅತಿ ತೇಜಸ್ವಿಯಾದ ಬ್ರಹ್ಮಚಾರಿ, ಜಟಾಧಾರಿ. ವಯಸ್ಸನ್ನು ಹೇಳಿರದಿದ್ದರೂ ಆತನು ಪ್ರೌಢ ವಯಸ್ಸಿನವನೇ ಎಂಬಂತಿದೆ. *ಆತನಲ್ಲಿ ಸ್ವಲ್ಪವೂ ಆತುರತೆ ಇಲ್ಲ. ಅಂತೆಯೇ ಆತನು ' ಅನುಜ್ಝಿತ ಕ್ರಮ'ನಾಗಿ (ಕು.ಸಂ.) ಯೋಗಕ್ಷೇಮಗಳ

---

* ಶಿವಪುರಾಣದ ಬ್ರಹ್ಮಚಾರಿಯು ಶೀರವೃದ್ಧನು. अतीव स्थविरो विप्रबेषधारी स्वतेजसा ॥ पा. खं. २६। २।३

ನ್ನೆಲ್ಲ ಕೇಳುತ್ತ ಪಾರ್ವತಿಯನ್ನು ರೇಗಿಸುವ ಪ್ರಸ್ತುತ ವಿಷಯಕ್ಕೆ ಬರುವಲ್ಲಿ ಬಹಳ ವೇಳೆಯನ್ನು ಕಳೆಯುವನು. ಪಾರ್ವತಿಯ ಬಳಿಯಲ್ಲಿ ಕೊನೆಗೂ ಆತನ ಸಂಕೋಚವೇ ತಪ್ಪುವುದಿಲ್ಲ. **अयंजनः प्रष्टुमनास्तपोधने नचेद्रहस्यं प्रतिवक्तुमर्हसि (कु. सं.)** ಕೊನೆಗೆ ಶಿವನಿಂದೆಯನ್ನು ಕೇಳಲಾರದೆ ಪಾರ್ವತಿ ಅಲ್ಲಿಂದ ಎದ್ದು ಬೇರೆ ಕಡೆಗೆ ಹೋಗತೊಡಗಲು ಆ ಬ್ರಹ್ಮಚಾರಿವೇಷದ ಶಿವನು ನಿಜರೂಪವನ್ನು ತೋರುವನು.

ಪಾರ್ವತೀ ಸತ್ವಪರೀಕ್ಷೆಗೆ ಬಂದ ಹರಿಹರನ ಶಿವನೂ ತೇಜಸ್ವಿಯಾದ ಬ್ರಹ್ಮಚಾರಿ; ಆದರೆ ತರಳನು. ಬ್ರಹ್ಮಚಾರಿಯನ್ನು ತರಳನನ್ನಾಗಿ ಮಾಡಿದುದು ಹರಿಹರನ ಕೈವಾಡ; ನಯವಾದ ಕೆಲಸವೇ ಸರಿ. ಈ ವಿಷಯದಲ್ಲಿ ಹರಿಹರನು ಶಿವಪುರಾಣಕಾರರಿಗಿಂತ, ಕಾಲಿದಾಸನಿಗಿಂತ ಒಂದಡಿ ಮುಂದೆ ಹೋಗಿರುವನು. ಈ ಬ್ರಹ್ಮಚಾರಿಯೇ ವೇಷಪರಿವರ್ತನ (ಟ್ರಾನ್ಸ್‌ಫರ್ ಸೀನ್) ಮಾಡಿ ಮದುವೆಯ ವರನಾಗಿ ನಿಲ್ಲಬೇಕಾಗಿದೆ. ಈ ಬ್ರಹ್ಮಚಾರಿಯನ್ನು ನೋಡಿದಾಗಳಿನಿಂದಲೇ ಪಾರ್ವತಿಗೆ ಒಂದು ಬಗೆಯಿಂದ ಸಂಶಯವು ಬಂದಿದೆ; ಈತನೇ ತನ್ನ ಪತಿಯೇನೋ ಎನ್ನುವ ಮಟ್ಟಿಗೆ. ಅಂತೆಯೆ ಆಕೆ ಆತನ ಮೇಲೆ ತನ್ನ ಮಧುರದೃಷ್ಟಿಗಳನ್ನೆರಚುತ್ತಾಳೆ. ಇದಲ್ಲದೆ ತನ್ನ ಸಮಾಚಾರವನ್ನು ಹೇಳುವಾಗ ಆಕೆ ಎಲೆಧೂರ್ತ ವಿಪ್ರನೆ ಎಂದು ಸಂಬೋಧಿಸಿ ಆತನ ಈ ವಂಚಕತನವನ್ನು ಲಕ್ಷಿಸುವಳು. ಇಂತಹ ಸಂದರ್ಭದಲ್ಲಿ ಬ್ರಹ್ಮಚಾರಿ, ತರಳ (ತರುಣ) ನಾಗಿರುವುದು ಪ್ರಸ್ತುತವಾದ ಮದುವೆಗೆ ಸಮಂಜಸವಾದುದು; ರಸಪುಷ್ಟಿಯನ್ನುಂಟುಮಾಡುವಂತಹುದು. ಪಾರ್ವತಿ ತಪಸ್ಸಿಗೆ ಬಂದಾಗ ಹತ್ತುವರ್ಷದ ವಯಸ್ಸಿನವಳೆಂದು ಹರಿಹರನು ಹೇಳಿದ್ದಾನೆ. “ ದಶವರ್ಷವದಾಯ್ತು ” (೪-೨) ಶಿವನೀಗ ಇಮ್ಮಡಿ ವರನೋ ಮುಮ್ಮಡಿ ವರನೋ ! ಆದರೂ ವರನು ಕನ್ಯೆಗೆ ಅನುರೂಪ ವಯಸ್ಸಿನವನಾಗಿರುವುದು ನಮಗೆ ಪ್ರಿಯವು. ಆದುದರಿಂದಲೇ ಹರಿಹರನು ಬ್ರಹ್ಮಚಾರಿಯನ್ನು ತರಳನನ್ನಾಗಿ ಮಾಡಿದನು. ಇದಲ್ಲದೆ ಬ್ರಹ್ಮಚಾರಿಯ ತರಳತನವನ್ನು ಹೇಳಿದುದರಲ್ಲಿ ಇನ್ನೂ ಒಂದು ಔಚಿತ್ಯವನ್ನು ಕಾಣಬಹುದು. ಈತ ಬ್ರಹ್ಮಚಾರಿ, ತಾನೂ ಬ್ರಹ್ಮಚಾರಿಣಿ; ಈತ ತಪಸ್ವಿ, ತಾನೂ ತಪಸ್ವಿನಿ; ಈತ ತರಳ,

ತಾನೂ ತರಳೆ; ಈತ ಶಿವಭಕ್ತ, ತಾನೂ ಶಿವಭಕ್ತೆ; ಈತ ಸುಂದರ ತಾನೂ ಸುಂದರಿ; ಈತನು ಹೇಳುವಂತೆ ಆ ವರನು (ಶಿವನು) ತನಗೆ ಅನುರೂಪನೋ ಏನೋ ? ಈತ ಬಳಿಯಲ್ಲಿಯೇ; ಆತನು ಎಲ್ಲಿಯೋ ಏನೋ ? ಹೀಗೆ ಪಾರ್ವತಿಗೆ ಎನಿಸುವಂತೆ ಪರೀಕ್ಷೆಯ ಇದೊಂದು ಸಂದರ್ಭವನ್ನು ತಂದೊಡ್ಡು ವುದು ಶಿವನಿಗೆ ಚಿಕ್ಕ ವಯಸ್ಸಿನ ಬ್ರಹ್ಮಚಾರಿಯ ವೇಷವನ್ನು ಹಾಕಿಸಿದ ಹರಿಹರನಿಗೆ ಸಾಧ್ಯವಾಗಿದೆ.

ಪಾರ್ವತಿಯ ಬಳಿಗೆ ಬಂದ ಹರಿಹರನ ಶಿವನಿಗೆ ಆತುರತೆ ಹೆಚ್ಚು. ಆತನು ಬಹುಕಾಲಾಂತರದಿಂದ ಪತ್ನಿಯ ಬಳಿಗೆ ಬಂದ ಪತಿ; ತನ್ನ ಕಪಟವೇಷ ವನ್ನು ಕಾದುಕೊಳ್ಳುವಲ್ಲಿ ಆತನು ವ್ಯಾಕುಲನಾದನು. ಕೈಮೀರಿ ನಿಜರೂ ಪವು ತಾನೇ ಪ್ರಕಟವಾಗತೊಡಗಿದೆ—

ನೆಗೆವ ಜಡೆಮುಡಿಯನೊತ್ತು |
ತ್ತೊಗೆವ ಭುಜಾಳಿಯನಡಂಗಿಸುತ್ತೂರುಗಳಿಂ ||
ಮಿಗುವ ವೃಷೇಂದ್ರನನೌಂಕು |
ತ್ತಗಲದೆ ನಿಜಮೂರ್ತಿಯೊಳಗೆ ಗಜಬಜಿಸುತ್ತಂ || ೯-೯೮

( ಧ್ಯಾನಮೂರ್ತಿಯು ಕವಿಯ ಮನದಲ್ಲಿ ಎಷ್ಟು ನಿಶ್ಚಲವಾಗಿ ನೆಲಸಿದೆ! ಯಾವಾಗಲೂ ಅದೇ ಮೂರ್ತಿಯ ನೆನಪು. ಹರಿಹರಾ, ನೀನು ನಿಜವಾಗಿ ಭಕ್ತಕವಿ. ) ಈ ಆತುರತೆಯ ಮನೋಹರತೆಯನ್ನು ಎಂತಹ ಶ್ರೇಷ್ಠ ಚಿತ್ರಕಾರನೂ ಸೊಗಸಾಗಿ ಚಿತ್ರಿಸಲಾರನು.

ಹೀಗೆ ಆತುರತೆ ಹೆಚ್ಚಾಗಿದ್ದುದರಿಂದಲೇ ಜಯೆವಿಜಯೆಯರ ಹಣ್ಣು ಗಳು ಆತನಿಗೆ ಬೇಡ; ಆತನವು ಮುಖ್ಯವಿಷಯವನ್ನು ಕುರಿತ ಪ್ರಶ್ನೆಗಳೇ ಹೊರತು ಸುತ್ತುವರಿದು ಬರುವ ಪ್ರಶ್ನೆಗಳಲ್ಲ. ಜಯೆ ವಿಜಯೆಯರು ನಿರೋಧಿ ಸಿದರೂ ಹಿಂಜರಿಯನು. ಪಾರ್ವತಿಯು ಜಪವನ್ನು ನಿಲ್ಲಿಸಿ ಕಣ್ದೆರೆದು ಈ ಮೊಂಡ ಅತಿಥಿಯನ್ನು ನೋಡಿದಬಳಿಕ ಆತನ ನಾಲಗೆ ಇನ್ನಷ್ಟು ಉದ್ದ ವಾಗುತ್ತಿದೆ. ಈ ನವೀನಯೌವನಂ, ಈ ಸುಖದೊಳ್ ತಪವಿದೆಂತು ಬಂದುದು ? ಸೌಕುಮಾರ್ಯವರಣೇ, ನಿನ್ನನು ತಪಕ್ಕೀಡು ಮಾಡಿದ ದುಷ್ಟನಂ ಎನಗರಿಪು, ಎಳಗೆಂಪನು ಉಗುಳ್ವ ಈ ಮೃದುಪದಂ, ಈ ಶಿರೀಷ ಸುಕುಮಾರಾಂಗಂ, ಈ ಎಳಲತೆಯಂತಿರ್ಪ ನಳಿತೋಳ್ ಈ ಕೋಕಂಗಳಂ

ವಿಭಂಗಿಪ ಕುಚಮಂಡಲಂ, ಈ ಮಿಸುಗುವ ಶಶಿವದನಂ ಈ ಕುಸುಮ ಮಾಲೆಯಿಂ ರಾಜಿಸುವ ಕಚಭಾರಂ ಅಯ್ಯೋ, ಜಡೆಯಂ ಪಡೆದುದು! ಎಂದು ಆತನ ವಾಗ್ಬಾಣಗಳು ಸುರಿಯುತ್ತಿವೆ! (೯.೧೨೦-೧೦೫) ಪರಪುರುಷನು ಪರಸ್ತ್ರೀಯ ವಿಷಯವಾಗಿ ಹೀಗೆಲ್ಲ ಮಾತಾಡುವುದೆಂದರೆ ಕಲಹವಾಡುವುದೇ ಸರಿ. ಆದರೆ ಹರಿಹರನ ಶಿವನು ಪರಪುರುಷನಲ್ಲ; "ಪ್ರೇಮಿಜನ ಪ್ರಣಯ ಕಲಹಲೀಲಾಲೋಲಚಿತ್ತನಪ್ಪ" ಪತಿ [೯.೧೦೭]. ಆತನು ಹೂಡಿದುದು ಪ್ರಣಯ ಕಲಹವು.

ಈ ಕಲಹದ ಉದ್ದೇಶ್ಯವು ಪಾರ್ವತಿಯನ್ನು ರೇಗಿಸುವುದು; ಉದ್ದೇಶವು ಚೆನ್ನಾಗಿ ಸಾಧ್ಯವಾಯಿತು; ಆದರೆ ಅದರ ಫಲವಾದ ಭಸಿತದ ಉಂಡೆಯ ಏಟನ್ನು ವಟುವು ಪಡೆಯಬೇಕಾಯಿತು. ವಟುವು ಮಾಡುವ ಶಿವನಿಂದೆಗೆ ಸಿಟ್ಟಾಗಿ ಬಳಿಯಲ್ಲಿದ್ದ ವಿಭೂತಿಯನ್ನೇ ಆತನಮೇಲೆ ಎರಚಿದಳು. ಇಲ್ಲಿಗೆ ಪರೀಕ್ಷೆ ಮುಗಿಯಿತು. ಶಿವನು ಪ್ರತ್ಯಕ್ಷವಾದನು.

ಬ್ರಹ್ಮಚಾರಿಯು ಶಿವನಿಂದೆಯನ್ನು ಮಾಡುವ ಈ ಸಂದರ್ಭದಲ್ಲಿ ಶಿವಪುರಾಣದ ಪಾರ್ವತಿ ಅಗ್ನಿ ಪ್ರವೇಶ ಮಾಡುವಳು. ಬಂದ ಬ್ರಹ್ಮಚಾರಿಯಲ್ಲಿ ಪಾರ್ವತಿಗೆ ಪತಿಸಂದೇಹವನ್ನು ಹುಟ್ಟಿಸದ ಪುರಾಣಕಾರರಿಗೆ ಇದು ಉಚಿತವೆಂದು ತೋರಿರಬಹುದು. ಅಗ್ನಿ ಶೀತಲನಾಗುವನು. ಶೀತಲನಾಗಲಿ ಬಿಡಲಿ, ಆದರೆ ಆ ಕಾರ್ಯವು [ಅಗ್ನಿಪ್ರವೇಶವು] ವಿರಸವಾದುದು. ಕಾಲಿದಾಸನ ಈ ಸಂದರ್ಭದ ಪಾರ್ವತಿಯು ಮುಗ್ಧನಾಯಿಕೆ; ಬ್ರಹ್ಮಚಾರಿಯು ಶಿವನಿಂದೆಗೆ ಕೋಪಗೊಂಡು ಕೊನೆಗೆ ಆ ಸ್ಥಳದಿಂದ ಎದ್ದು ಹೋಗಲು ಆತುರಪಡುವಳು. ಆಗ ಶಿವನು ನಿಜರೂಪವನ್ನು ತೋರುವನು. ಆಕೆಯ ಕಾಲು ಮುಂದೆ ಏಳವು. ಆಗ—

मार्गाचलव्यतिकराकुलितेव सिन्धुः ।
शैलाधिराजतनया नययौनतस्थौ ॥५. ८५.

ಮನೋಹರವಾದ ಚಿತ್ರವಿದು ! ಕಾಲಿದಾಸನು ಕಾಲಿದಾಸನೇ.

ಈ ಸಂದರ್ಭದಲ್ಲಿ ಹರಿಹರನ ಪಾರ್ವತಿ ಪ್ರೌಢೆ; ಪತಿಯಲ್ಲಿ ಯಾರ ಸಂಕೋಚವೂ ಇಲ್ಲದ ಬಹಿರಂಗವಾದ ಅನುರಾಗವುಳ್ಳಾಕೆ; ಬಂದ ಬ್ರಹ್ಮಚಾರಿಯಲ್ಲಿ ಪತಿಸಂಶಯವು ಆಕೆಗೆ ಬಂದಿದೆ. ಕಾಲಿದಾಸನ ಪಾರ್ವತಿ ಎದ್ದು

ಹೋದರೆ, ಈಕೆ ಕಿನಿಸಿ ಕಿಡಿಕಿಡಿಯಾಗುವಳು; ತನ್ನ ಪತಿಯ ಅಭಿಮಾನದಿಂದ ಹೊಡೆದಾಟಕ್ಕೆ ನಿಲ್ಲುವಳು. ತಾನು ನಂಬಿದ ಭಸ್ಮವನ್ನು ಆತನಮೇಲೆ ಎರಚುವಳು; ಆಗ:—

ಸರಿದುದು ಪುಸಿವೇಷದ ತೆರೆ |
ಸುರಿದುದು ಕೆಯ್ನೀರ ತೆರದೆ ಹೂವಳೆ ಸರಿಸಂ ||
ಬರಿದುದು ಜೀರಿಗೆ ಬೆಲ್ಲದ |
ಪರಿಯಿಂ ಮುಳಿದಿಟ್ಟ ಭಸಿತಮದೆ ಮದುವೆಯವೊಲ್ ||೯-೧೨೦

ಇದೀಗ ಪಾರ್ವತೀ ಪರಮೇಶ್ವರರ ಮದುವೆ. ವಧೂವರರು ಪರಸ್ಪರ ಸಮ್ಮುಖದಲ್ಲಿ ನಿಂತಿದ್ದಾರೆ. ನಡುವೆ ಪುಸಿವೇಷದ ತೆರೆ [ಅಂತಃಪಟ] ಇದೆ; ಅದು ವಿಭೂತಿಮಹಿಮೆಯಿಂದ ಸರಿದಿದೆ. ಸುರರ ಹೂಮಳೆ, ಕನ್ಯಾದಾನ ಜಲಧಾರೆಯಂತೆ ಬೀಳುತ್ತಿದೆ; ಭಸಿತದಿಂದ ಹೊಡೆದುದು ಮದುವೆಯ ಜೀರಿಗೆ ಬೆಲ್ಲವನ್ನೆರಚಿದಂತಾಗಿದೆ. [ಹೊಡೆಯುವವರು ಬೇಕಾದವರಾದರೆ ಹೊಡೆದಂತೆ ಎನಿಸುವದಿಲ್ಲವೇನೋ?]

ಆಗ ವರನು ವಧುವಿನ ಪಾಣಿಗ್ರಹಣ ಮಾಡಿ—

ಗಿರಿಸುತೆ, ಅಕ್ಕರಿಂ ನಡೆಯ ತಾರಗಿರೀಂದ್ರ ನಿವಾಸದಲ್ಲಿಗೆ |
ಅತ್ಯುರುತರ ಲೀಲೆಯಿಂದಂ................ (೧೦–೫.)
[एहिप्रियेमत्सकाशं पत्नीत्वंमेवरस्तव ।
त्वया साकंव्रतंयास्ये स्वगृहं पर्वतोत्तमम् ॥
शिवपु. पा. खं. २८. ४८.]

ಎಂದು ಆಕೆಯನ್ನು ಸ್ವಗೃಹಕ್ಕೆ ಕರೆಯುವನು. ಆದರೆ ಪಾರ್ವತಿ—

" ದೇವ, ಗಿರೀಶ್ವರನಲ್ಲಿ ಎನ್ನನಾದರದೊಳೆ ಬೇಡಿ |
ಊರ್ಜಿತ ವಿವಾಹಂ ಅದು ಅಚ್ಚರಿಯಪ್ಪ ಮಾಳ್ಕೆಯಿಂ ಕರುಣಿಪುದು " || (೧೦–೫)

ಎಂದು ಬೇಡಿಕೊಳ್ಳುವಳು.

ಇಂತಹ ಸಂದರ್ಭಗಳಲ್ಲಿ ಶೃಂಗಾರ ಕವಿಗಳ ಇಲ್ಲವೆ ಕಾಮುಕವಿಗಳ ನಾಯಿಕೆ ಸ್ವತಂತ್ರೆಯಾಗಿ ವರನಿಗೆ ಆತ್ಮಾರ್ಪಣೆ ಮಾಡುವಳು; ಮದುವೆ

ಯಾಗುವಳು. ಕಾಮಕವಿ ಕಾಲಿದಾಸನ ಶಕುಂತಲೆ, ಗಾಂಧರ್ವವಿಧಿಯ ಮದುವೆಗೆ ಒಪ್ಪಿದಳು. ಆದರೆ ಪಾರ್ವತಿ ಲೋಕೋಪದೇಶಕ್ಕಾಗಿ, ತನ್ನ ತಂದೆಯನ್ನು ಕೇಳಿ ವಿಧಿಪೂರ್ವಕವಾಗಿ ಮದುವೆಯಾಗೆಂದು ಶಿವನನ್ನು ಬೇಡಿಕೊಳ್ಳುವಳು.

ಶೃಂಗಾರ ಕವಿಗಳ ನಾಯಕರೂ ಇಂತಹ ಪ್ರೇಮಾವೇಶದ ಸಂದರ್ಭಗಳಲ್ಲಿ ಬಹಳ ಕೆಳಗಿಳಿಯುವರು. ಕಾಲಿದಾಸನ ಶಿವನು ಈ ಸಮಯದಲ್ಲಿ—

अद्यप्रभृत्यवनतांगि तवास्मि दासः (कु-सं. ५-८६)

ನಿನ್ನ ದಾಸನೆಂದು ಪತ್ನಿಯನ್ನು ಅನುನಯಿಸುವನು. ಶಿವಪುರಾಣಕಾರರ ಶಿವನೂ ನಿನ್ನ ದಾಸನಾದೆನೆಂದು ಪಾರ್ವತಿಗೆ ಹೇಳುವನು. ಕ್ಷಮೆ ಬೇಡಿಕೊಳ್ಳುವನು—

अद्यप्रभृतितेदासस्तपोभिःक्रीतएवते । पा. ख. २८. ४५.

तत्क्षमस्वापराधंमे लोकलीलानुसारिणः । पा सं. २८-४६.

ಕಾಲಿದಾಸನ ದುಷ್ಯಂತನು ಕೂಡ " संवाहयामि चरणौ ? " ಎಂದು ಪತ್ನಿಯ ಪಾದಸಂವಾಹನೆಗೆ ಆತುರನಾಗುವನು. ಆದರೆ ಶಿವಭಾಗವತನಾದ ಹರಿಹರನ ಶಿವನು " ಗಿರಿಸುತೇ ನಡೆಯ " ಎಂದು ತನ್ನ ನಿವಾಸಕ್ಕೆ (೧೦-೫) ಕರೆಯುವನು; ಅಷ್ಟೇ. ಪಾರ್ವತಿ, " ದೇವ, ಕರುಣಿಪುದು " ........ಎಂದು (೧೦-೫) ಆತನ ಗೌರವವನ್ನು ಚೆನ್ನಾಗಿಯೇ ಕಾಯುವಳು.

ಗಿರಿಜಾಕಲ್ಯಾಣ ಕಾವ್ಯದ ಮುಖವು ಭಕ್ತಿಯ ಕಡೆಗೆ; ಕುಮಾರಸಂಭವದ ಮುಖವು ಶೃಂಗಾರದ ಕಡೆಗೆ. ಕಾಲಿದಾಸನು ಕಾಮಕವಿ; ಶೃಂಗಾರ-ಭಕ್ತಕವಿ; ಹರಿಹರನು ದೇವಭಕ್ತಕವಿ; ಕೇವಲ ಶಿವಭಾಗವತನು. ಕಾಲಿದಾಸನು ಪಾರ್ವತೀ ಪರಮೇಶ್ವರರ ಸಂಭೋಗ ಶೃಂಗಾರವನ್ನು ಸಂಕೋಚವಿಲ್ಲದೆ ವರ್ಣಿಸಿದನು. ಅವರ ಮದುವೆಯನ್ನು ಕಾಮಿನೀ ಕಾಮುಕರ ಮದುವೆಯ ತೆರದಲ್ಲಿಯೇ ವರ್ಣಿಸುವ ಸಂಭ್ರಮವು ಆತನಿಗೆ. ಕುಮಾರಸಂಭವವು ಶೃಂಗಾರದ ಕುದುರೆಯನ್ನೇರಿ ಸ್ವರ್ಗದ ಕಡೆಗೆ ಸಾಗುತ್ತಿದೆ; ಗಿರಿಜಾಕಲ್ಯಾಣ ಕಾವ್ಯವು ಮೊದಲು ಶೃಂಗಾರದ ಕುದುರೆಯನ್ನೇರಿ, ಅದನ್ನಿಳಿದು ಶಾಂತ ವೃಷಭವನ್ನೇರಿ ಕೈಲಾಸದ ಕಡೆಗೆ ಸಾಗುತ್ತಿದೆ.

ಮದುವೆಯ ಆರತಿ, ಅಕ್ಷತೆ ಮೊದಲಾದ ಆಚಾರಗಳನ್ನು ವರ್ಣಿಸುವ ಮೋಹವು ಶಿವಪುರಾಣ ಸೌರಪುರಾಣಕಾರರನ್ನೂ ಹರಿಹರನನ್ನೂ ತೊಲಗ ಲಿಲ್ಲ. ಗಿ. ಕ. ದ ಒಂಬತ್ತನೆಯ ಆಶ್ವಾಸದ ಅಂತ್ಯದಲ್ಲಿ ವಿವಾಹವು ಮುಗಿದಿದ್ದರೂ ವಿಸ್ತೃತವಾದ ಹತ್ತನೆಯ ಆಶ್ವಾಸವು ಅದಕ್ಕಾಗಿಯೇ ಅವತರಿಸಿತು.

ಸಪ್ತರ್ಷಿಗಳು ಶಿವನ ಪುರೋಹಿತರಾಗಿ ಗಿರಿರಾಜನ ಬಳಿಗೆ ಬಂದು ಶಿವನಿಗಾಗಿ ಕನ್ಯೆಯನ್ನು ಬೇಡುವುದು, ಗಿರಿರಾಜನು ಶಿವನಿಗೆ ಮಗಳನು, ಕೊಡುವೆನೆಂದು ವಾಗ್ದಾನ ಮಾಡುವುದು, ವಿಶ್ವಕರ್ಮನು ವಿವಾಹಮಂಟಪ ವನ್ನು ಹಾಕುವುದು, ಸುಮಂಗಲಿಯರು ಮದುಮಗಳನ್ನು ಸಿಂಗರಿಸುವುದು, ಮದುಮಗನು ಮಾವನ ಮನೆಗೆ ಬರುವುದು, ಸಂಗಡ ಆತನ ಕಡೆಯ ಮಾಧವ, ಸರಸಿಜಭವ, ವಾಸವ, ಮೊದಲಾದ ದೇವತೆಗಳೂ ಪ್ರಮಥಗಣ ಗಳೂ ಬೀಗರಾಗಿ ಬರುವುದು, ಮಧುಪರ್ಕ, ಪಾಣಿಗ್ರಹಣ, ಲಾಜಹೋಮ ಸಪ್ತಪದಿ ಮೊದಲಾದ ವಿಧಾನಗಳು ನಡೆಯುವುದು ಇವೇ ಮೊದಲಾದ ಸಂದರ್ಭಗಳನ್ನು ಹರಿಹರನು ಬಲು ಆಸ್ಥೆಯಿಂದ ಹೇಳಿರುವನು. ಕೊನೆಗೆ ಶಿವನು ಮಾವನ ಮನೆಯಲ್ಲಿ ಮದುವೆಯ ನಾಲ್ಕು ದಿನಗಳನ್ನು ಕಳೆದು ಹೊಸ ಹೆಂಡತಿಯೊಡನೆ ಕೈಲಾಸಗಿರಿಯ ನಿವಾಸಕ್ಕೆ ಹೊರಟು ಹೋಗುವನು.

**ಗಿರಿಜಾಕಲ್ಯಾಣದ ತಾತ್ತ್ವಿಕ ರೂಪವು:—**

ಶಿವನು ಸ್ವರೂಪದಲ್ಲಿ ಪರಮಾತ್ಮ.

ಮಾತಿನ ವೇಧೆಯ ಬೋಧೆಯ |
ಭೂತಾದಿಯ ಪಂಚವಿಂಶತಿಗಳಂ ಮೀರಿ |
ಜ್ಞಾತೃ-ಜ್ಞಾನ-ಜ್ಞೇಯ |
ವ್ರಾತಮನಳಿದುಳಿದು ತಾನೆತಾನಾಗಿರ್ದಂ || ೫-೩೭
ಪೊರಗಂ ಬಳಸದ ಮಾಯೆಗೆ |
ತೆರಹಂ ಕುಡದಚ್ಚಬಚ್ಚಬರಿಯರಿವಿನ ಸ್ಥೈ |
ವೆರಗಿನ ಮರಹಿನ ಕುರುಹಿನ |
ಕರೆಗೊರಲಂ ನಿಜಸಮಾಧಿಯೊಳ್ ಸಂದಿರ್ದಂ ||೫-೩೮

"ಜ್ಞಾತೃ-ಜ್ಞಾನ-ಜ್ಞೇಯ" ಎಂಬ ತ್ರಿಪುಟಿ ಇಲ್ಲದವ; ಮಾಯೆಯ ಮುಸು

ಕಿಲ್ಲದ ಅಚ್ಚ ಬಚ್ಚ ಬರಿಯರಿವು; ಇಂತಹ ಪರಮಾತ್ಮನು ಸಐಕ್ಷತ बहुस्याम् प्रजायेय ಎಂದು ಪ್ರಪಂಚವನ್ನು ನಿರ್ಮಿಸುವ ಲೀಲೆಗೆ ಅಭಿಮುಖನಾಗಲು ಈ "ನಿಷ್ಪ್ರಪಂಚ-ನಿಷ್ಕ್ರಿಯಾತ್ಮಕ-ನಿರುಪಾಧಿಕ-ಪರಬ್ರಹ್ಮನಿಗೆ" 'ಅಹಂ ಮಮತೆ' ತಲೆದೋರಲು ಜೀವದಶೆ ಬಂದುದು. (೮-೪೫) ಆಗ ಅದು ಪುಂ-ಸ್ತ್ರೀ ಸೃಷ್ಟಿಗಾಗಿ ದ್ವಿಭಾಗವಾಯಿತು. ಇದೇ ಅರ್ಧನಾರೀಶ್ವರರೂಪವು. ಪರಮೇಶ್ವರನ ಈ ನಾರೀಭಾಗವೇ ಕಾಲಾಂತರದಲ್ಲಿ ದಕ್ಷಪುತ್ರಿ ಸತಿ; ಈ ಸತಿಯೇ ಕಾಲಾಂತರದಲ್ಲಿ ಪಾರ್ವತಿ; ಇಂತು ಶಿವಪತ್ನಿಗೂ ಶಿವನಿಗೂ ನಿಜವಾದ ಭೇದವಿಲ್ಲ.*

ಈ ವಿಭಕ್ತಸ್ಥಿತಿ ವಿಕೃತಿ; ಪ್ರಕೃತಿಸ್ಥಿತಿಯ ಅಖಂಡಸ್ವರೂಪವನ್ನೈದುವುದಕ್ಕೆ ಅವು ಅಭಿಮುಖವಾಗುವುದು ಸಹಜವು. ಹೀಗೆ ನರನಾರೀಭಾಗಗಳು ಒಂದನ್ನೊಂದು ಸೇರಿ ಸಮರಸವಾಗಲಭಿಮುಖವಾಗುವುದೇ ಪ್ರೇಮವು ಪತಿಪತ್ನೀಪ್ರೇಮವು.

ಎಲ್ಲಕ್ಕೂ ಹೆಚ್ಚಿಗೆ ಪ್ರಿಯವಾದುದು ಆತ್ಮವೆಂದು ವೇದಾಂತವು ಹೇಳುವುದು. ಜಾಯಾ-ಪತಿಪುತ್ರಾದಿಗಳೆಲ್ಲವೂ "ಆತ್ಮನಸ್ತುಕಾಮಾಯ ಸರ್ವಂ ಪ್ರಿಯಂ ಭವತಿ" ಎಂಬಂತೆ ತನಗಾಗಿ ಪ್ರಿಯವು. ಎಂದಬಳಿಕ ತನ್ನಿಂದ ಭಿನ್ನವಾದುದರಲ್ಲಿ ನಿಜವಾದ ಪ್ರೇಮವು ಕೂಡಲಾರದೆಂಬುದು ಇಲ್ಲಿ ಸೂಚಿತವಾಗುವುದು. ಪಾರ್ವತಿ, ಪರಮೇಶ್ವರನನ್ನು ತನ್ನಿಂದ ಅಭಿನ್ನವಾಗಿ

---

* ಅವಿಭೇದಪ್ರಕೃತಿಗಳೆನಿಪ ಪವಯುವದಿಂದೊಪ್ಪುವರ್ಧನಾರೀಶ್ವರರೊಳ್ ॥ (೧೦-೮೨)

स्त्रीपुंसावात्मभागौतेभिन्नमूर्तेः सिसृक्षया ।
प्रसूतिभाजः सर्गस्यतावेवपितरौस्मृतौ ॥कु. स. २. ७.

द्विधाकृत्वात्मनोदेहमर्धेनपुरुषोभवत् ।
अर्धेननारी तस्यांसविराजमसृजत्प्रभुः ॥ – मनुः ।

भेदोस्तितत्त्वतोराजन्नमेदेवान्महेश्वरात् ।
सिद्धमेवावयोरैक्यंवेदान्तार्थविचारणात् ॥सौरपु ५५।३.

ಬೇರ್ಪಡದೆ ಕೂಡೆ ತಾನೆಯು ।
ಪರ್ವಿಖಿಳಕ್ಕೆಂಬ ನೈಜಮುಂ ಮರೆಯಿಸುತಂ ॥ ೩. ೨೩.

ನೋಡುವ ಅನುಸಂಧಾನವುಳ್ಳಾಕೆ; ಪರಮೇಶ್ವರನೂ ಅಂತೆಯೆ. ಪರಮೇಶ್ವರನು ಪಾರ್ವತಿಯನ್ನು ಪ್ರೀತಿಸುವುದೆಂದರೆ ತನ್ನನ್ನೇ ಪ್ರೀತಿಸುವುದು. ಹೀಗೆ ಪರಸ್ಪರಾಭೇದಾನುಸಂಧಾನವುಳ್ಳ ಪತಿಪತ್ನಿಯರ ಪ್ರೇಮವೇ ನಿಜವಾದುದೆಂಬದನ್ನು ಈ ಕಾವ್ಯದಲ್ಲಿ ಕವಿಯು ಪಾರ್ವತೀ ಪರಮೇಶ್ವರರ ಪ್ರೇಮದ ದೃಷ್ಟಾಂತದಿಂದ ತೋರ್ಪಡಿಸಿರುವನು.

ಪಾರ್ವತೀ ಪರಮೇಶ್ವರರ ಮದುವೆಯು-ಮಿಲನವು-ಪ್ರಕೃತಿಪುರುಷರ (ಜಡ-ಚೈತನ್ಯಗಳದಲ್ಲ) ಇಬ್ಭಾಗವಾದ ಎರಡು ಚೈತನ್ಯಗಳ ಮಿಲನವು. ಈ ಮಿಲನವು ಸಹಜವಾದುದು; ವಿಕೃತದಶೆಯಲ್ಲಿ ತೋರುವ ಭಿನ್ನತೆಯನ್ನು ತೊರೆದು ಪ್ರಕೃತದಶೆಯ ಐಕ್ಯವನ್ನು ಹೊಂದುವುದಕ್ಕೆ ಅಭಿಮುಖವಾಗುವುದೇ ಈ ಮಿಲನದ ಮೂಲವು. ಇದೇ ರತಿ ಎನಿಸುವುದು. ಸ್ತ್ರೀ ಪುರುಷರ ಸೃಷ್ಟಿಯ ಜತೆಗೆ ಈ ರತಿಯ ಜನ್ಮವು. ಸಾಹಿತ್ಯಶಾಸ್ತ್ರಕಾರರು ರತಿಯು ಸ್ಥಾಯಿ (ಸ್ಥಿರ-ಶಾಶ್ವತ) ಎಂದು ಹೇಳಿ ಅದು ಮನುಷ್ಯನಿಗೆ ಒಡಹುಟ್ಟಿದುದೆಂದು ಸೂಚಿಸಿರುವರು. ಈ ರತಿಯಿಂದ ಉಂಟಾಗುವ ಮಿಲನಕ್ಕೆ ಕಾಮನು ಬೇಕು. ರತಿಯಿಂದ ಜನಿಸುವ ಕಾಮನು* ರತಿಯ ಮಗನಾಗಬೇಕಾಗಿದ್ದರೂ ರತಿಗೆ ಸಹಾಯಕನಾದುದರಿಂದ ರತಿಯಪತಿಯು. ಕಾಮನಿಗೆ ರತಿಯೊಬ್ಬಳಲ್ಲದೆ ಆಕೆಯ ಸಹೋದರಿಯಾದ ಪ್ರೀತಿಯೂ ಒಬ್ಬ ಹೆಂಡತಿ. ಪತ್ನಿಯರ ನೆರವಿಲ್ಲದೆ ಕಾಮನು ತನ್ನ ಕಾರ್ಯವನ್ನು ಮಾಡಲಾರನು. ಅಂತೆಯೆ ಕಾಮನು ಹರಸಮಾಧಿ ಭಂಗಕ್ಕೆ ಹೊರಡುವಾಗ ರತಿಯೊಡನೆ ಹೊರಡುವನು‡

ಪುರುಷನು ಸಬಲನು, ಸ್ತ್ರೀಯು ಅಬಲೆ; ಪುರುಷನು ವಿರಕ್ತಿಯ ಒಲವುಳ್ಳವನು; ಸ್ತ್ರೀಯು ಸಂಸಾರದ ಒಲವುಳ್ಳವಳು; ಪುರುಷನು ಸೃಷ್ಟಿಲೀಲೆಗೆ ಪರಾಙ್ಮುಖನು, ಸ್ತ್ರೀಯು ಸೃಷ್ಟಿಲೀಲೆಗೆ ಅಭಿಮುಖಿ; ಪುರುಷನು ಸೃಷ್ಟಿಲೀ

---

* संगात्सञ्जायतेकाम: ।भ. गीता.

‡ ಪಶ್ಚಿಮಾಸನದೊಳ್ ರತಿದೇವಿಯುಂ ಇರಿಸಿ ಕಾಮದೇವಂ ಹೇಮಕೂಟಾಭಿಮುಖನಾಗಿ ೭-೭೨.

रत्याच साशंकमनुप्रयात: कु. सं. ३. २३.

ಲಾಭಿಮುಖನಾಗುವುದಕ್ಕೆ ರತಿಕಾಮರ ಪ್ರಯತ್ನವು ಬೇಕು. ಅವರ ಪ್ರಯತ್ನವು ಪುರುಷನಿಗೆ ಸ್ತ್ರೀ ಸನ್ನಿಧಾನವಿರುವಾಗ ಮಾತ್ರ ಸಫಲವಾಗುವುದು. ಅಂತೆಯೆ ಹರಸಮಾಧಿಭಂಗಕಾಲದಲ್ಲಿ ಪಾರ್ವತಿ ದೂರದಲ್ಲಿರುವವರೆಗೆ ಆತನ ಪ್ರಯತ್ನವು ನಿಷ್ಫಲವಾಯಿತು. ಪಾರ್ವತಿ ಶಿವನ ಹತ್ತಿರ ಬರಲು ಕಾಮನಿಗೆ ಬಲವು ಬಂದಂತಾಯಿತು. ಅದರಿಂದಾತನು:—

ಇನ್ನಂಜೆನಂಜೆನಾಹಾ |
ಉನ್ನತ ಬಲವಾಯ್ತು............... ೮–೪೩.

ಎಂದು ಉಬ್ಬುವನು. ಕಾಲಿದಾಸನೂ ಈ ಸಂದರ್ಭವನ್ನು ಹೀಗೆಯೇ ಚಿತ್ರಿಸಿರುವನು. ಪಾರ್ವತಿಯು ಸನ್ನಿಧಾನವಿಲ್ಲದಿರುವಾಗ ಕಾಮನು ಎದೆಗುಂದುವನು; ಅವನ ಬಿಲ್ಲು ಕೈಯಿಂದ ಕಳಚಿಬೀಳುವುದು. ಆ ಸಮಯದಲ್ಲಿ ಪುಷ್ಪಾಭರಣಾಲಂಕೃತೆಯಾದ ಪಾರ್ವತಿ ಹರನ ಬಳಿಗೆ ಬರುವಳು. (ಕು. ಸಂ. ೩–೫೨) ಆಗ ಕಾಮನು—

**जितेंद्रियेशूलिनिपुष्पचापः ।**
**स्वकर्मसिद्धिंपुनराशंस** ॥ ३. ५७.

ಶೂಲಿಯು ಜಿತೇಂದ್ರಿಯನಾಗಿದ್ದರೂ ಆತನನ್ನು ಗೆಲ್ಲುವೆನೆಂದು ಧೈರ್ಯಗೊಂಡನು. ಧನಋಣ ವಿದ್ಯುತ್ತುಗಳು ಒಂದನ್ನೊಂದು ಕೂಡುವುದಕ್ಕೆ ಅವುಗಳ ಸನ್ನಿಕರ್ಷವು ಬೇಕಾಗುವುದಲ್ಲವೇ ?

ಹೀಗಿದ್ದರೂ ಕಾಮನು ಜರುಗಿಸುವ ಮಿಲನದ ಪ್ರೇಮವು ನಿಜವಾದ ಪ್ರೇಮದ ಒರೆಗೆ ಬಾರದು. ಕಾಮನು ಸಮ್ಮೋಹನಾದಿ ಬಾಣಗಳಿಂದ ಹೊಡೆದಾಗ ಶಿವನಲ್ಲಿ ಉಂಟಾದುದು ವಿಕಾರವು. 'ಮದನನ ಪಂಚಬಾಣಂ ಪರಿತಂದಡಸಿ ಮನಮಂ ಇರ್ಮೆಯಗ್ಗಂಡು ಸಹಸ್ರ ಮುಖದಿಂ ಸಂಚಲಮುಂ ಈಯೆ ಭೂತೇಶ್ವರಂ ಆನೇಕೆ ಈ ಮಾನಿನಿಯೇಕೆ ಈ ತಾಪಂ ಎಲ್ಲಿಯದು?' ಎಂದು ಕಳವಳಬಡುವನು.* ಹರಿಹರನ ಕಾಮನು ಹರನ ಸಮಾಧಿಭಂಗವನ್ನು

---

* **अथेंद्रियक्षोभमयुग्मनेत्रः पुनर्वशित्वाद्बलवन्निगृह्य ।**
**हेतुंस्वचेतोविकृतेर्दिदृक्षुर्दिशामुपांतेषुससर्जदृष्टिम्** ॥ कु. सं. ३.६.

ಮಾಡುವನು. ಆದರೆ ಕಾಲಿದಾಸನ ಕಾಮನು ಇನ್ನೂ ಅಸಮರ್ಥನು. ಶಿವನು ತಾನಾಗಿ ಸಮಾಧಿಯಿಂದಿಳಿದಾಗ ತನ್ನ ಕಾರ್ಯವನ್ನು ಮಾಡುವನು. ಸ್ತ್ರೀಸನ್ನಿಕರ್ಷವು (ಸಾಮೀಪ್ಯವು) ಕಾಮನ ಈ ಕಾರ್ಯಕ್ಕೆ ಬಲವಾದ ಸಹಾಯವು.*

ಕಾಮನಿಂದ ವಿಕಾರವುಂಟಾಗದಂತೆ ನೋಡಿಕೊಳ್ಳುವುದು ವಿವೇಕವು. ವಿವೇಕವು ಜೀವನನ್ನು ಒಳ್ಳೆಯ ದಾರಿಗೆ ತರುವ ಆಳು. ಇಲ್ಲಿ ನಂದಿಯು ಇಲ್ಲವೆ ಶೈಲಾದಿಯು ಶಿವನಲ್ಲಿ ವಿಕಾರವುಂಟಾಗದಂತೆ ನೋಡಿಕೊಳ್ಳುವನು. ಅಂತೆಯೇ ಆತನು ಶಿವನ ನಂಬುಗೆಯ ಆಳು. ಜೀವನು ಈ ವಿವೇಕವನ್ನು ಮೀರಿ ವಿಕಾರಕ್ಕೊಳಗಾಗುವನು. ಅಂತೆಯೇ ಕಾಮನು ತ್ರಿಲೋಕವಿಜಯಿ. ವರ್ಷವರ್ಷ ನಾವು ಕಾಮದಹನದ ಆಟವನ್ನು ಒಂದು ದಿನ ಮಾಡಿದರೂ ಪ್ರಯೋಜನವೇನಿದೆ ?

ವಿಕಾರಮೂಲಕವಾದ ಕಂದರ್ಪಕೃತ ಸಮಾಗಮವು ಅಸ್ವರಸವೆಂದು ಕವಿಗಳು ಹೇಳುವರು. ಸಂಭೋಗಶೃಂಗಾರಕ್ಕಿಂತ ವಿಪ್ರಲಂಭ ಶೃಂಗಾರವು ಅವರಿಗೆ ಹೆಚ್ಚಿಗೆ ಸುಂದರವು. ಕಂದರ್ಪಸಮಾಗಮದಂತೆಯೆ ಅದಕ್ಕೆ ಕಾರಣವಾಗುವ ಪ್ರೇಮವೂ ಅವಸ್ತು; ಅಸ್ವರಸ. ಆದುದರಿಂದ ಹರಿಹರನು ಪಾರ್ವತಿಯ ಪ್ರೇಮವನ್ನು ವರ್ಣಿಸುವಾಗ ಆಕೆಯಲ್ಲಿ ಈ ಕೀಳುಪ್ರೇಮಕ್ಕಿಂತ ಮೇಲುತರಗತಿಯ ನಿರ್ವ್ಯಾಜ ಪ್ರೇಮವನ್ನೇ ತೋರಿಸಿದನು. ಶಿವನ ಪ್ರಥಮ ದರ್ಶನದಲ್ಲಿ [ಕೌತುಕ ರಸದೊಳ್ ಆನಂದಂ ಪುಟ್ಟೆ ಭಯರಸದೊಳ್ ಭಕ್ತಿಯುಣ್ಮೆ ಸ್ನೇಹರಸದೊಳ್ ತಾತ್ಪರ್ಯಂ ಪೊಣ್ಮೆ ಮುಂದೆ ನಿನ್ನ ವಾಮಭಾಗಮಂ ಸೂರೆಗೊಳ್ವುದರ್ಕಿದೆ ಕುರುಪೆಂಬಂತೆ (೫-೪೨)] ಆಕೆಗೆ ಕೌತುಕದಿಂದ ವಿಕೃತಿಇಲ್ಲ, ಆನಂದವು; ಭಯದಿಂದ ವಿಕೃತಿಇಲ್ಲ, ಭಕ್ತಿಯು; ಸ್ನೇಹದಿಂದ ವಿಕೃತಿಇಲ್ಲ, ತನ್ಮಯತೆ ಉಂಟಾಯಿತು. ಆಗಳಾಕೆ ಒಮ್ಮೆ "ಅನಿರ್ದಂತಿರದೇಕೆ, ಬೇಡ ತಪಂ" ಎಂಬಂತೆ (೫-೪೩) ಅಹಂಕಾರದಿಂದ ಆತನನ್ನು ನೋಡಿದರೂ ಕೂಡಲೆ "ನೀನೇ ಸದ್ಗತಿ ದೇವ ದೇವ ದಯೆಗೆಯ್" ಎಂಬಂತೆ ಕಾರ್ಪಣ್ಯದಿಂದ ನೋಡುವಳು. ಒಮ್ಮೆ ನಾನಾಭೋಗದೊಳೆಂದು

---

* ಪುಷ್ಪಚಾಪಂ ನಂದೀಶ್ವರನ ಶಾಪಿನ ಸೀಮೆಯುಂ ಕಳಿದು ೮.೨೧.

ಕೂಡಿದಪೆಂ '' ಎಂಬಂತೆ ಆಶೆಯಿಂದ ನೋಡಿದರೂ ಕೂಡಲೆ ಸಾನಂದಾತ್ಮಕ ನೆನ್ನನೇಕರಿಪಂ'' ಎಂಬಂತೆ (೫-೪೩) ನಿರ್ವೇದದಿಂದ ನೋಡುವಳು. ಒಮ್ಮೆ ಶೃಂಗಾರಕ್ಕೆ ಮನದಂದು ವೈರಾಗ್ಯಕ್ಕೆ ಮೆಯ್ದಿಗೆದು ವಿಷಯಾಭಿಲಾಷೆ ನನ್ನಂ ಸುತ್ತಿದೆ; ಈ ಕಪರ್ದಿ ನೋಡದೊಡೆ ಎನಗಾದುದು ಕುಮುದಂ (೫-೪೭) ಎಂದು ಕಳವಳ ಬಡುವಳು. ಈ ಹೊಯ್ದಾಟದಲ್ಲಿ ಕೊನೆಗೆ ಈ ದಾರಿಯಿಂದ ಶಿವನ ಪ್ರಾಪ್ತಿ ಸಾಧ್ಯವಲ್ಲವೆಂದು ಮನಗಂಡು—

ನಿಗಮಂಗಳ್ ವಿಷ್ಣುವಿರಿಂ |
ಚಿಗಳರಿಯುದ ಶಿವನನರಿವೊಡೆನ್ನಳವೇ ಪೇಳ್ ||
ಬಗೆವೊಡೆ ಸಾತ್ವಿಕ ಶಿವಭ |
ಕ್ತಿಗಲ್ಲದಭವಂ ಸಮಂತು ಸಿಲ್ಕಂ ನಿಲ್ಕಂ || ೫-೪೯

ಎಂದು ಸಾತ್ವಿಕ ಶಿವಭಕ್ತಿಗೆ ಅಭಿಮುಖಿಯಾಗುವಳು. ಈಗ ಆಕೆಗೆ ಕಾಮ ಸಂಭೋಗವು ಅಭಿಲಷಣೀಯವಲ್ಲ; ಸದಮಲ ಶಿವಸುಖವು '' (೫-೫೦) ಅಭಿಲಷಣೀಯವು. ಕಾಮ ಮೂಲಕ ಶಿವಸಮಾಗಮವು ಆಕೆಯ ಧ್ಯೇಯವಲ್ಲ, ಶಿವನ ಅರ್ಧಾಂಗರೂಪ ಪ್ರಾಪ್ತಿ (೫-೫೦) ಶಿವನೊಡನೆ ಸಾಮರಸ್ಯ—ಐಕ ರೂಪ್ಯ ಇವು ಧ್ಯೇಯವು.

**ಸಾರಾಂಶವೇನೆಂದರೆ:**— ಮೊದಲು ಪರಮಾತ್ಮನು ಲೋಕಸೃಷ್ಟಿಗಾಗಿ ಇಬ್ಭಾಗವಾದನು. ಒಂದು ಭಾಗವು ನರ, ಇನ್ನೊಂದು ನಾರಿ; ಈ ಅರ್ಧನಾರೀಶ್ವರನ ಲೌಕಿಕ ರೂಪವೇ ದಾಕ್ಷಾಯಣೀ ಮಹೇಶ್ವರರು—ಪಾರ್ವತೀ ಪರಮೇಶ್ವರರು. ಅವರ ಮಿಲನವು ಸ್ವಾಭಾವಿಕವಾದುದು. ಅದಕ್ಕೆ ಪರಸ್ಪರಾಕರ್ಷಣವೇ ಹೇತು. ಇಲ್ಲಿಯೇ ರತಿಯ ಉತ್ಪತ್ತಿ. ರತಿಗೆ ಕಾಮನು ಸಹಾಯಕನು. ಯೌನ (ಕಾಮಕೃತ) ಮಿಲನವು ಗೌಣವು, ಗೌರೀಹರರ ಮಿಲನವು ಸ್ವತಃಸಿದ್ಧ. ಕಾಮದಹನ ಮಾಡುವ ವರ, ರಾಜಸಪ್ರೇಮದ ದಾರಿಯ ಬಿಟ್ಟು ಸಾತ್ವಿಕ ಪ್ರೇಮದ (ಸಾತ್ವಿಕ ಭಕ್ತಿಯ) ದಾರಿಯ ಹಿಡಿದ ವಧು; ಇವರೇ ಗೌರೀಹರರು. ಸಾತ್ವಿಕ ಭಕ್ತಿಯಿಂದ ಯಾವ ಜೀವನಾದರೂ ಶಿವನೊಡನೆ ಮದುವೆಯಾಗಿ-ಶಿವಮಿಲನವನ್ನು ಹೊಂದಿ-ಶಿವನ ಅರ್ಧಾಂಗವನ್ನು ಎಂದರೆ ಶಿವಸಾಮರಸ್ಯವನ್ನು ಪಡೆಯಲಾಪನು. ಹರಿಹರನು ತನ್ನ ಗಿರಿಜಾಕಲ್ಯಾಣವಲ್ಲಿ ಹೇಳಿದುದು ಇದೇ ವಿಷಯ. ಆತನ ಕಾವ್ಯದ ಗುರಿ ಇದೇ.

## ೯. ಗಿರಿಜಾಕಲ್ಯಾಣದಲ್ಲಿ ನಾವು ನೋಡಬೇಕಾದುದೇನು?

ಗಿರಿಜಾಕಲ್ಯಾಣದಲ್ಲಿ ಮುಖ್ಯವಾಗಿ ನಾವು ನೋಡಬೇಕಾದುದು ನಿರ್ವ್ಯಾಜ ಪ್ರೇಮದ ಬಲ, ಪವಿತ್ರ ಪ್ರೇಮದ ಭಾವ, ಸಾತ್ವಿಕ ಭಕ್ತಿಯ ಮಹಿಮೆ. ಪಾರ್ವತಿ ಮೊದಲು ಮಾಡಿದ ವ್ಯಾಜಸೇವೆ—ಪುಷ್ಪಮಾಲ್ಯಗಳಿಂದ ಮಾಡಿದ ಪೂಜೆ–ವ್ಯರ್ಥವಾಯಿತು. ಕಾಮನ ಬಯಕೆ ಈಡೇರಲಿಲ್ಲ. ಆತನಿಂದ ಶಿವನಲ್ಲಿ ವಿಕೃತಿ ಉಂಟಾಯಿತು. ಅದು ಕಲ್ಯಾಣಕರವಾಗಲಿಲ್ಲ. ಕಾಮನು ತುಚ್ಛ, ಅವಸ್ತು. ಅಂತೆಯೇ ಆತನು ದಗ್ಧನಾಗುವನು; ಆಗಬೇಕು. ಆತನು ದಗ್ಧನಾದ ತರುವಾಯವೇ ಪಾರ್ವತಿಯಲ್ಲಿ ಶಿವನಿಗೂ, ಶಿವನಲ್ಲಿ ಪಾರ್ವತಿಗೂ, ಪವಿತ್ರವಾದ ಅನುರಾಗವುಂಟಾಗುವುದು; ಇದೇ ಕಲ್ಯಾಣಕರವಾಯಿತು. ಇದರಿಂದಲೇ ಶಿವಸಾಕ್ಷಾತ್ಕಾರವಾಯಿತು; ಶಿವಮಿಲನವಾಯಿತು. ಸಾತ್ವಿಕ ಭಕ್ತಿಯಿಂದ ಗಿರಿಜೆಯಂತೆ ಯಾರಾದರೂ ಶಿವಮಿಲನವನ್ನು ಪಡೆಯಲಾಪರು. ಅಂತೆಯೇ ಗಿರಿಜೆಯ ಕಲ್ಯಾಣವು ಜಗತ್ತಿಗೆ ಕಲ್ಯಾಣದ ದಾರಿಯನ್ನು ತೋರುವುದರಿಂದ ಈ ಲೇಖದ ಆರಂಭದಲ್ಲಿ "ಗಿರಿಜಾಕಲ್ಯಾಣವು ಜಗತ್ತಿನ ಕಲ್ಯಾಣ" ವೆಂದು ಹೇಳಿದೆವು.

## ೧೦. ಸಮಾಪ್ತಿ.

ಜಗತ್ತಿನ ಮಾತಾ-ಪಿತೃಗಳನ್ನು ಕಾಮಿನೀ ಕಾಮುಕರಂತೆ ಮಾಡಿ ಅವರ ಸಂಭೋಗಶೃಂಗಾರವನ್ನು ವರ್ಣಿಸಿದನೆಂದು ಕವಿಕುಲ ಸಾರ್ವಭೌಮ ಕಾಲಿದಾಸನ ಆ ವರ್ಣನೆಯನ್ನು ಸಾಹಿತ್ಯಕಾರರು ಎತ್ತೆಣಿಸಿದರು. ಗೌರೀ-ಹರರ ಸಾತ್ವಿಕಪ್ರೇಮವನ್ನು ವರ್ಣಿಸಿದನೆಂದು ಹರಿಹರನನ್ನು ಭಕ್ತಕವಿಯೆಂದು ಎಲ್ಲರೂ ಕೊಂಡಾಡಿದರು.

ಜಯ ಜಯತು ಶುಭೋದಯೆ |
ಜಯತು ಮಹಾಮಾಯೆ ಜಯತು ಶರ್ವಾಣಿ ಶಿವ ||
ಪ್ರಿಯೆ ಶಾಶ್ವತೆ ಶಾಂತೆ ಜಗ |
ತ್ತ್ರಯ ಹಿತೆ ಶರಣೆನುತು [ ಮಿರ್ಪೆ ಪೊರೆಯೌ ತಾಯೇ ] ||
೩-೫೯ ||.

सर्वमंगल मांगल्येशिवेसर्वार्थसाधिके ॥
शरण्ये त्र्यम्बके गैारि नारायणि नमोस्तुते ॥

ಭದ್ರಂ ಶಿವಂ ಮಂಗಲಂ.

೧೮೫೬ ಭಾವ ಸಂ.
ಬನದ ಹುಣ್ಣಿವೆ.
ತಾ-೧೯-೧-೧೯೩೫.
ಧಾರವಾಡ.

ಶ್ರೀ ಮಾತಾಪಿತೃ ಚರಣಾರವಿಂದಾರ್ಪಿತಂ.

**ಮ. ಪ್ರ. ಪೂಜಾರ್.**



# ಹರೀಶ್ವರನ ಇಬ್ಬರು ಮಹಾನುಭಾವರು.

ಬರೆದವರು:— **ಶ್ರೀ ಅ. ನ. ಕೃಷ್ಣರಾಯರು.**
" ಅನ್ನಪೂರ್ಣ " ವಿಶ್ವೇಶ್ವರಪುರಂ.



ಕನ್ನಡ ಸಾಹಿತ್ಯದ ಉತ್ಕ್ರಾಂತಿಗೆ ವೀರಶೈವ ಕವಿಗಳು ಮಾಡಿರುವ ಮಹತ್ಸೇವೆಯನ್ನು ಅಳೆಯಲಳವಲ್ಲ. ಚಂಪುವಿನ ಸುವರ್ಣಶೃಂಖಲೆಯಿಂದ ಕನ್ನಡ ಮಾತೆಯನ್ನು ಬಿಡಿಸಿ ಶುಭ್ರವಾದ ಶ್ವೇತಾಂಬರವನ್ನು ತಮ್ಮ ತ್ರಿಕರಣಪೂರ್ವಕವಾದ ಸ್ವಾತಂತ್ರ್ಯಾಭಿಮಾನದಿಂದುಡಿಸಿ, ಕನ್ನಡ ನುಡಿಯೊಡತಿಯು ಹೆಮ್ಮೆಯಿಂದ ಬಿರ್ರನೆ ಬೀಗಿ ಮೆರೆಯುವಂತೆ ಮಾಡಿದ ಅಣ್ಣಗಳಲ್ಲಿ ಹರೀಶ್ವರನೂ ಒಬ್ಬನು, ಗಣ್ಯನು. ಜನಜನಿತವಾದ ರಗಳೆಯ ಧಾಟಿಯನ್ನೇ ಅವಲಂಬಿಸಿ ಸಾಧುಸಂತರ ಜೀವನಗಳಿಗೆ ತನ್ನ ಆತ್ಮಶಕ್ತಿಯ ಕುಂದಣವಿಕ್ಕಿ ಕನ್ನಡ ಸಾಹಿತ್ಯ ಸಾಮ್ರಾಜ್ಯಕ್ಕೆ ಮಾತ್ರವಲ್ಲದೆ ಜನಜೀವನಕ್ಕೆ ಧಾರಾಳವಾದ ಸೇವೆಯನ್ನು ಹರೀಶ್ವರನು ಸಲ್ಲಿಸಿದ್ದಾನೆ. ತಾನು ಹೇಳುವುದು "ಸತ್ತವರ ಕಥೆಯಲ್ಲ ಜನನದ | ಕುತ್ತದಲಿ ಕುದಿಕುದಿದು ಕರ್ಮದ | ಕತ್ತಲೆಗೆ ಸಿಲುಕುವವರ ಸೀಮೆಯ ಹೊಲಬು ತಾನಲ್ಲ || ಎಂದು ಚಾಮರಸನಂತೆ ಹರೀಶ್ವರನು ಬಾಯಲ್ಲಿ ಆಡದಿದ್ದರೂ, ಕೃತಿಯಲ್ಲಿ ತೋರಿದ್ದಾನೆ. ತನ್ನ ಕೃತಿಯು ಪ್ರಿಯವಚನದಂತೆ ಪುಣ್ಯಕಲೆಯಂತೆ ಸುಧಾರಕನಂತೆ ಕೂರ್ತ ಮು | ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ | ಲೆಯ ಪೊಸಕಂಪಿನಂತೆ ಮಲಯಾನಿಲನಂತೆ ಮರಾಳನಂತೆ " ಎಂದು ಹೇಳಿಕೊಂಡಿರುವುದು ಸಹಜೋಪಮೆಯಲ್ಲದೆ ಅತಿಶಯೋಕ್ತಿಯಲ್ಲವೆನ್ನುವುದು ಅವನ ಕಾವ್ಯಗಳ ತನಿರಸವನ್ನು ಸವಿದವರೆಲ್ಲರ ಅನುಭವಕ್ಕೂ ಬಂದೇಬರುತ್ತದೆ.

ಹರೀಶ್ವರನು ಗಿರಿಜಾಕಲ್ಯಾಣವೆಂಬ ಚಂಪೂ ಕಾವ್ಯವನ್ನೂ, ಅನೇಕ ರಗಳೆ ಶತಕಗಳನ್ನೂ ಬರೆದಿದ್ದಾನೆ. ರಗಳೆಗಳನ್ನೇ ಬರೆಯುತ್ತಿದ್ದ ಹರೀಶ್ವರ

ನನ್ನು "ರಗಳೆಗಳ ಕವಿ" ಯೆಂದು ಜನರು ಪರಿಹಾಸ್ಯ ಮಾಡಿಕೊಂಡಂತೆ-ಯೂ, ಅದಕ್ಕೆ ಹರೀಶ್ವರನು ತನ್ನ ಚಂಪೂಕವನ ಸಾಮರ್ಥ್ಯವನ್ನು ತೋರಲು ಗಿರಿಜಾಕಲ್ಯಾಣವನ್ನು ಬರೆದಂತೆಯೂ ಪ್ರತೀತಿಯಿದೆ. ಉದ್ದಾಮ ಕವಿಯೂ ಪರಮ ಶಿವಭಕ್ತಶಿರೋಮಣಿಯೂ ಆದ ಹರೀಶ್ವರನು ಜನತೆಯನ್ನು ಮೆಚ್ಚಿಸುವುದಕ್ಕಾಗಲೀ, ಅರ್ಚಿಸುವುದಕ್ಕಾಗಲೀ ಲೆಕ್ಕಣಿಯನ್ನು ಎಲ್ಲಿಯೂ ಹಿಡಿದಂತಿಲ್ಲ. ರಗಳೆಗಳಿಂದ ಶಿವಗಣಗಳನ್ನು ನುತಿಸಿದ ಮೇಲೆ ಸ್ವಾಭಾವಿಕವಾಗಿ ಅವನ ಮನಸ್ಸು "ಬೆಳೆದು ಕವಲೊಡೆದು ನೀಳ್ದ ಪ್ರವಾಳ ಜಾಳದಂತೆ ಬೆಂಬಳಿವಿಡಿದಿಳಿದ ಕೆಂಜೆಡೆಗಳಿಂ ಸುತ್ತಿದ ಜಟಾಬಂಧದೊಳಗಣ ಸುರನದಿಯೆಂಬ ಸರೋಜಿನೀ ತಟದೊಳಗಿರ್ಪ ಬಿಸಕಂದದಂಕುರದಂತಿರ್ದ ಚಂದ್ರಕಳೆಯಿಂ, ವಿದ್ಯುಲ್ಲತಾಗರ್ಭೀಕೃತಶಾರದಾಭ್ರವಿಭ್ರಮದಂತೆ ಭಸಿತಮುಂ ಮುಸುಂಕಿದ ಬಿಸುಗಣ್ಣಿಂ ಮೆರೆವ ಲಲಾಟ ಪಟ್ಟದಿಂ, ಶೃಂಗಾರದ ತವರ್ಮನೆಯುಮಂತಿರ್ದ ಮುಖಮಂಡಲದಿಂ, ನಯಮುಂ ಕರೆವ ನಾಗಕುಂಡಲದಿಂ, ಹರನೊಳನೆರೆಯಲ್ ಬಂದ ಕಾಳಿಂದೀನದಿ ಸುರನದಿಗೆ ಸೋಲ್ತಿಳಿದಂತಿರ್ದ ಕೊರಳ ಗರಳದಿಂ, ಕಲ್ಪಕುಜದ ಶಾಖೆಗಳಂತಿರ್ದ ದಶಭುಜಂಗಳ ತೋಳ್ಪುರುಗಲಿಂ, ವೇದಂಗಳ್ ತನ್ನ ಕಾಣದಂತೆ ಮುಸುಂಕಿದ ಮಾಯಾಪಟಲವೆನಿಪ ಗಜಚರ್ಮದಿಂ, ಎಳವಿಸಿಲ ಬೆಳಗಂ ತರುಣ ತರಣಿಗೆ ಕಡಂಗೊಡುವ ಪ್ರಭಾಮುಕೂಲದಂತಿರ್ದ ಪುಲಿದೊಗಲಿಂದೊಪ್ಪಿದ ಪಶುಪತಿಯ ಕಡೆಗೆ ಸ್ವಾಭಾವಿಕವಾಗಿಯೇ ಹರಿದು ಗಿರಿಜಾಕಲ್ಯಾಣವನ್ನು ಬರೆಯುವಂತೆ ಪ್ರೇರೇಪಿಸಿರಬಹುದು. ಶತಕವನ್ನೇ ಸೃಷ್ಟಿಸಲಿ, ರಗಳೆಯನ್ನೇ ರಚಿಸಲಿ, ಕಾವ್ಯದಲ್ಲೇ ಕೈಯಾಡಲಿ ಹರೀಶ್ವರನದು ಅರಿತನುರಿತ ಕೈ ಎನ್ನುವುದರಲ್ಲಿ ಸಂದೇಹವಿಲ್ಲ.

ಹರೀಶ್ವರನು ಇತರ ಕವಿಗಳಿಗಿಂತಲೂ ಒಂದು ವಿಚಾರದಲ್ಲಿ ಮೇಲ್ತರಗತಿಯವನು. ಅವನ ಹಾಗೆ ಹವಣಿನ ಬೆಲೆಯನ್ನರಿತಿರುವ ಕವಿಗಳು ಇಡೀ ಕನ್ನಡ ಸಾಹಿತ್ಯದಲ್ಲಿಯೇ ನಾಲ್ಕಾರು ಜನರು ಕೂಡ ದೊರೆಯಲಾರರೆಂದರೆ ತಪ್ಪಾಗದು. ಪ್ರಭುದೇವರ ರಗಳೆಯಲ್ಲಿ ಕಾಮಲತೆಯ ರೂಪವರ್ಣನೆಗೆ ಸದವಕಾಶದೊರೆತಾಗ "ರೂಪಿನೊಳು ರತಿಸರಸ್ವತಿಗುಪ್ಪರಂಗಟ್ಟಿ | ಪೆಸರೆಸೆವ ಕಾಮಲತೆ ಯೆಂದೆಂಬ ನಾಮದಿಂ | ದೊಸೆದು ಸೌಭಾಗ್ಯಲತೆ-ಕುಡಿಯಿಡಲ್

ಪ್ರೇಮದಿಂ | ಶಶಿಕಿರಣದಂತೆ ಬೆಳೆದಳ್ ಬೆಳೆದಳಮ್ಮಮ್ಮ | ಕುಸುಮಶರದಂತೆ ನೆರೆದಳ್ ನೆರೆದಳಮ್ಮಮ್ಮ | ರತಿಗಿತಿಯ ರಂಭೆಗಿಂಬೆಯ ಮಾತು ಬೇಡಿಲ್ಲಿ | ಮತಿಗಿತಿಗೆ ಪೊಗಳ್ವಗಿಗಳ್ವಾಸೆಗಳ್ ಪುಗವಿಲ್ಲಿ | ಈತೆರದೊಳೆಸೆವ ಸೊಬಗಿನ ರೂಪನೊಳಗೊಂಡು '' ಎಂದು ಹೇಳಿ ಮುಗಿಸಿಬಿಡುತ್ತಾನೆ. ಕಾವ್ಯದಲ್ಲಿ ಕವಿಯ ಕಣ್ಣೆಲ್ಲಾ ತನ್ನ ಪ್ರಧಾನವಸ್ತುವಿನ ಕಡೆಯೇ ಇರುತ್ತದೆ. ಪ್ರಭುವಿನ ಕಥೆ ಹೇಳಹೋಗಿ ಕಾಮಲತೆಯ ರೂಪವರ್ಣನೆಯಲ್ಲಿ ಮೂಲ ಉದ್ದೇಶವು ಮುಳುಗುವಂತೆ ಮಾಡುವ ಚಾಪಲ್ಯಕ್ಕೆ ಹರೀಶ್ವರನು ಮನತೆತ್ತಿಲ್ಲ ಬಸವರಾಜದೇವರ ರಗಳೆಯಲ್ಲಿ ಒಂದು ಕಠಿಣ ಸಮಸ್ಯೆಯೊದಗುತ್ತದೆ. ಬೇಡಿಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ" ಎಂಬ ವಚನವನ್ನು ಕೇಳಿ ಮಹಾದೇವಿಶೆಟ್ಟಿಯೆಂಬ ಮಹಾಭಕ್ತನು ಬಸವಣ್ಣನವರನ್ನು ಪರೀಕ್ಷಿಸಲು ಬರುತ್ತಾನೆ. ಅವನು ಕೇಳಿದ ಸಮಸ್ತ ಕನಕರತ್ನಾಭರಣಗಳನ್ನು ಶಿವನನುಗ್ರಹದಿಂದೆ ಕೊಟ್ಟು ಕಳುಹಿಸಲು ಸಾಕ್ಷಾತ್ ಶಿವನೇ ''ಮನಮಂ ಮತ್ತೆ ಪರೀಕ್ಷಿಪೆಂ. ಮಹಾದೇವಿಶೆಟ್ಟಿಗೆ ಕನಕರತ್ನಂಗಳಂ ಕೊಡುವುದರಿದಲ್ಲ. ''ಕುಲವಧುವಂ ಕೊಡಲರಿದು" ಎಂದುಕೊಂಡು ಬಂದು ಹಾಗೆಯೇ ಬಸವರಾಜನನ್ನು ಬೇಡುತ್ತಾನೆ. ಬಸವರಾಜನು ಪರಿಚಾರಕರಂ ಪುರದೊಳಯಿಂಕೆ 'ಕಳುಪಲವರಿವರೆನ್ನದೆ ಪುಣ್ಯಾಂಗನೆಯರೆಲ್ಲಂ ಕೂಡಿ ದಂಪತಿಗಳಾಗಿರೆ, ದೇವಾ ಎಲ್ಲಿಯುಂ ತೆರವಿಲ್ಲ ಎಂದು ಬಿನ್ನೈಸೆ ಕೌತುಕಂಬಟ್ಟು— ಅರಿದೆನರಿದೆಂ ತನ್ನ ಮಾಯವೆನ್ನಂ ಕೊಳುವುದೆ? ''ಸಿರಿಸರಸ್ವತಿಗಳಂ ಕೀಳ್ಮಾಡುವ ತನ್ನರಸಿ ಮಾಯಿದೇವಿಯರಂ ತಂದು ಕೊಡುವೆಂ" ಎಂದು ತನ್ನ ಸತೀರತ್ನಮಾಯಿದೇವಿಯನ್ನು ಕರೆತಂದು ಜಂಗಮನ ''ಸಜ್ಜೆಯಂ ಮನೆಯ ಪೊಗಿಸಿ ಮುಚ್ಚಳನಿಕ್ಕಿಕೊಂಡು ಬಸವಂ ಪೊರವಾಗಿಲೊಳಿರೆ" ಮಾಯಿದೇವಿಯರು ದೇವನ ತೊಡೆಯಂ ಹೊಯ್ದೆಬ್ಬಿಸಿ ದೇವನ ಪುಸಿಮುಸುಕನೊಯ್ಯನೋಸರಿಸೆ, ಮಾಯೆಯ ಜವನಿಕೆಯಂ ತೆಗೆದಂತೆ ದೇವನ ಚೋಹವಳಿದು ದಶಭುಜಂ ಪಂಚವದನ ತ್ರಿಣೆತ್ರನಾಗಿರೆ, ಮಾಯಿದೇವಿಯರು ನೋಡಲಮ್ಮದೆ ನಡನಡಂನಡುಗಿ ಬಸವ ಬಸವಾ ಜಂಗಮದೇವರು ಸಂಗಮದೇವರಾದರೆನೆ; ತಾಯೆ ತಾಯೆ ಮುನ್ನವಾರೆಂದು ಕೊಟ್ಟೆನೆಂದು ನುಡಿವಲ್ಲಿ ಮುನ್ನವೆ ಸಂಗಮೇಶ್ವರಂ ಬಸವನ ಚಿತ್ತಮಂ ಪರೀಕ್ಷಿಸಲಾರದೆ ಸೋಲ್ತು ಬೇಗದಿಂದಂತರ್ಧಾನಕ್ಕೆ ಸಂದುದಂ ಮಾಯಿದೇ

ವಿಯರು ಕಂಡು" ಎಂದು ಹೇಳಿ ಮುಗಿಸಿದ್ದಾನೆ. ಸಾಮಾನ್ಯಕವಿಗಳು ಈ ವಸ್ತುವನ್ನು ಅಶ್ಲೀಲ ಮಹಾಸಾಗರದಲ್ಲಿ ಮುಳುಗಿಸುತ್ತಿದ್ದರು, ಇಲ್ಲವೆ ಮುಟ್ಟಲಾಗದೆ ಬಿಡುತ್ತಿದ್ದರು—ಹರೀಶ್ವರನು ಬಸವರಾಜ-ಮಾಯಿದೇವಿಯರ ಗೌರವಕ್ಕೆ ಕುಂದುಬಾರದಂತೆ ಈ ವಸ್ತುವನ್ನು ನಿರ್ವಹಿಸಿದ್ದಾನೆ. ವರ್ಣನೆಯೇ ಆಗಲಿ, ಅಲಂಕಾರವೇ ಆಗಲಿ, ಚಿತ್ರನಿರೂಪಣೆಯೇ ಆಗಲಿ, ಉಪದೇಶವೇ ಆಗಲಿ, ಯಾವದೇ ಆದರೂ ಹರೀಶ್ವರನು ಅವುಗಳಿಗೆ ಕಾವ್ಯದಲ್ಲಿ ಯಾವ ಸ್ಥಾನ, ಯಾವ ಯೋಗ್ಯತೆ ಎಂಬುದನ್ನು ಮೊದಲು ನಿಷ್ಕರ್ಷಿಸಿಕೊಂಡು ಆನಂತರ ಸೃಷ್ಟಿಕ್ರಿಯೆಗೆ ತೊಡಗುತ್ತಾನೆ.

ಎರಡನೆಯದಾಗಿ ಹರೀಶ್ವರನ ಕಾವ್ಯಗಳಲ್ಲಿ ನಮಗೆ ಕಾಣಬರುವ ಇನ್ನೊಂದು ಗುಣವೆಂದರೆ, ಅವನ ಅಸಾಧಾರಣ ಲೋಕಾನುಭವ. ಲೌಕಿಕ ವೈದಿಕ ಎರಡು ವ್ಯವಹಾರಗಳಲ್ಲಿಯೂ ಜನರು ಹೇಗೆ ನಡೆದುಕೊಳ್ಳುವರು ಎನ್ನುವದನ್ನು ಹರೀಶ್ವರನು ಚೆನ್ನಾಗಿ ಬಲ್ಲನು. ಅದಕ್ಕೆ ಅವನ ಕಾವ್ಯಗಳಲ್ಲಿ ಜನಜೀವನಕ್ಕೆ ಸಂಬಂಧಪಟ್ಟ ಸನ್ನಿವೇಶ ಬಂದಾಗ, ಆ ಚಿತ್ರ ನಮ್ಮ ಕಣ್ಣು ಮುಂದೆ ನಡೆದಂತೆ ಅವನು ಚಿತ್ರಿಸಲು ಸಮರ್ಥನಾಗುವುದು. ಶರಣರು ಬಸವರಾಜನಲ್ಲಿ ಬಂದಾಗ ನಡೆದ ಪೂಜಾವಿಧಾನವನ್ನು

"ಓತುಕೊಂಡಾಡುತಂ ಹಾಡುತಂ ಹರಸುತಂ
ಹೊಸಹೊಸ ಪರಿಯ ಸಿರಿಯ ನೇಮದಚಲರ್ ಕೆಲರು
ಕುಸುಮವಂ ಕೊಡದೆ ಪರಿಮಳವನೀವರ್ ಕೆಲರು
ಮಜ್ಜನಕ್ಕೆರೆವುತಂ ಕರಗುತಿರ್ಪರ್ ಕೆಲರು
ಉಜ್ವಳಿಪ ಲಿಂಗಮಂ ನೋಡುತಿರ್ಪರ್ ಕೆಲರು
ಪೂಜೆಯಂ ಮಾಡಿ ಪುಟನೆದ್ದಾಡುವರ್ ಕೆಲರು
ಪೂಜಿಸುತೆ ಕಂಪಿಸುತೆ ಕೈಮರೆವವರ್ ಕೆಲರು
ಹೂವನೀಕ್ಷಿಸುತೆ ಹೊರೆಯೇರುರೆಪ್ಪರ್ ಕೆಲರು
ದೇವನಂ ನೋಡಿ ದಳವೇರುತಿಪ್ಪರ್ ಕೆಲರು
ಶಿವಲಿಂಗಮಂ ಮುಟ್ಟೆ ಮರೆವುತಿಪ್ಪರ್ ಕೆಲರು
ತವಕದಿಂ ಸುತ್ತಿಯಿಸುತೆ ಗವಗದಿಸುವರ್ ಕೆಲರು
ಹಾಡಲೆಂದನುಗೆಯ್ದು ನೋಡುತಿಪ್ಪರ್ ಕೆಲರು

ನೋಡಲೆಂದಸುಗೆಯ್ದು ಹಾಡುತಿಪ್ಪರ್ ಕೆಲರು
ಆಡುತಾಡುತೆ ಮೀರಿ ಮಸಗಿ ಕುಣಿವರ್ ಕೆಲರು
ನೋಡಿ ನೋಡುತ್ತಲಿವೆಯಿಕ್ಕದಿಪ್ಪರ್ ಕೆಲರು
ಶಿವಶಬ್ದಮಂ ಕೇಳ್ದು ಪುಳಕಿಸುವವರ್ ಕೆಲರು
ಶಿವನೊಡನೆ ಮುನಿಮುನಿದು ಜಿನುಗುತಿಪ್ಪರ್ ಕೆಲರು
ಧೂಪಮಂ ಮರೆದಾರತಿಯನೆತ್ತುವರ್ ಕೆಲರು
ದೀಪಮಂ ಧೂಪಮೆಂದರ್ಚಿಸುವವರ್ ಕೆಲರು

ಎಂದು ವರ್ಣಿಸುತ್ತಾ ತಾನು ಎಂತಹ 'ತೆರದ ಕಣ್ಣಿನವನು' ಎನ್ನುವುದನ್ನು ಹರೀಶ್ವರನು ನಮಗೆ ತಿಳಿಸುತ್ತಾನೆ. ಪ್ರಭುದೇವರ ಜನನವನ್ನು ಹೇಳುತ್ತಾ ನವಯೌವನೆಯ ಗರ್ಭದೊಳಗುದಿಸಿ ತೊಳತೊಳಗೆ

''ಹೊರಗೆ ಸಾರಿಮುದವಯವಂ ಗರ್ಭಚಿಹ್ನಮಂ
ತುರುಗಿದುದು ಲಾವಣ್ಯಪೊಪ್ಪವಿಡಿದಂಗಮಂ
ನಡೆ ಮೆಲುಪಿನೊಳ್ ನೆರೆಯೆಕೊಡೆ ಧಾಳದೊಳ್ ಪೊರೆಯೆ
ನಡು ಬಟ್ಟನಾಗಿ ನಿಲೆ ಕುಡಿಕಪ್ಪನಾಳೆ ಮೊಲೆ
ಪೊಕ್ಕುಳುಣ್ಮುತ್ತಮಿರೆ ಮಿಕ್ಕು ಕೀಳ್ತೊಡೆಯಲರೆ
ಅಕ್ಕಜಂ ಕೊರ್ವೆ ಜಘನಂ ನಡೆಯ ಬೀಗುತಿರೆ
ತ್ರಿವಳಿ ಬಸುರಿಂ ಪಾರೆ ಪೊಸಬಾಸೆ ಮೆಯ್ದೋರೆ
ಅವಯವಂ ಚೆಲ್ವಾಗೆ ಬಾಹುಯುಗ ವಳವೇರೆ
ಮೊಗವಲರ್ದು ಬೆಳ್ಪಾಗೆ ಮಿಗೆ ಮಾತು ತೆಳ್ಪಾಗೆ
ಬಗಸೆಗಣ್ ಬಿಳುಪಾಗೆ ಕದಪು ಮಿಗೆ ನಯವಾಗೆ
ನವಮಾಸವಾದುದಾಕೆಗೆ ಚೆಲುವು ಮಿಗಿಲಾಗೆ''

ಎಂದು ಗರ್ಭಸ್ಥಿತಿಯ ವರ್ಣನೆಯಲ್ಲಿ ಹರೀಶ್ವರನು ಸ್ತ್ರೀಜನವು ನೈಸರ್ಗಿಕ ಅವಸ್ಥೆಗಳಲ್ಲಿ ಪಡೆಯುವ ರೂಪವ್ಯತ್ಯಾಸವನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸಿದ್ದಾನೆಂಬುದು ವ್ಯಕ್ತವಾಗುತ್ತದೆ.

ಹರಿಹರನು ತನ್ನಕಾಲದಲ್ಲಿ ಕೂಡ ಉತ್ತಮ ಪಂಡಿತನೆಂದು ಖ್ಯಾತಿ ಪಡೆದಿದ್ದನು. ಆತನಿಗೆ ''ಹರಿಯಣ್ಣ ಪಂಡಿತ'' ನೆಂಬ ಹೆಸರೂ ವಾಡಿಕೆಯಲ್ಲಿದ್ದಿತು. ರಗಳೆಗಳಲ್ಲಿಯೂ, ಗಿರಿಜಾಕಲ್ಯಾಣದಲ್ಲಿಯೂ ಹರೀಶ್ವರನು

ತನ್ನ ಪಾಂಡಿತ್ಯದಾಳವನ್ನು ಸೂಚಿಸಿದರೂ, ಕಾವ್ಯಾಂತಃಕರಣಕ್ಕೆ ಅಪವಾದ ವೆಸೆಯುವ ರೀತಿಯಲ್ಲಿ ಮಾತ್ರ ಪಾಂಡಿತ್ಯಪ್ರದರ್ಶನಕ್ಕೆ ಹೊರಟಿಲ್ಲ. ಸಾಹಿತ್ಯ, ಧರ್ಮ, ಮತಪ್ರಕ್ರಿಯೆಗಳಲ್ಲಿ ಮಾತ್ರವಲ್ಲದೆ ಸಂಗೀತದಲ್ಲಿ ಕೂಡ ಹರೀಶ್ವರನಿಗೆ ಎಂತಹ ಪಾಂಡಿತ್ಯವಿತ್ತೆಂಬುದು ಈ ಕೆಲವು ದೃಷ್ಟಾಂತಗಳಿಂದ ಗೊತ್ತಾಗುತ್ತದೆ. "ಗಿರಿಜಾಕಲ್ಯಾಣ" ದಲ್ಲಿ ಗಿರಿಸುತೆಯನ್ನು "ಮಣಿಗಣಪ್ರಭಾ ಸಂಪುಟಮೆನಿಸಿದ ರನ್ನದೊಟ್ಟಿಲೊಳಗಿರಿಸುತ್ತುಂ

ರಾಗಂಮಿಗೆ ಸಪ್ತಸ್ವ-
ಸ್ತ್ರೀ ಗಣಮೊಲವಿಂದೆ ಲಲಿತೆಬಂಗಾಳಂಶ್ರೀ
ರಾಗಂಗಳೊಗೆಯೆ ಪಾಡುತೆ
ತೂಗಿದರಖಿಳಪ್ರಪಂಚಮಾಡಿಪ ಶಿಶುವಂ

ಎಂದು ಲಲಿತೆ, ಬಂಗಾಳ, ಶ್ರೀರಾಗಗಳ ಮೇಲೆ ತನಗಿರುವ ಪ್ರೇಮವನ್ನು ತೋರಿಸಿದ್ದಾನೆ. ಗಿರಿಜೆಯ ತೊಟ್ಟಿಲು ತೂಗುವಂತಹ ಸುಕೋಮಲ ಸನ್ನಿವೇಶಕ್ಕೆ ತಕ್ಕ ಹಾಗೆ ಲಲಿತೆ, ಬಂಗಾಳ, ಶ್ರೀರಾಗಗಳಂತಹ ಸುಕೋಮಲ ರಾಗಗಳನ್ನೇ ಆಯ್ದಿರುವ ಹರೀಶ್ವರ–ಕಾವ್ಯಾಂತಃಕರಣವು ಎಷ್ಟು ಪಕ್ವವಾದುದೆಂಬುದು ಗೊತ್ತಾಗುತ್ತದೆ. ಪ್ರಭುದೇವರು ಗೊಗ್ಗೇಶ್ವರಾಲಯದಲ್ಲಿ ನುಡಿಸಿದ ಮೃದಂಗ–ಗತಿಗಳನ್ನು ಕವಿಯು ಹೀಗೆ ವರ್ಣಿಸುತ್ತಾನೆ:

ಅತಿರಸಾಮೃತ ಕಾಂತಿಯುತ, ಸುಖಾಸ್ವದಮೆಂಬ
ನುತಗತಿ ನವೀನಗತಿ ಸರಸಗತಿಯೆಂಬ
ನುಣ್ಗತಿ ಸುಗಂಭೀರಗತಿ ಸಾಂದ್ರಗತಿಯೆಂಬ
ಜಾಣ್ಗತಿ ಮಧುರಗತಿ ಮನೋಹರಗತಿಗಳೆಂಬ
ಸುಗತಿ ಶರ್ವಂಗೆ ಕರ್ಣಾಭರಣಮಾಗುತಿರೆ

ಈ ಸಂಗೀತಜ್ಞಾನವು ಹರೀಶ್ವರನ ಎಲ್ಲ ಕಾವ್ಯಗಳ ಮೇಲೂ ಸುಗತಿಯ ತಂಬೆಲರನ್ನು ಬೀಸಿವೆ ಎಂದು ಹೇಳಬಹುದು. ಭಾವರಸಗಳಿಗೆ ತಕ್ಕ ಶೈಲಿಯನ್ನು ಜೋಡಿಸಿ ಪ್ರತಿಯೊಂದು ಸನ್ನಿವೇಶವೂ ಹೃದಯಂಗಮವಾಗುವಂತೆ ಮಾಡುವ ಹರೀಶ್ವರನ ಜಾಣ್ಮೆಯ ರಹಸ್ಯವೇ ಇದೆನ್ನಬಹುದು. ಕಿನ್ನರ ಬೊಮ್ಮಯ್ಯನ ವೃತ್ತಾಂತವನ್ನು ಹೇಳುವಾಗ ವಾದ್ಯ ಶಬ್ದಾನುಕರಣವನ್ನು ಹರೀಶ್ವರನು ಚಿತ್ರವತ್ತಾಗಿಯೂ ನೈಸರ್ಗಿಕವಾಗಿಯೂ ಮಾಡಿದ್ದಾನೆ.

"ನೆರೆದು ಬಹುವಿಧವಾದ್ಯವಡಿಸಿ ನೆರೆ ಮೊಳಗಿದವು
ಧಿಮಿಧಿಮಿಕುದುಮುಕುತತ್ತೊಂಗೆಂಬ ಮದ್ದಳೆಯ
ಚಮುಕ ತಕನಕ ತಕನವೆಂಬ ಕಹಳೆಯ ಧ್ವನಿಯ
ನಟಟಹಕು ಫಣಫಣಚ್ಛಿಳಿಲೆಂಬ ಆವುಜೆಯ
ನಟವಿಕಟ ಕಟಕ ಬಿರ್‍ರೆಂಬ ಕರಡೆಯ ದನಿಯ"

ನಾದ ಮಾಧುರ್ಯದ ಸೊಬಗನ್ನು ಬಲ್ಲ ಹರೀಶ್ವರನು ತನ್ನಶೈಲಿಯ ವೈಶಿಷ್ಟ್ಯಕ್ಕಾಗಿ ಅದನ್ನು ಮಾರ್ಪಡಿಸಿಕೊಂಡು, 'ಹಿರಿಯರ್ಥಮಂ ಕಿರಿಮಾತಿನೊಳ್ ತುಂಬುವ' ಗಾರುಡಿಗತನವನ್ನು ವಿಪುಲವಾಗಿ ತೋರಿ ಕೃತಾರ್ಥನಾಗಿದ್ದಾನೆ.

ಬಸವನ ಗೀತಿ ಗೀತಿ ಬಸವಣ್ಣನ ರೂಪು ರೂಪು ಕೇಳ್
ಬಸವನ ಗಾಡಿ ಗಾಡಿ ಬಸವಣ್ಣನ ಬಂಧುರಕೀರ್ತಿ ಕೀರ್ತಿ ಮೇಣ್ |
ಬಸವನ ಬುದ್ಧಿ ಬುದ್ಧಿ ಬಸವಣ್ಣನ ಪುಣ್ಯದ ಲೀಲೆ ಲೀಲೆ ಹೋ
ಬಸವನ ರಕ್ಷೆ ರಕ್ಷೆ ಬಸವಣ್ಣನ ಶಿಕ್ಷೆಯೆ ಶಿಕ್ಷೆ ಲೋಕದೊಳ್||

ಈ ಎಲ್ಲ ಸಾಧನಸಂಪತ್ತನ್ನು ಹರೀಶ್ವರ-ಕವಿಯು ಹೇಗೆ ಉಪಯೋಗಿಸಿಕೊಂಡ—ಅವನ ಕಾವ್ಯಕ್ರಿಯೆಯ ಉದ್ದೇಶವೇನು—ಅವನ ಜೀವನಕ್ಕೂ ಕಾವ್ಯಕ್ಕೂ ಇರುವ ಸಂಬಂಧವೇನು ಎಂಬುದನ್ನು ವಿವೇಚಿಸುವುದೇ ಮುಂದಿನ ಕರ್ತವ್ಯಭಾಗ—

ಶೈಲಿ, ಪಾಂಡಿತ್ಯ. ಲೋಕಾನುಭವಗಳಿದ್ದರೂ ಕಾವ್ಯಸೃಷ್ಟಿಗೆ ಅವಶ್ಯಕವಾದ ಪ್ರತಿಭೆಯಿಲ್ಲದಿದ್ದರೆ, ಯಾವನೂ ಉತ್ತಮಕಾವ್ಯದ ನಿರ್ಮಾಣಕರ್ತೃವಾಗಲಾರ. ಹೊರಗಣ್ಣಿನಿಂದ ಲೋಕವನ್ನೂ, ಅದರ ವ್ಯಾಪಾರವನ್ನೂ ನೋಡಿ ಚಿತ್ರವತ್ತಾಗಿ ವರ್ಣಿಸುವುದು ಒಂದು ರೀತಿ; ಅದೇ ವ್ಯಾಪಾರವನ್ನು ಒಳಗಣ್ಣಿನಿಂದ-ಆದರ್ಶದ ಒಂದು ಪ್ರಸ್ಥಾನದಿಂದೀಕ್ಷಿಸಿ ಜೀವನದ ಅವಿಶ್ರಾಂತ ಪ್ರಗತಿ ವಿಗತಿಗಳನ್ನು ಸಾಧಿಸಿಕೊಳ್ಳುವುದು ಎರಡನೆಯರೀತಿ, ಸ್ಥೂಲದರ್ಶನಾನುಭವವು ವ್ಯಕ್ತಿವಕ್ತಿಗೆ ಬದಲಿಸುತ್ತ ಹೋಗುತ್ತದೆ. ಒಬ್ಬನು ಹೇಳಿದ್ದು ಪ್ರಾಯಶಃ ಇನ್ನೊಬ್ಬನಿಗೆ ಸರಿಬರಲಾರದು. ಆದರೆ, ಆತ್ಮೋತ್ಕ್ರಾಂತಿಯ ದೃಷ್ಟಿಯಲ್ಲಿ ಮಾನವನು ಅನುಭವಿಸಿದ ವೇದನೆಗಳು, ಸಂತೋಷಗಳು ಜಗತ್ತಿಗೇ ಮಾನ್ಯವಾಗುತ್ತವೆ. ಜಗತ್ತು ತನ್ನನ್ನು ತಾನು ಕವಿಯ ಕನ್ನಡಿಯಲ್ಲಿ ಒಮ್ಮೆಯಾದರೂ ಕಂಡುಕೊಂಡು "ನಾನಿನ್ನೂ ಇಲ್ಲೇ ಇರುವಾಗಲೇ

ಈತನು ಬಹಳ ಮುಂದೆ ಹೋಗಿದ್ದಾನೆ. ಅವನ ದಾರಿಯ ಜಾಡನ್ನೂ ನಾನೂ ಹಿಡಿಯಬೇಕು." ಎಂದು ಹವಣಿಸುತ್ತದೆ. ಒಳಗಣ್ಣಿನಿಂದ ಜಗತ್ತನ್ನು ನೋಡಿ ಅದರ ಸುಖವೇ ತನ್ನಸುಖ ಎಂಬ ಉನ್ನತ ಆದರ್ಶವನ್ನು ಮುಂದಿಟ್ಟುಕೊಂಡು ಸಾಹಿತ್ಯಕ್ಕೆ ಕೈ ಹಾಕಿದವರಲ್ಲಿ ಹರೀಶ್ವರನು ಒಬ್ಬನು. ಕನ್ನಡ ಕವಿಗಳ ಜೀವನ ಕಥೆಯೆಲ್ಲಾ ಅಂಧಃಕಾರದಲ್ಲಿರುವುದರಿಂದ ಹರೀಶ್ವರನ ಜೀವನಕ್ಕೂ, ಕಾವ್ಯಕ್ಕೂ ಇರುವ ಸಂಬಂಧವನ್ನು ಸುಲಭವಾಗಿ ಗೊತ್ತು ಮಾಡಲು ಸಾಧ್ಯವಾಗುವದಿಲ್ಲ ಆದರೆ ಬಸವಣ್ಣನವರ ಭಕ್ತಿಯನ್ನು ವಿವರಿಸುವಾಗ, ಹರೀಶ್ವರನು ತೋರಿಸುವ ಕಳಕಳಿಯೂ, ಶ್ರದ್ಧೆಯೂ ಅವನು ಆ ಕುಲುಮೆಯಲ್ಲಿ ಬಹಳ ಬೆಂದವನೆಂದು ಧೃಢಪಡಿಸುತ್ತದೆ.

ಹರೀಶ್ವರನು ರಚಿಸಿರುವ ಮಹಾನುಭಾವರ ಜೀವನಚರಿತ್ರೆಗಳಲ್ಲಿ ಸ್ಥಳ ಸಂಕೋಚದಿಂದ ನಾವು ಎರಡನ್ನೇ ಈಗ ಚರ್ಚಿಸಬೇಕಾಗುತ್ತದೆ. ಒಂದು ಪ್ರಭುದೇವರ ರಗಳೆ, ಇನ್ನೊಂದು ಬಸವರಾಜದೇವರ ರಗಳೆ. ಇಬ್ಬರೂ ಕನ್ನಡ ಸಮಾಜವನ್ನು ಅಂಧಕೂಪದಿಂದೆತ್ತಿದ್ದ ಮಹಾಪುರುಷರು. ಇಬ್ಬರೂ ಮುಸುಕಿನೊಳಗಡಗಿದ್ದ ಧರ್ಮಸಿಂಹವನ್ನು ಹೊರಗೆಳದು ಆದರ ಗರ್ಜನೆಯು ಅಷ್ಟದಿಕ್ಕುಗಳಿಗೂ ಹರಡುವಂತೆ ಮಾಡಿದ ಮಹಾವೀರರು. ಇಬ್ಬರೂ ಸುಪ್ತಜನಾಂಗವನ್ನು ಜಾಗೃತಗೊಳಿಸಿ ರೂಢಿಬದ್ಧ ಆಚರಣೆಗಳ ಮೂಟದಿಂದ ಅದನ್ನು ಉದ್ಧಾರಮಾಡಿದ ಸೀಮೂಪುರುಷರು. ಹರೀಶ್ವರನು ಅವರಿಬ್ಬರ ಜೀವನವನ್ನೂ ಭಕ್ತಿಯಿಂದಲೂ, ಶಕ್ತಿಯಿಂದಲೂ ಕೃತಕೃತ್ಯನಾಗಿ ನಿರ್ವಹಿಸಿದ್ದಾನೆ.

ಪ್ರಭು, ಬಸವೇಶ್ವರ ಇವರಿಬ್ಬರ ಜೀವನಧ್ಯೇಯ ಒಂದೇ ಆಗಿದ್ದರೂ ಮಾರ್ಗ ಒಂದೇ ಆಗಿರಲಿಲ್ಲ. ಭವಿಯಾಗಿಹೋಗಿದ್ದ ಸೊನ್ನಲಿಗೆ ಸಿದ್ಧರಾಮಣ್ಣನವರು ಕಟ್ಟಿಸುತ್ತಿದ್ದ ಪಶುಪತಿಯ ದೇವಾಲಯದ ಮುಂದೆ ನಿಂತು ಕೆಲಸಗಾರರಿಗೆ "ಹೋಗಿ ಕರೆಯಿರಿ ನಿಮ್ಮ ಒಡ್ಡ ರಾಮನನ್ನು" ಎಂದು ಮೂದಲಿಸಿ ಹಂಗಿಸಿ ಹೇಳುವ ದಾರಿ ಪ್ರಭುವಿನದು. ಕಿನ್ನರಯ್ಯಗಳು ಮುನಿದುಹೋದರೆಂದು ಕೇಳಿದ ಬಸವಣ್ಣ "ಮರವಟ್ಟು ಹಂಬಲಿಸಿ ಹಲುಬಿ ಘನತಾಪ ಮನಮಂ ನಟ್ಟು ನೊಂದು ಮನಗುಂದಿ ತನುಕುಂದಿ ಮಿಗೆ ಮಿಗೆ ಕೋಡಿ ಬಂದ ಸುಕೃತಂ

ತಿರುಗಿ ಹೋಯ್ತೆಂದು ನೆರೆಬಾಡಿ'' ಬಸವಳಿಯುತ್ತಾನೆ. ಇದಕ್ಕೆ ಕಾರಣ ಪರಶಿವನಿಂದ ಆಜ್ಞಪ್ತನಾಗಿ ಭವಿಗಳ ಉದ್ಧಾರಕ್ಕೂ, ಮಾಯೆಯನ್ನು ಜಯಿಸುವುದಕ್ಕೂ ಭೂಮಿಗೆ ಬಂದವನು ಅಲ್ಲಮನು, ಪರಶಿವನಿಂದ ಶಾಪಗ್ರಸ್ತನಾಗಿ ಬಂದವನು ಬಸವೇಶ್ವರನು ಸ್ವಭಾವವಾಗಿಯೇ ಅಲ್ಲಮನಲ್ಲಿ ಔನ್ನತ್ಯದ ಹೆಮ್ಮೆ ಬಸವಣ್ಣನಲ್ಲಿ ದೈನ್ಯದ ಹೃದಯಂಗಮತೆಯೂ ಕಂಡುಬರಬೇಕಷ್ಟೇ| ಈ ಅಂಶವನ್ನು ಹರೀಶ್ವರನು ಬಹಳ ಚೆನ್ನಾಗಿ ಗ್ರಹಿಸಿದ್ದಾನೆ. ಪ್ರಭುವು ಮೊದಲಿನಿಂದಲೂ ದಿಗ್ವಿಜಯಕ್ಕೆ ಹೊರಟಿದ್ದಾನೆ. ತನ್ನಮೃದಂಗವಾದನ ವಿದ್ಯಾನೈಪುಣ್ಯದಿಂದ ಅರಸುಮಗಳನ್ನು ಮರುಳುಮಾಡಿದ ಅಲ್ಲಮ ಕೊನೆಗೆ ಅವಳ ಮನವನ್ನು ಸೆಳೆದು, ಅವಳಲ್ಲಿ ಅನುರಕ್ತಿಪಡೆದು ಕೆಲವು ದಿವಸ ಸುಖವಾಗಿದ್ದು ಬಿಡುತ್ತಾನೆ ಹೀಗೆ ಕೆಲವುಕಾಲ ಕಳೆಯಲು, ಕಂತುಹರತಾನು ಅಲ್ಲಮನನ್ನು ಲೋಕಕ್ಕೆ ಕಳುಹಿಸಿದ ಉದ್ದೇಶವನ್ನು ಜ್ಞಾಪಿಸಿಕೊಂಡು ಕಾಮಲತೆಯನ್ನು ಕೊಂಡೊಯ್ಯುತ್ತಾನೆ. ಅಲ್ಲಮನಿಗೆ ಹುಚ್ಚು ಹಿಡಿದಂತಾಗುತ್ತದೆ. ಕಾಮಲತೆಯ ವಿರಹವೇದನೆಯಲ್ಲಿ ತೊಳಲುತ್ತಿರುವಾಗ್ಗೆ "ವೃಷಭಾಂಕಿತ ಶಿವಾಲಯ" ವೊಂದು ಭೂಮಿಯಲ್ಲಿ ಕಂಡುಬರುತ್ತದೆ. ಅದನ್ನು ಅಗೆಯಿಸಿ "ಅರಸಂ ಹರುಷ ದಿಂದೊಲ್ದು ಬಲವಂದು ರಾಗದಿಂ ದೇವಾಲಯದ ಬಾಗಿಲೊಳ್ನಿಂದು ಕದವ ತೆರೆದೊಳಪೊಕ್ಕು ನೋಡಲಾರ್ಪವರುಂಟೆ'' ಎಂದು ಯೋಚಿಸುತ್ತಿರಲಾಗಿ ಕಾಮಲತೆಯನ್ನು ನೀಗಿಕೊಂಡು ಜೀವದ ಮೇಲಣ ಆಸೆಯನ್ನು ಬಿಟ್ಟಿದ್ದ ಅಲ್ಲಮನು "ಭೋಂಕನೊಳಪೊಕ್ಕು ಲೋಕವಾರ್ತೆಯ ನೆರೆ ಮರೆದು | ಬಗೆಬೇರೆ ಪೊಸತಾಗೆ, ಗಳಗಳನೆ ನಡೆತಂದು | ಪುಗುತಂ ಮಹಾಲಿಂಗದಂಘ್ರಿಗೆರಗುತ್ತಂ." ಇಲ್ಲಿ ಅಲ್ಲಮನ ಜೀವನವು ಬದಲಿಸುತ್ತದೆ. ಮಾಯೆಹರಿದು ತನ್ನ ಕಾರ್ಯ, ಪ್ರಭುವಿನ ಅಣತಿಗಳು ಸ್ಮರಣೆಗೆ ಬರುತ್ತವೆ. ಅಲ್ಲಿಂದ ಮುಂದೆ ಹೊರಟು, ಬಸವೇಶ್ವರ, ಮಹಾದೇವಿಯಕ್ಕ, ಸಿದ್ಧರಾಮಣ್ಣ, ಮೊದಲಾದ ಭಕ್ತರನ್ನು ಅನುಗ್ರಹಿಸಿ ಶಿವನನ್ನು ಸೇರಿ ಅವನಗಣಗಳಲ್ಲಿ ಸ್ಥಾನವನ್ನು ಪಡೆಯುತ್ತಾನೆ.

ಬಸವೇಶ್ವರನ ಜೀವನವೃತ್ತಾಂತವನ್ನು ಎಷ್ಟು ವಿಸ್ತರಿಸಿ ಚಿತ್ತಾಕರ್ಷಕವಾಗಿ ಹರೀಶ್ವರನು ಮಾಡಿದ್ದಾನೆ ಅಷ್ಟು ಪ್ರಮೆಯನ್ನು ಪ್ರಭುವಿನ ವಿಚಾರ

ಅವನು ವಹಿಸಲಿಲ್ಲ. ಪ್ರಭುವು ತನಗೆ ಬಹಳ ಪೂಜ್ಯನೆಂದು ಅವನ ಚರಿತ್ರೆಯನ್ನು ವಿಸ್ತರಿಸಲಂಜಿ ಬಿಟ್ಟನೋ, ವಿಮುಕ್ತ ಜೀವನವನ್ನು ಮುಂದೆ "ಗಿರಿಜಾಕಲ್ಯಾಣ" ದಲ್ಲಿ ತೋರಿಸುವ— ಈಗೇಕೆ ? ಎಂದು ದ್ವಿರುಕ್ತಿ ಭಯದಿಂದ ಬಿಟ್ಟನೋ ತಿಳಿಯದು. ಅಂತೂ "ಬಸವರಾಜದೇವರ ರಗಳೆಯಲ್ಲಿರುವ ಕಲಾಶೋಭೆ "ಪ್ರಭುದೇವರ ರಗಳೆ"ಯಲ್ಲಿ ಕಾಣಬರುವುದಿಲ್ಲ.

"ಬಸವರಾಜದೇವರ ರಗಳೆ" ಎಲ್ಲಾ ದೃಷ್ಟಿಯಲ್ಲಿಯೂ ಉತ್ತಮ ಕಾವ್ಯವಾಗಲಿಕ್ಕೆ ಹರಿಹರನ ದೃಷ್ಟಿಯೇ ಕಾರಣ. ಮೊದಲೇ ಹರೀಶ್ವರನು ಬಸವಣ್ಣನವರನ್ನು ಮಹಾನುಭಾವರೆಂದು ಒಪ್ಪಿಕೊಂಡು ನಾಲ್ಕು ಮಾತಿನಲ್ಲಿ ಅವರ ಕಥೆಯನ್ನು ಮುಗಿಸಿ ಬಿಡಬೇಕಾಗಿತ್ತು. ಆದರೆ, ಆ ಸುಲಭ ಮಾರ್ಗಕ್ಕಿಂತಲೂ ಬಸವಣ್ಣನವರು ಮಹಾನುಭಾವರಾದ ರೀತಿಯನ್ನು ತೋರುವ, ಕಠಿಣಮಾರ್ಗವದ್ನು ಅನುಸರಿಸುವುದರಲ್ಲಿ ಹರೀಶ್ವರನು ಹೆಚ್ಚು ವಿಶ್ವಾಸ ತೋರಿಸಿದ್ದಾನೆ. ಶಶಿಧರನ ಸಿರಿಮುಡಿಗೆ ಬೇಕೆಂದು ತಂದಿತ್ತ ಒಬ್ಬ ಮಾಲೆಕಾರನ ಕಂಪುಳ್ಳ ಸಂಪಿಗೆಯ ಪೂಗಳನ್ನು ಶರಣತತಿಗೀಯುತ ಕಾರ್ಯದಲ್ಲಿ ಅತ್ಯುತ್ಸಾಹದಿಂದ ಉದ್ಯುಕ್ತನಾದ ವೃಷಭಮುಖನು ಪ್ರಸಾದವನ್ನು ಎಲ್ಲರಿಗೂಹಂಚಿ ಕುಮಾರಸ್ವಾಮಿಯನ್ನೇ ಮರೆಯುತ್ತಾನೆ. ಸ್ವಾಮಿಯು ಕೇಳಲು, ಕೊಟ್ಟೆನೆಂದು ತಪ್ಪಿ ನುಡಿಯುತ್ತಾನೆ. ಮಗನ ಕರುಣಾಸ್ಯಮಂ ಚಂದ್ರಚೂಡಂ ಕಂಡು ವಿಮಳಶಿಶುವಿಗೆ ಪುಸಿನುಡಿದ ದೋಷಕ್ಕೆ ಧರಣಿಯೊಳು ಪುಟ್ಟೆಂದು ಬೆಸಸುವನು. ಆ ಪ್ರಕಾರ ವೃಷಭಮುಖನು ಬಾಗೇವಾಡಿಯಲ್ಲಿ ಮಾದಿರಾಜನ ಸತಿಯಾದ ಮಾದಾಂಬೆಯ ಗರ್ಭದಲ್ಲಿ ಬಸವನೆಂಬ ಅಭಿದಾನಮಂ ಕೂಡಿ ಹುಟ್ಟುತ್ತಾನೆ. ಬಸವನ ಬಗೆಬಗೆಯ ಬಾಲಲೀಲೆಯಲ್ಲಿ ಅವನ ತಂದೆತಾಯಿಗಳು ಹಿಗ್ಗುತ್ತಿರುವಂತೆ "ಪಲವು ಕಾರಣದಿಂ ಮರ್ತ್ಯಲೋಕದೊಳ್ ಪುಟ್ಟಿದ ಗಣೇಶ್ವರನನ್ನು ಬಸವರಾಜರಿಗೆ ತಾಯ್ತಂದೆಗಳಿಲ್ಲೆಂಬುವನರಿಪುವಂತೆ ಶಿವಭಕ್ತನುಮಂ ಶಿವಭಕ್ತೆಯುಮಂ ಶಿವನಾಜ್ಞೆಯಿಂ ಕೈಲಾಸಕ್ಕೆ ಕೊಂಡೊಯ್ಯೆ" ಬಸವರಾಜನು ಹದಿನಾರು ಸಂವತ್ಸರದ ತನಕ ಶಿವಭಕ್ತಿ ಮುತ್ತಂತಿರ್ದ ಮುತ್ತಬ್ಬೆಯ ಪಕ್ಕದೊಳ್ ಬೆಳೆಯುತ್ತಾನೆ. ಹೀಗೆ ಬೆಳೆಯುತ್ತಿರುವಾಗಲೇ 'ಜನನದ ಬಳಿವಿಡಿದೆಂತಕ್ಕೆ ಬಂದ ಜನ್ನನಂಶಿವಪೂ

ಜೆಯಲ್ಲಿ ಸವೆಯವೇಳುಂ' ಎಂದುಕೊಂಡು ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪದುಬಿಸುಟು ನವ್ಯದುಕೂಲಮಂ ತೆಗೆದುಟ್ಟು ದಿವ್ಯವಸ್ತ್ರಮಂ ಪೊದೆದು, ಮನೆನೆಳಲಂ ನೆನೆಯದೆ ಅರ್ಥಮಂ ಲೆಕ್ಕಿಸದೆ ವೃತ್ತಿಯಂ ವಿಚಾರಿಸದೆ ಬಂಧುಗಳಂ ಬಗೆಯದೆ, ಪುರಜನಮಂ ಪರಿಕಿಸದೆ ಹರಭಕ್ತಿಯೊಳಾಸುರದಿಂ ಬಾಗೆವಾಡಿಯಿಂ ಪೊರಮಟ್ಟು ಕೂಡಲ ಸಂಗಮೇಶ್ವರನಿಪ್ಪ ಕಪ್ಪಡಿಸಂಗಮಕ್ಕೆ ಬರುತ್ತಾನೆ. ವೈರಾಗ್ಯದ ಪ್ರವೃತ್ತಿ ಇಲ್ಲೀ ಚೆನ್ನಾಗಿ ಮೊಳಕೆಯಿಟ್ಟಿದೆ. ಬ್ರಾಹ್ಮಣ ಲಾಂಛನಗಳನ್ನು ಕರ್ಮಲತೆಯೆಂದು ಗ್ರಹಿಸುವಷ್ಟು ಜ್ಞಾನದ ಕುಡಿಬಿಡೆದಿದೆ. ಆದರೆ, ಈ ಜ್ಞಾನಭಾಸ್ಕರನ ಉದಯಕ್ಕೆ ಕಾರಣಕರ್ತನಾರು ?— ಸಹಜ ಗುಣದ ಸ್ಫೋಟನವೇ ಇಲ್ಲವೆ ರೂಢಿಯಾಚರಣೆಯ ಬಗ್ಗೆ ಹುಟ್ಟಿದ ಅಮಾನುಷವಿಕರ್ಷವೇ ಎಂಬುದನ್ನು ಕವಿಯು ಸ್ಪಷ್ಟಗೊಳಿಸಿಲ್ಲ. ಆದರೆ, ಈಗಾಗಲೇ ಬಸವರಾಜನ ಮನಸ್ಸಿನಲ್ಲಿ ತುಮುಲವಾದ ವಿಪ್ಲವವು–ಅಶಾಂತಿಯು–ದುಃಖವು ಹುಟ್ಟಿದೆ. ಕಪ್ಪಡಿಸಂಗಮಕ್ಕೆ ಬಂದವನೇ "ಶಂಕರಾಲಯಮಂ ಭೋಂಕನೆ ಕಂಡು ಪೂರ್ವಸ್ಮರಣೆ ಕೈಗೂಡಿ ಕಣ್ ಬಂದಂತೆ ಉಸಿರ್‌ಬಂದಂತೆ ಪರಿತಂದು ರಂಗಮಂಟಪದೊಳು ದೊಪ್ಪನೆ ಬಿದ್ದಂತಕ್ಕೆದ್ದು ನಿಂದು— ದೇವದೇವ, ಅನಾಥನಾಥ, ಅನಿಮಿತ್ತ ಬಂಧುವೆ, ತಾಯ್ತಂದೆ ಬಂಧು ಬಳಗವೆ, ಕುಲವೆ, ಬಲವೆ, ಛಲವೆ, ತವರೆ, ಕಣ್ಣೆ, ಗತಿಯೆ, ಮತಿಯೆ, ಪುಣ್ಯವೆ, ಪ್ರಾಣವೆ, ಕಾವುದುಕಾವುದೆಂಬೆ" ಎಂದು ಮೊರೆಯಿಡಲು ಶಿವನು ಕನಿಕರಿಸಿ ಬಿಜಯಂಗೈದು ಬಸವನನ್ನು ಸಮಾಧಾನಗೊಳಿಸಿ ಈ ಶಾನ್ಯಗುರುಗಳೆಂಬ ಸ್ಥಾನಪತಿಗಳನ್ನು ಅನುಗ್ರಹಿಸುತ್ತಾನೆ. ಶಿವನ ಅನುಗ್ರಹದಿಂದ ಬಸವಣ್ಣನವರಿಗೆ ಗುರುಗಳಿಲ್ಲಿ ದೊರಕಿದರೆಂಬ ಭಾವವನ್ನು ಕವಿಯು ಹೇಳಹೊರಟಿದ್ದಾನೆ.

ತನ್ನೊಂದಿಗೆ ಹುಟ್ಟಿದ ವೈರಾಗ್ಯ ಬುದ್ಧಿಗೆ, ಕರ್ಮಲತೆಯ ನಿರಾಕರಣದ ಪ್ರಚೋದನ ದೊರೆತದ್ದು ಮಾತ್ರವಲ್ಲದೆ, ಗುರುಲಾಭವೂ ಆಗಿ, ಬಸವಣ್ಣನ ಭಕ್ತಿಯು ಉಜ್ವಲಕಾಂತಿಯಿಂದ ಮಿರುಗಲಾರಂಭಿಸುವುದು. ಶಿವಸಾಯುಜ್ಯವನ್ನು ಪಡೆಯುವ ಹಂಬಲವು ತಾನೇತಾನಾಗಿ ಬೆಳೆಯುವುದು. ಪ್ರಭಾತಸಮಯಕ್ಕೆ ಮುನ್ನವೇ ಎದ್ದು ಭಸಿತೋದ್ಧೂಳನಂ ಮಾಡುತಂ

ಸಂಗಂಗೆ ಸಾಷ್ಟಾಂಗದಿಂವಲ್ಲಿ ದಿನಾಚರಣೆಯು ಆರಂಭವಾಗುವುದು ಎಷ್ಟು ಬಗೆಯ ಹೂಗಳನ್ನು ಸಂಗ್ರಹಿಸಿ ಸಂಗನನ್ನರ್ಚಿಸಿದರೂ ತೃಪ್ತಿಯಿಲ್ಲ ಸಂಗಂಗೆ ಎಷ್ಟು ಅಲಂಕಾರಮಾಡಿ ನೋಡಿದರೂ ಕಣ್ದಣಿಯುವಂತಿಲ್ಲ.

ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ
ಓಜೆಗೆಟ್ಟಿರುಹುಗೆಟ್ಟತಿಲಲ್ಲೆಯಂ ಮಾಡಿ
**ನಯನಂಗಳೊಳು ಪೂಜೆ ಬರೆದಂತೆ ನೋಡುತಂ**
ಭಯಭಕ್ತಿಯಿಂ ಪೂಜೆ ಮೆರೆವಂತೆ ಮಾಡುತಂ
ಚಿತ್ತದೊಳು ಪೂಜೆಯುಚ್ಚೊತ್ತಿದಂತರ್ಚಿಸುತೆ
ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ

ನಾನಾಬಗೆಯ ನವಶಾಕಪಾಕಂಗಳಂ ಬಡಿಸಿ, ನವಮಧುರ ರಸವೊಸರ್ವ ಪಕ್ವಾನ್ನಮಂ ಬಡಿಸಿ ' ದೇವ ಚೆನ್ನನ ನಿಧಿಯೆ ಆರೋಗಿಸೆಲೆ ಸಂಗ ' ಎಂದು ಉಪಚರಿಸುತ್ತಾ ಮೃದು ಮೃದಂಗಕ ಹಳ್ಳಾರವವಂ ಮಾಡುತ್ತೆ ಕರ್ಪೂರದ ವೀಳೆಯ ವನೀಯುತ್ತೆ,

ಎನ್ನನತಿಕರುಣದಿಂ ನೋಡು ಕೂಡಲಸಂಗ
ಎನ್ನ ಮನಸದಕ್ಕರೊಳು ಕೂಡು ಕೂಡಲಸಂಗ
ಎನ್ನ ಕಣ್ಣೊಳಗೆ ಪಂದಾಡು ಕೂಡಲಸಂಗ
ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ

ಎಂದು ಪ್ರಾರ್ಥಿಸುತ್ತಾನೆ. ಸಾಮಾನ್ಯ ಮಾನವರಿಗಾವುದು ಕೇವಲ ಒಂದು ಕಲ್ಲೋ ಅದು ಬಸವಣ್ಣನವರಿಗೆ " ನೀನೆ ತಂದೆತಾಯಿ ಗತಿಮತಿ " ಎಂದು ಹೇಳಿಸಿಕೊಳ್ಳುವಷ್ಟು ಜೀವಂತವಾದ ಶಕ್ತಿಸ್ವರೂಪು. ತನುಮನಗಳನ್ನು ಪೂಜೆಯಲ್ಲಿ ಲೀನಮಾಡಿ ಬಸವಣ್ಣನವರು ತಮ್ಮ ಇರವನ್ನೇ ಸಂಪೂರ್ಣವಾಗಿ ಮರೆತುಬಿಡುತ್ತಾರೆ. ಕವಿಯು ಅದನ್ನೇ ಬಹಳ ಸೂಕ್ಷ್ಮವಾಗಿ 'ನಯನಂಗಳೊಳು ಪೂಜೆ ಬರೆದಂತೆ ನೋಡುತಂ' ಎಂದು ಹೇಳಿದ್ದಾನೆ. ಶಿವಭಕ್ತಿ ಭಾವವು ಬಸವಣ್ಣನವರ ದೇಹಮನಸ್ಸುಗಳೆರಡನ್ನೂ ಸಂಪೂರ್ಣವಾಗಿ ಆಚ್ಛಾದಿಸಿ ಬಿಡುತ್ತದೆ. ಈಸಮಯದ ಅವರ ಸ್ಥಿತಿಯನ್ನು ಹರೀಶ್ವರ ಕವಿಯು ಹೀಗೆ ವರ್ಣಿಸಿದ್ದಾನೆ.

ಭವದಿಂದ ಹಿಂಗುತಂ ನೆನಹಿಂದ ಹಿಗ್ಗುತಂ
ಬೆವರುತಂ ಬಿಕ್ಕುತಂ ತೇಗುತಂ ತೂಗುತಂ
ಕ್ರಮುವಳಿದು ಸುಳಿದು ಸುಖಿಯಾಗುತಂ ಬೀಗುತಂ
ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ
ಪುಳಕಂಗಳಿದಿರೇರೆ ಸುಖಜಲಂ ಕಣ್ತೀವೆ
ಬೆಳೆವ ಗದುಗದವಲರೆ ಭಕ್ತಿ ಚಿತ್ತಮನೋವೆ
ಕಂಪಿಸುತೆ ನಡೆಯುಡುಗೆ ಮನವಕ್ಕರಿಂ ಕರಗೆ
ಜೊಂಪಿಸುತೆ ತನು ಜೋಲೆ ಸಾತ್ತ್ವಿಕರಸಂ ಮಸಗೆ
ಮಣಿಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ
ತಣಿತಣಿದು ತಕ್ಕೈಸಿ ಮಿಕ್ಕು ಮಲೆಮಲೆದಾಡಿ

† † †

ಈಸಾಡಿ ಗಂಗಾಧರನ ಚರಣಮಂ ಪಿಡಿದು
ಲೇಸಾಗಿ ಚಿತ್ತದೊಳು ಸಂಗನಂ ನೆರೆಪಿಡಿದು
ಮನದೊಳಚ್ಯೋತ್ತಿ ಸುಖಮೂರ್ಛೆಯೊಳ್ ಸಂದಿರ್ದು
ಘನಸುಖದೊಳೆರಡಿಲ್ಲದೊಂದಲ್ಲದಿರುತಿರ್ದು
ನೆನೆದು ಚೇತರಿಸಿ ಮೆಲ್ಲನೆ ಮೆಲ್ಲನೆಚ್ಚತ್ತು
ಅನುಪಮಶಿವೈಕಸುಖಮುಖತೃಪ್ತಿಯಂ ಹೊತ್ತು
ಕಣ್ದೆರೆದು ಕುಳ್ಳಿರ್ದು ಸಂಗನಂ ನಡೆ ನೋಡಿ
ನುಣ್ದನಿಯೊಳರ್ಚನೆಯ ನೇಹಮಂ ಮಾತಾಡಿ

ಉಡುವಲ್ಲಿ ಉಂಬಲ್ಲಿ, ಕೊಡುವಲ್ಲಿ, ಪೊದೆವಲ್ಲಿ, ನಡೆವಲ್ಲಿ ನುಡಿವಲ್ಲಿ ಸಂಗ ಶರ ಣೆಂದೆನುತೆ ' ಸಂಗನಾಮಂಗಳಂ ಪುರಜನಕೆ ಕಲಿಸುತಂ

ಶಿವಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ
ಭವಪೂಜೆ ಬಲಿದು ಪುರುಷಾಕಾರವಾದಂತೆ
ಲಿಂಗ ಜಂಗಮವೊ ಮೇಣ್ ಜಂಗಮವೆ ಲಿಂಗವೋ
ಲಿಂಗಜಂಗಮವೆರಡು ಇಳೆಯೊಳು ವಿಭೇದವೋ
ಎಂಬಂತೆ ಸಾತ್ತ್ವಿಕಪ್ರಭು ಪೂಜಿಸುತ್ತಮಿರೆ

ಸಂಗದೇವಂ ಪ್ರಸನ್ನನಾಗಿ 'ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು' ಎಂದು ಕನಸಿನೊಳ್ ನುಡಿಯುವನು. ಈ ಭಕ್ತಿಗೆ—ಈ ನಿಸ್ಸೀಮ ಆತ್ಮಾರ್ಪಣಕ್ಕೆ—ಈ ಪ್ರೇಮಪಾರವಶ್ಯಕ್ಕೆ ಕಟ್ಟುಬೀಳದ ದೇವನಾವನು ? ಒಂದೊಂದು ಅನುಭವವನ್ನು ಪಡೆಯುತ್ತಾ ಬಸವಣ್ಣನವರು ಅನಪೇಕ್ಷಿತವಾಗಿಯೇ ಶಿವಸಾಯುಜ್ಯದ ಕಡೆಗೆ ತೆರಳುತ್ತಿದ್ದರೆಂಬಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಕಾರಣಪುರುಷರಾಗಿ ಭವಿಗಳ ಉದ್ಧಾರಕ್ಕೆ ಪುಟ್ಟಿದ ವಿಮುಕ್ತರಿಗೆ ಮುಕ್ತಿಯ ವೇಳೆ ಮಾತ್ರ ದೊರೆಯಲಿಲ್ಲ. ಈ ಅನುಭವವೃತ್ತಾಂತವನ್ನು ಮುಗಿಸಿ ಕವಿಯು " ಹರಕರುಣೋದಯಮಾದಂತರುಣೋದಯಮಾಗೆ " ಎನ್ನುವಾಗ ಪುಳಕದೊಂದಿಗೆ ನಮ್ಮ ಕಣ್ಣುಗಳಲ್ಲಿ ಆನಂದಭಾಷ್ಪಗಳುದುರುತ್ತವೆ. ಮುಂದೆ ಹರೀಶ್ವರನು ತಡೆಯಲಾರದೆ ಉಕ್ಕಿಬರುವ ತನ್ನ ಆನಂದಕ್ಕೆ ಪೂರ್ಣವಾಗಿ ನನ್ನ ಕಡಿವಾಣಗಳನ್ನು ಸಡಲಿಸಿ " ಎಲೆ ಬಸವ ಬಸವಣ್ಣ ಬಸವಯ್ಯ ಬಸವರಸ ಬಸವರಾಜ ಬಸವದೇವ, ಕೇಳಯ್ಯಾ ! ನಿನ್ನ ನೇಮವಿದಾರ್ಗುಂಟು ಗುರುಲಿಂಗದೊಳೆರಡಿಲ್ಲದಿಪ್ಪೆ........ಈಶನ ಮೀಸಲಪ್ಪ ಭಕ್ತ, ನಿನಗೆಣೆಯಿಲ್ಲ ಪಡಿಯಿಲ್ಲ ಪಾಸಟಿಯಾವಂ ? ಪಾಷಂಡಿ ಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಂಗಳಂ ಗಣಪರ್ವಂಗಳಂ ಸುಫಲಂ ಮಾಡಲೆಂದು ಬಂದ ಕಾರಣಿಕ ಬಸವ, ನಿನ್ನ ದೆಸೆಯಿಂದೆಮ್ಮ ಭಕ್ತಿಬಣ್ಣವೇರಿತು." ಎಂದು ಹೇಳುವ ನುಡಿಗೆ ನಾವೂ ದನಿಸೇರಿಸುವಂತಾಗುತ್ತದೆ. ಒಮ್ಮೊಮ್ಮೆ " ಕಾರಣಿಕನಾಗಿ ಏಕೆ ಪುಟ್ಟಿದೆ ತಂದೆ ನಮಗಾಗಿ ಇನಿತು ಕಷ್ಟವನೇಕೆ ಸಹಿಸುವೆ ಬಸವರಾಜ " ಎಂದು ಹಲಬುವಂತಾಗುತ್ತದೆ. ಹರೀಶ್ವರನ ಕಲಾಕೃತಿಯ ಮುತ್ತಿನ ಮಂಟಪವೇ ಈ ಸಾಧನಾಚಿತ್ರವೆಂದಲ್ಲಿ ತಪ್ಪಾಗದು. ಬಸವಣ್ಣನವರ ಪ್ರತಿಯೊಂದು ಹೆಜ್ಜೆಯೂ ಅನುಕರಣೀಯವೆಂಬ ಪೂರ್ಣಪ್ರೇಮದಿಂದಲೇ ಹರೀಶ್ವರನು ಅದನ್ನು ಅನುಕರಣೀಯವಾಗಿ ಚಿತ್ರಿಸಿದ್ದಾನೆ. ಇಲ್ಲಿಗೆ ವೃಷಭೇಂದ್ರನ ಮೂಲಕ ಸಂಗಮೇಶ್ವರನ ದರ್ಶನಲಾಭವು ಬಸವೇಶ್ವರನಿಗೆ ದೊರೆಯುವುದು.

ದರ್ಶನಾನಂತರ ಬಸವಣ್ಣನವರ ಜೀವನದಲ್ಲಿ ಯಾವ ಮಾರ್ಪಾಡು ಹುಟ್ಟುತ್ತದೆಯೆಂಬುದು ಸ್ವಾರಸ್ಯವಾದಸಂಗತಿ. ಬಿಜ್ಜಳರಾಯನಲ್ಲಿ ಮಂತ್ರಿಪದ

ವಿಯೂ ದೊರೆಯುತ್ತದೆ. ಅದೇಸಮಯದಲ್ಲಿ ಅವರು ಅನೇಕ ಪವಾಡಗಳನ್ನು ಮೆರೆದು ಲೋಕವಿಖ್ಯಾತರಾಗುತ್ತಾರೆ. ಶರಣಸಂಕುಲವೆಲ್ಲ ಅವರ ಆಶ್ರಯದಲ್ಲಿ ವರ್ಧಿಸುತ್ತದೆ. ಲೌಕಿಕವಾದ ಎಲ್ಲ ಸಂಪತ್ತೂ ಬಸವಣ್ಣನವ್ಕರವೇ ಆದರೂ "ಎಲೆ ಎಲೆ ಮಾನವ, ಅಳಿಯಾಸೆ ಬೇಡಲೋ, ಕಾಡ ಬೆಳದಿಂಗಳ ಸಿರಿಯು ಸ್ಥಿರವಲ್ಲ. ಕೇಡಿಲ್ಲದ ಪದವಿಯ ಕೊಡಲು, ಕೂಡಲಸಂಗಮದೇವನ ಮರೆಯದೆ ಪೂಜಿಸು" ಎನ್ನುವ ಮನೋಭಾವದಲ್ಲಿ ಯಾವ ವ್ಯತ್ಯಾಸವೂ ಬರುವುದಿಲ್ಲ. ಸಂಗನಿತ್ತುದನ್ನು ಶರಣರಿಗೀಯುವುದೊಂದನ್ನಲ್ಲದೆ ಬೇರೆ ಯಾವ ಸಂಬಧವನ್ನೂ ಬಸವಣ್ಣನವರು ಕಾಣರು. ಧನಕೆ ಯಾವ ಬೆಲೆಯನ್ನಿತ್ತಿದ್ದರೆನ್ನುವುದಕ್ಕೆ ಈ ವಚನವೇ ಸಾಕು. "ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು ಮರೆದೆನಯ್ಯಾ! ಕಾಂಚನಕ್ಕೆ ವೇಳೆಯುಂಟು ಲಿಂಗಕ್ಕೆ ವೇಳೆ ಇಲ್ಲ. ಹಡಿಕಿಗೆ ಮೆಚ್ಚಿದ ಸೊಣಗನು, ಅಮೃತದ ರುಚಿಯ ಬಲ್ಲುದೆ ಕೂಡಲ ಸಂಗಮದೇವಾ." ಜಾತಿ, ಮತ, ಕುಲಗೋತ್ರಗಳ ಮತ್ತೆ ದರ್ಪಕ್ಕೆ ಮಣ್ಣುಗಾಣಿಸುವುದನ್ನು ಬಸವಣ್ಣನವರು ತಮ್ಮ ಜೀವನ ಧ್ಯೇಯವನ್ನಾಗಿ ಮಾಡಿಕೊಂಡರು. ತಾವು ಬ್ರಾಹ್ಮಣಕುಲದಲ್ಲಿ ಹುಟ್ಟಿದರೂ ಒಮ್ಮೆಯೂ ಆ ಹೆಮ್ಮೆಗೆ ಮನವ ತೆರಲಿಲ್ಲ. ಹುಟ್ಟಿದ ಮದವಳಿಯಬೇಕೆಂದು ತಮ್ಮನ್ನು ತಾವು ಬಹಳ ಹೀನಾಯವಾಗಿ ಕಂಡುಕೊಳ್ಳುತ್ತಿದ್ದರು

"ಚನ್ನಯ್ಯನ ಮನೆಯ ದಾಸನ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು, ಇವರಿಬ್ಬರೂ ಹೊಲದಲ್ಲಿ ಬೆರಣಿಯನಾಯಹೋಗಿ ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನು, ಕೂಡಲಸಂಗಮದೇವ ನೀ ಸಾಕ್ಷಿಯಾಗಿ" ಎಂದು ಹೇಳಿಕೊಳ್ಳುವಷ್ಟು ದೂರ ಹೋಗಿದ್ದಾರೆ. ಭಕ್ತ, ಭವಿ ಎಂಬೆರಡು ಭೇದವನ್ನಲ್ಲದೆ ಬೇರೆ ಯಾವ ಆಸ್ವಾಭಾರದ ಮೇಲೆ ಕಟ್ಟಿದ ಮಾನವಕಲ್ಪಿತಭೇದಗಳನ್ನೂ ಬಸವಣ್ಣನವರು ಒಪ್ಪುತ್ತಿರಲಿಲ್ಲ. ಮಧುವಯ್ಯನೆಂಬ ಬ್ರಾಹ್ಮಣನ ಮಗಳನ್ನು, ಹರಳಯ್ಯನೆಂಬ ಹೊಲೆಯನ ಮಗನಿಗೆ ಕೊಟ್ಟು ವಿವಾಹವನ್ನು ಕೂಡ ಬಸವಣ್ಣನವರು ಮಾಡಿಸುತ್ತಾರೆ. ಇವರು ವರ್ಣಾಶ್ರಮಧರ್ಮಗಳಿಗೆ ತೋರುತ್ತಿದ್ದ ಈ ಗೌರವವು ಸ್ವಾಭಾವಿಕವಾಗಿಯೇ ಆಗಿನ ಬ್ರಾಹ್ಮಣರನ್ನು ನೋಯಿಸಿ ಕೆರಳಿಸಿರ

ಬೇಕು. ಅವರು ಬಂದು, ಬಸವಣ್ಣನವರನ್ನು ಅರಸನ ಮುಂದೆ ದೂರು ವುದು ಅದಕ್ಕೆ 'ಎರಗಿವಿಯ ಮರುಳಾದ, ಬಿಜ್ಜಳರಾಯನು ಬಸವಣ್ಣನವರನ್ನು ಪರೀಕ್ಷಿಸಹೋಗಿ ಸೋತು, ಅಪಮಾನಕ್ಕೀಡಾಗುವುದನ್ನು ಹರೀಶ್ವರನು ಚಿತ್ರವತ್ತಾಗಿ, ವರ್ಣಿಸಿದ್ದಾನೆ. ಬಸವಣ್ಣನವರನ್ನು ದೂರಲು ಬಂದ ಹಾರುವ ರನ್ನು ಕುರಿತು "ಛಾಂದಸರು, ವೇದಜಡರು ಮಟ್ಟೆಯ ಮರುಳ್ಗಳು ವೃಥೋ ತ್ಸಾಹಿಗಳು ಹೆಬ್ಬೇಳಿಗಳು ದರ್ಭೆಯ-ನಿರ್ಭಾಗ್ಯರು" ಎಂದು ಕರೆಯುವಾ ಗಂತೂ ಹರೀಶ್ವರನ ಲೇಖಣಿಯು ಬಹಳ ಚುರುಕಾಗಿ ಓಡುತ್ತದೆ. ಗ್ರಂಥದ ತೂಕ ಈ ನುಡಿಗಳಿಂದಿಳಿಯುವುದನ್ನು ಕೂಡ, ಹರೀಶ್ವರನು ಒಮ್ಮೊಮ್ಮೆ ಮರೆತುಬಿಡುತ್ತಾನೆ. ಬಸವಣ್ಣನವರಂತಹ ಮಹಾನುಭಾವರನ್ನು ಈ ಹೀನರು ಹಳಿದರಲ್ಲಾ ಎಂಬುದೇ ಹರೀಶ್ವರನ ಲಕ್ಷ್ಯ. ಅದಕ್ಕೆ ಆ ಕಾಲದಲ್ಲಿ ಸಾಕಷ್ಟು ಕಾರಣಗಳು ಇದ್ದರೂ ಇದ್ದಿರಬಹುದು. ಆದರೆ ಸೈರಣೆಯ ಕಣಿ ಯೆನಿಸಿದ್ದ ಬಸವಣ್ಣನವರ ಬಾಯಲ್ಲಿ ಆ ಮಾತುಗಳನ್ನು ಕವಿಯು ಹಾಕ ಬಾರದಾಗಿತ್ತು. ಬಸವಣ್ಣನವರ ಧಾರ್ಮಿಕ ದಿಗ್ವಿಜಯಕ್ಕೆ ಅವರ ಆತ್ಮಶಕ್ತಿ, ಪರಮತಸಹಿಷ್ಣುತೆ, ನಿಸ್ಸೀಮತ್ಯಾಗವೃತ್ತಿಗಳೇ ಕಾರಣವೆಂದು ಹರಿಹರನೇ ಹೆಜ್ಜೆಹೆಜ್ಜೆಗೂ ನಮ್ಮ ಮನಸ್ಸಿನಲ್ಲಿ ಅಚ್ಚೊತ್ತುತ್ತಾ ಹೋಗಿದ್ದಾನೆ. ಕಿನ್ನರ ಬೊಮ್ಮಯ್ಯನವರ ಕಥೆಯೊಂದಿಗೆ ಉಳ್ಳಿಯ ವೃತ್ತಾಂತವನ್ನು ಸೇರಿಸಿ ಕಾವ್ಯ ಸ್ವಲ್ಪ ಕೆಳಗಿಳಿಯಲು ಹರೀಶ್ವರನು ಕಾರಣನಾಗಿದ್ದಾನೆ. ಅಂತಹ ಸಣ್ಣವಿ ಷಯಕ್ಕೆ ಬೊಮ್ಮಯ್ಯನವರಂತಹ ಭಕ್ತರು ಮುನಿದರೆಂದೂ, ಆ ಮುನಿಸನ್ನು ಮನ್ನಿಸಲು ಬಸವಣ್ಣನವರು ಅಷ್ಟು ಶ್ರಮಿಸಿದರೆಂದೂ ಹೇಳಹೋಗಿರುವುದು ಸ್ವಲ್ಪ ಹಾಸ್ಯಾಸ್ಪದವಾಗಿದೆ.

ಬಸವಣ್ಣನವರ ಮಾನಸಿಕ ಬೆಳವಳಿಗೆ, ಜಾಗೃತಿಗಳನ್ನೇ ಲಕ್ಷ್ಯದಲ್ಲಿಟ್ಟು ಕೊಂಡಿರುವ ಹರೀಶ್ವರನು ಬಿಜ್ಜಳಬಸವಸಂಬಂಧದ ಸಮಸ್ಯೆಗೆ ಕೈಹಾಕದಿರು ವುದು ಅವನ ನೆಟ್ಟನೋಟದ ಬಗೆಗೆ ಇನ್ನೊಂದು ಕೀರ್ತಿಕಲಶವಾಗಿದೆ. ಭಕ್ತ ಪರಾಧೀನರಾದ ಬಸವಣ್ಣನವರ ಮಹಿಮೆಯನ್ನೇ ವರ್ಣಿಸುತ್ತ ಬಂದು ಕೊನೆಗೆ

ಬಸವಂ ಭಕ್ತಿಯಿಂ ನುಡಿವುತಿರಲಂದು
ಬಂದು ಸಂಗಂ ಜಂಗಮಾಕಾರದೊಳ್ ನಿಂದು
ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ

ಪ್ರೊಡವಿಯೊಳಗಿರಲು ಸಾಲ್ವುದು ಬಾ ಮಗನೆ ನಿನಗೆ
ಎನೆ ಕೇಳ್ದು ನಸುನಗುತೆ ನುಡಿದನಾ ಸಂಗಂಗೆ
ಮನಸಿಜಹರಂಗೆ, ಗಿರಿಶಂಗೆ ಗಿರಿಜೇಶಂಗೆ
ಸಂಗಯ್ಯ ಬಾಯೆಂದು ಕರೆವೆ ನೀನೆನ್ನುವಂ
ಪಿಂಗಲೀಯದು ಶರಣಗೋಷ್ಠಿ ಕೇಳೆನ್ನುವಂ
ಶರಣರೊಕ್ಕುದರ ಸವಿ ಕೈಲಾಸದೊಳಗುಂಟೆ
ಇಲ್ಲಿಯು ಸುಖಂ ದೇವ ಅಲ್ಲಿಯುಳ್ಳಡೆ ಲೇಸು
ಅಲ್ಲೆನ್ನೆ ಈಗಳೇ ಕೊಂಡು ಹೋಹುದು ಲೇಸು ''

ಎಂದು ಹೇಳಲು ಸಂಗನು ಶಿವಶರಣರಿಗೆಲ್ಲಾ ಮುಕ್ತಿಯನ್ನು ದಯಪಾಲಿಸಿ ದನು. ಎಂದು ಗ್ರಂಥಸೂಚಿಸುತ್ತದೆ. (ಶ್ರೀ. ಟಿ. ಎಸ್. ವೆಂಕಣ್ಣಯ್ಯನವರು ಅಚ್ಚು ಹಾಕಿಸಿರುವ ಕಾವ್ಯದಲ್ಲಿ ಈ ಕೊನೆಯ ಕೆಲವು ಪಂಕ್ತಿಗಳು ಬಿಟ್ಟು ಹೋಗಿವೆ.) ಇಲ್ಲಿಯೂ ಬಸವೇಶ್ವರನು ತನ್ನ ಪವಿತ್ರಾತ್ಮನ ಹೆಚ್ಚಳವನ್ನು ತೋರಿ, ಸಂಗನು ಎಲ್ಲ ಭಕ್ತರನ್ನೂ ಅನುಗ್ರಹಿಸುವಂತೆ ಮಾಡಿದ್ದಾನೆ. ಗ್ರಂಥವನ್ನೋದಿದವರೆಲ್ಲರೂ ಏಕಕಂಠರಾಗಿ,

ಗುರುಬಸವ ನಿನ್ನ ಕೂಡಿಂ
ಸುರಭಿ ಕರಂ ಮೂಗುವಟ್ಟುದದು ಕಲ್ಲಾಯ್ತು |
ಪರುಷಂ ಮರನಾದುದು ಸುರ—
ತರು ಚಿಂತೆಯ ಸಾರ್ದುದಮುವು ಚಿಂತಾರತ್ನಂ ||
ಶಿವಸೇವೆಯನುರುಶಿವನನು—
ಭವಭಕ್ತಿಯನರಿವ ಬಸವವಿಭು ನಿನ್ನರಿವಂ
ಭವನರಿವಂ ಶಿವನರಿವಂ
ಶಿವನ ಗಣಾಧೀಶರರಿವರರಿವವರೊಳರೆ ||

ಎಂದು ಧಾರಾಳವಾಗಿ ಹೇಳುವುದಲ್ಲದೆ ಭೀಮಕವಿಯೊಂದಿಗೆ,

ಸರಸಮೃದುಮಧುರೋಪಮೆಗಳಂ | ಕುರಿಸೆವವಸ್ತುಕವರ್ಣಕಂಗಳ
ನೆರಪಿ ಹರನಂ ಹರಗಣಂಗಳನೈದೆ ಕೀರ್ತಿಸಿದ ||
ಧರೆಗುಭಯಕವಿಶರಭಭೇರುಂ | ಡರಸು ಕವಿ ಹರಿಬುಧವರನ....||

ಎಂದು ನಮ್ಮ ಕೃತಜ್ಞತೆಯ ಪುಷ್ಪಮಾಲಿಕೆಯನ್ನು ಹರೀಶ್ವರನಿಗೆ ಆನಂದದಿಂದ

ಅರ್ಪಿಸಬಹುದು. ಧಾರಾಳವಾದ ಶೈಲಿ, ಸರಸೋಪಮೆ, ಉನ್ನತಪಾತ್ರಸೃಷ್ಟಿ ಕಳಾಮಯವಾದ ರಸವೈವಿಧ್ಯಗಳಿಂದ ಮಾತ್ರವಲ್ಲದೆ, ವಿಚಾರರೀತಿಯ ನಾವೀನ್ಯ, ಕೆಚ್ಚೆದೆಗಳಿಂದ ಹರೀಶ್ವರನು ಕನ್ನಡಕಾವ್ಯಾಕಾಶದಲ್ಲಿ ಚಿರಕಾಲ ರಾರಾಜಿಸುವ ತಾರೆಯಾಗಿದ್ದಾನೆ. ಸ್ವಾತಂತ್ರ್ಯವನ್ನು ಪ್ರೀತಿಸುವ ಕವಿಗಳಿಗಂತೂ ಅವನು ಧ್ರುವತಾರೆಯಾಗಿದ್ದಾನೆಂದರೂ ತಪ್ಪಾಗದು.

---

# ಪಂಪಾಶತಕದಲ್ಲಿ 'ಭಕ್ತಿ' ಪ್ರತಿಪಾದನೆ.

ಹರಿಹರಕವಿ 'ಪಂಪಾಶತಕ'ದ ಕರ್ತೃ. 'ಗಿರಿಜಾಕಲ್ಯಾಣ'ದಂಥ ಉತ್ತಮ ಚಂಪೂಕೃತಿಯನ್ನು ರಚಿಸಿದ ಈತನು ಸಾಹಿತ್ಯದಲ್ಲಿ ಹೊಸದನ್ನು ಹುಡುಕಲೆಳಸಿ ನಾಲ್ಕು ಹೆಜ್ಜೆ ಮುಂದೆ ಹೋಗಿ ರಗಳೆಗಳನ್ನು ಬಳಕೆಗೆ ತಂದನು. ಅಂದಿನ ಮಂದಿಯ ವಿಮರ್ಶೆಗೂ ತೆಗಳಿಕೆಗೂ ಪಾತ್ರನಾಗಿದ್ದವನೇ ಇಂದು ನಮ್ಮ ಹೊಗಳಿಕೆಗೂ ಪಾತ್ರನಾಗಿದ್ದಾನೆ. ವಚನದಲ್ಲಿಯೂ ಷಟ್ಪದಿಯಲ್ಲಿಯೂ ರಗಳೆಗಳಲ್ಲಿಯೂ ಕೃತಿಗಳನ್ನು ವಿರಚಿಸಿದ ವೀರಶೈವ ಕವಿಗಳೆಲ್ಲರೂ ಹರಿಹರನಿಗೆ ಋಣಿಗಳಾಗಿದ್ದಾರೆ. ಭೀಮ, ರಾಘವಾಂಕ, ಪದ್ಮಣಾಂಕ, ನೀಲಕಂಠ ಮೊದಲಾದ ಅಂದಿನ ಸುಪ್ರಸಿದ್ಧ ಕವಿಗಳು ತಮ್ಮ ತಮ್ಮ ಗ್ರಂಥಗಳಲ್ಲಿ ಹರಿಹರನನ್ನು ಸ್ತುತಿಸಿಯೇ ಮುಂದುವರಿದಿದ್ದಾರೆ. ಇತರರೂ ಅನೇಕ ಸಂದರ್ಭಗಳಲ್ಲಿ ಹೊಗಳಿದ್ದಾರೆ.

ಹರಿಹರನು ಕಟು ವೀರಶೈವ. ತನ್ನ ದೈವವಾದ ಹಂಪೆಯ ವಿರೂಪಾಕ್ಷನನ್ನು ಎಷ್ಟು ವಿಧವಾಗಿ, ಹೇಗೆ ಸ್ತುತಿಸಿ ನಲಿದಿದ್ದಾನೆಯೋ ವೀರಶೈವರಲ್ಲದವರನ್ನು— 'ಭವಿ' ಗಳನ್ನು—ಹಾಗೆ ಅಷ್ಟು ವಿಧದಲ್ಲಿ ನಿಂದಿಸಿದ್ದಾನೆ; ಕಡೆಗಣಿಸಿದ್ದಾನೆ. ಇದು ಅವನ ಪ್ರತಿಕೃತಿಯಲ್ಲಿಯೂ ಮೈದೋರಿದೆ. 'ಪಂಪಾಶತಕ'ದಲ್ಲಿ ವಿಶೇಷಾಂಶದಿಂದ ಕಾಣುತ್ತದೆ.

'ಪಂಪಾಶತಕ' ವೃತ್ತಗಳಲ್ಲಿದೆ. ಕವಿ ತನ್ನ ಹೃದಯದ ಭಕ್ತಿಭಾಗವನ್ನು ಅಲ್ಲಿ ತೆರೆದಿಟ್ಟಿದ್ದಾನೆ. ಅದರಲ್ಲಿ ಕಂಡುಬರುವ ವಿಧವಿಧ ಭಕ್ತಿಯ ಭಾವಗಳು; ಮಾತುಗಳು, ರೀತಿಗಳು, ವೇದನೆಗಳು, ನಿವೇದನೆಗಳು ಮನೋಜ್ಞವಾಗಿವೆ; ರಸವತ್ತಾಗಿವೆ; ಆಳವಾಗಿವೆ. ಪ್ರಾರಂಭದಲ್ಲಿಯೇ—

ಕರೆವುದದೆಂದು, ಕಾಲ್ವಿಡಿಸಿಕೊಳ್ವುದದೆಂದು ದಯಾಕಟಾಕ್ಷದಿಂ ||
ಪೊರೆವುದದೆಂದು, ಮೆಲ್ನುಡಿಗಳಿಂ ಮುದವೇರುಪುದೆಂದು, ಸೋಂಕಿನಿಂ||
ಹರಿಪುದದೆಂದು, ಸಂತಸದೆ ಪೆರ್ಚಿಪುದೆಂದು, ಮನಸ್ವಿ ನೀಂ ಕರಂ |
ಕರಗಿಪುದೆನ್ನನೆಂದೊಸೆದು ಪೇಳೆನಗಿಂದೆಲೆ ಹಂಪೆಯಾಳ್ದನೇ ? ||

ತೆರೆ ಪಸಗಲ್ ಸುಖಾಶ್ರುವಿದಿರೇರುತಿರಲ್ ಪುಳಕಂ ಬೆಮರ್ ಕರಂ |
ಪರಿಯಿದೆ ಗದ್ಗದಂ ಸುರಳಿಗೊಳುತ್ತಿರೆ ಕಂಪನಮುರ್ಕಿ ಲೀಲೆಯೊ ||
ತ್ತರಿಸುತಿರಲ್ ಮಹೇಶ ನಿಜಭಕ್ತಿತರಂಗಿಣಿ ಮೀರುತುಬ್ಬರಂ |
ಬರಿಪ್ರುತುಮೆನ್ನ ಮೇಲೆ ಮಡುಗಟ್ಟುವುದೆಂದೆಲೆ ಹಂಪೆಯಾಳ್ದನೇ ? ||

ಎಂದು ನುಡಿದಿದ್ದಾನೆ. ಇದರ ಭಾವವೇನು, ಆರ್ದ್ರತೆಯೇನು, ಆಳವೇನು !

ಭಕ್ತಿ ಹುಟ್ಟುವುದು ಸುಲಭವಲ್ಲ. ಅದು ಜನ್ಮವನ್ನು ಅಂಟಿಬರುವ ಒಂದು ವಾಸನಾವಿಶೇಷ. ಜೀವನದಲ್ಲಿಯಾದರೂ ಅದನ್ನು ಸಾಧಿಸಬೇಕಾದರೆ ಯೋಗ್ಯತೆ ಬೇಕು; ಸಂಸ್ಕಾರ ಬೇಕು; ಸ್ಥೈರ್ಯ ಬೇಕು. ನಿಜವಾದ ನಿರ್ವ್ಯಾಜವಾದ ಭಕ್ತಿ ಮುಕ್ತಿಗೆ ಕಾರಣ. ಜ್ಞಾನಿಗಳು ಕೂಡ ಈಶ್ವರಸಾಕ್ಷಾತ್ಕಾರ ಸಮಯದಲ್ಲಿ ಸಿಕ್ಕಿದ ವರಗಳನ್ನು ಕೇಳದೆ "ಈ ಭವವೇದನೆಯನ್ನು ಹಿಂಗಿಸಿ ನಿನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ಕೊಡು ತಂದೆ." ಎಂದು ಬೇಡುವರು. ಈ ಭಕ್ತಿಗೆ ಕಟ್ಟಿಲ್ಲ, ಕಟ್ಟಳೆಯಿಲ್ಲ. ಯಾರ ಬಾಳಿಗೆ ಹೇಗೆ ಹೊಂದಿಬರುವುದೋ ತಿಳಿಯುವುದಿಲ್ಲ. ಪ್ರವಾಹದಂತೆ ನಿರ್ದಿಷ್ಟಪ್ರದೇಶದ ಕಡೆಗೆ ಹರಿಯುವುದೇ ಇದರ ಗುಣವಿಶೇಷಗಳಲ್ಲಿ ಒಂದು. ಇದು ಹರಿಹರನಲ್ಲಿ ಸಂಪೂರ್ಣವಾಗಿ ಮೈದೋರಿದೆ. ಹಂಪೆಯ ವಿರೂಪಾಕ್ಷನನ್ನು— "ನೋಡದ ಕಣ್ಣಳೇಕೆ ? ಸಲೆ ಕೇಳದ ಕರ್ಣಂ ಅದೇಕೆ ? ಭಕ್ತಿಯಿಂ ಪಾಡದ ಬಾಯ್ ಅದೇಕೆ ? ಪೆಸರ್ಗೊಳದ ಜಿಹ್ವೆ ಅದೇಕೆ ? ಪೂಜೆಯಂ ಮಾಡದ ಕೈಗಳೇಕೆ ? ನೆರೆ ನೋಂಕದ ದೇಹಂ ಅದೇಕೆ ? ಕೂಡಿಯುಲ್ಲಾಡದ ಚಿತ್ತಮೇಕೆ ?" ವಿರೂಪಾಕ್ಷನನ್ನು—ಹಂಪೆಯಾಳ್ದನನ್ನು —ಪೂಜಿಸುವಾಗ ಕೈ ಎಂದಿಗೆ ಆನಂದಾಧಿಕ್ಯದಿಂದ ಕಂಪಿಸೀತು ! ಎಂದಿಗೆ ಶರೀರದಲ್ಲಿ ರೋಮಾಂಚನವಾದೀತು ! ಮಹೋತ್ಸಾಹದಿಂದ ಕಣ್ಣುಗಳಲ್ಲಿ ಸುಖರಸ ಕಂಬನಿಯಾಗಿ ಇನ್ನೆಂದು ಒಸರೀತು ! ನಾಲಗೆಯಲ್ಲಿ ಪಂಪಯರಸನ ವಿಷಯಕವಾದ ನಲ್ಮಾತುಗಳು ಎಂದಿಗೆ ಬಂದಾವು ! ಇವೆಲ್ಲವೂ ದೊರೆಕೊಳ್ಳಲು ದೇವನನ್ನು ಆರಾಧಿಸಿ ಎಂದಿಗೆ ಧನ್ಯನಾಗುವುದು ?

ಸತಿಪುತ್ರರ್ ಮಿತ್ರರಾಪ್ತರ್ ತನುಮನಧನವೆಂಬಿಂತಿವಂ ನಿತ್ಯಮೆಂದು|
ಚ್ಚತರ ವ್ಯಾಸಂಗದಿಂ ಮೆಯ್ ಅರಿಯದೆ ಮರುಳಾಗಿರ್ದೆನೆನ್ನಂ
ದುರಾಶಾ ||

ಮೃತನಂ, ದುರ್ಮೋಹಿಯುಂ, ದುಸ್ತರತರ ವಿಷಯವ್ಯಾಪ್ತನಂ
ದುರ್ಧರೈನೋ |
ಹತನಂ ದುರ್ಬೋಧನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷ-
ಲಿಂಗಾ ||

ಈ ವೈರಾಗ್ಯ ಎಲ್ಲಿಯ ವರೆಗೆ ಹೋಗಿದೆ ! ತನ್ನನ್ನು 'ದುರಾಶಾವೃತ, ದುರ್ಮೋಹಿ, ದುಸ್ತರತರ ವಿಷಯವ್ಯಾಪ್ತ' ಎಂದು ಮುಂತಾಗಿ ನಿಂದಿಸಿ ಕೊಂಡು ನೈಚ್ಯವನ್ನು ಹೇಳಿಕೊಳ್ಳಬೇಕಾದರೆ ಕವಿಹೃದಯ ಎಷ್ಟು ಪಕ್ವ ವಾಗಿದ್ದಿರಬೇಕು ! ಈ ಒಂದೊಂದು ಮಾತಿನ ಹಿಂದೆಯೂ ಎಂಥ ದೈನ್ಯರಸ ಹರಿಯುತ್ತಿರಬೇಕು! ಇದಾಗದೆ ಭಕ್ತಿ ಕೈಗೂಡುವುದಿಲ್ಲ. ದೇವನು 'ಪುಣ್ಯದ ನೆಲೆವೆರ್ಚು', 'ದುರಿತಾಂತಕ', 'ಮೇರೆದಪ್ಪಿದ ಕರುಣಾಬ್ಧಿ'ಯೇ ಆದರೂ ಭಕ್ತನ ಹೃದಯವನ್ನು ಪರೀಕ್ಷಿಸದೆ ಬಿಡನು. 'ನಾನು—ನನ್ನದು' ಎಂಬಿ ವನ್ನು ಬಿಟ್ಟ ಹೊರತು ಭಕ್ತಿಗೆ ಸಾರ್ಥಕವಿಲ್ಲ; ಪಾವಿತ್ರ್ಯವಿಲ್ಲ. ಅಂಥ ನಿರ್ಮಲಭಕ್ತಿ ದೇವನನ್ನು ಸೆಳೆಯದೆ ಬಿಡದು. ಆಗ ಕರುಣಾಳು ಓಡಿಬರು ವನು; ಭಕ್ತನನ್ನು ರಕ್ಷಿಸುವನು. ಈಶ್ವರನ ಮಹಿಮೆ ತಾನೆ ಎಂಥದು?—

ವಸುಧಾವಂದಿತನೀತನೀತನೆ ಮಹಾನಾಟ್ಯಾಭಿರಂಗಂ ವಿರಾ |
ಜಿಸಲಂದಾಡಿದನೀತನೀತನೆ ನಿತಾಂತಂ ಭಕ್ತಯೂಥಕ್ಕೆ ಸಂ ||
ತಸದಂ ಸಾರ್ಚುವನೀತನೀತನೆ ಮುರಾರಿಬ್ರಹ್ಮರೊಲ್ದೊಲ್ದು ಪೂ |
ಜಿಸುವೀಶಪ್ರಭುವೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ! ||

* * * *

ಜಿತ ಪುಷ್ಪಾಯುಧನೀತನೀತನೆ ಸರೋಜಾತಾಕ್ಷವಾಣೀಶವಂ |
ದಿತ ಸರ್ವೇಶ್ವರನೀತನೀತನೆ ಸಹಸ್ರಾಕ್ಷಪ್ರಮುಖ್ಯಾಮರಾ ||
ರ್ಚಿತಪಾದಾಂಬುಜನೀತನೀತನೆ ಕಪಾಳಾಭೀಳಮಾಳಾವಿಮಂ
ಡಿತ ವಕ್ಷಃಸ್ಥಳನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ! ||
ನತದೇವಾಧಿಪನೀತನೀತನೆ ವಿರಿಂಚೋಪೇಂದ್ರ ಮಧ್ಯಸ್ಥಿತೋ |
ದ್ಧಿತ ಲಿಂಗೋನ್ನತನೀತನೀತನೆ ಸಹಸ್ರಾಂಶುಪ್ರತಾನುತುಲೋ ||
ನ್ನತ ತೇಜೋಮಯನೀತನೀತನೆ ಪರಂಜ್ಯೋತಿಸ್ವರೂಪ ಪ್ರಕಾ |
ಶಿಕ ಪುಣ್ಯೋದಯನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ! ||

ವಿರೂಪಾಕ್ಷನ ದರ್ಶನವಾದಾಗ ಹೇಗೆ ಎಷ್ಟು ಹೊಗಳಿದರೂ ಮನಸ್ಸಿಗೆ ತೃಪ್ತಿಯಿಲ್ಲ. 'ಗಂಗಾಧರ' 'ಭೋಗೀಂದ್ರಾರ್ಚಿತ' 'ರತೀಶವಿಪಿನ ಪ್ರೋದ್ಭೂತದಾವಾಗ್ನಿ' 'ಶರಣಹೃದ್ರಾಜೀವಸಪ್ತಾಶ್ವ' 'ನಾಗೇಂದ್ರಾಜಿನ ದಿವ್ಯವಸ್ತ್ರಧರ' 'ಶೂಲಿ' 'ಕಪಾಲಿ' 'ಪರಮ' 'ಸರ್ವಜ್ಞ' 'ಶಂಭು' 'ವಿಭು'! ಇನ್ನು ಇಂಥ ಸ್ವಾಮಿಗೆ ಸರಿಯಾದವನು ಚತುರ್ದಶ ಭುವನಗಳಲ್ಲಿ ಹುಡುಕಿದರೂ ಸಿಕ್ಕುವುದಿಲ್ಲ. "ತ್ರಿಜಗತ್ಪೂಜಿತನೀತ, ಸುರರ್ ಕೊಂಡಾಡೆ ದಿವ್ಯಾಸ್ತ್ರಮುಂ ವಿಜಯಂಗಿತ್ತವನೀತ, ಮುನಂ ಮುಟ್ಟಿರ್ಪ ಭಕ್ತಜನಕ್ಕಾಶ್ರಯನೀತ, ವೇದಕ್ಕುನ್ನತನೀತ; ಇವನೇ- "ಗಿರಿಶ; ಭಾಳಾಕ್ಷ; ಮನೋಜಹರ;" ಇವನೇ- "ಆನಂದಸುಧಾಬ್ಧಿವರ್ಧನಕಲಾಸಂಪನ್ನ," ಇವನೇ ತನ್ನನ್ನು- "ಕೃಪೆಯೊಳ್ "ತೊಳ್ತುಗೊಂಡಾಳ್ದವನು;" ಇವನೇ- "ನಾನಾದೇವಕಿರೀಟಕೋಟಿವಿಲಸತ್ಪಾದಾಬ್ಜ, ದುರಿತಘೋರಧ್ವಾಂತಮಾರ್ತಾಂಡ;" ಇವನೇ ತನಗೆ-"ಪುಣ್ಯಬಂಧು, ಪರಮಾರ್ಥಬಂಧು, ಮನೋಹರ ಬಂಧು, ಅಪೂರ್ವಬಂಧು, ಅನಾರತಬಂಧು!" ಇಂಥ ಹೃದಯಸ್ವಾಮಿಯ ಮುಂದೆ, "ಎತ್ತಣ ಹರಿ? ಎತ್ತಣ ಅಬ್ಜಭವನ್' ಎತ್ತಣ ವಾಸವನ್? ಎತ್ತಣ ಅಗ್ನಿ? ಎತ್ತಣ ಯಮನ್ ? ಎತ್ತಣ ತ್ರಿದಶಸಂಕುಳಂ? ಎತ್ತಣ ಭಾಸ್ಕರೇಂದುಗಳ್?...." ಈ ಸ್ತೋತ್ರ, ಈ ಧ್ಯಾನ, ಈ ಭಕ್ತಿಪರವಶತೆಯು ಪರಮಾವಧಿ. ಈ ಆರಾಧನೆ ಮತ್ತೊಬ್ಬರಿಗೆ ಸಾಧ್ಯವಿಲ್ಲ!

ಹರಿಹರನ ಭಕ್ತಿ ನಿಶ್ಚಲವಾದ, ಇತರ ದೈವಗಳನ್ನು ಸ್ವಲ್ಪವಾದರೂ ಸ್ಮರಿಸದೆ ಹಂಪೆಯರಸನಲ್ಲಿ ನೆಲೆಗೊಂಡ ಅಕಳಂಕ ಭಕ್ತಿ.— "ಅವನಂ ನೋಡಿದ ಕಣ್ಗೆ ಮತ್ತೆ ಕೆಲವುಂ ರೂಪೇ? ವಿರೂಪಾಕ್ಷನೆಂಬುವನಂ ಮುಟ್ಟಿದ ಕೈಗೆ ಮತ್ತೆ ಕೆಲವುಂ ಮೈಯ್ಯೋ? ಸ್ತೋತ್ರಮುಂ ಸವಿದಾ ನಾಲಗೆಗೊರ್ಮೆ ಮತ್ತೆ ಕೆಲವುಂ ಮಾಣ್ಮಾಣ ಶಬ್ದಂಗಳೇ?— ಮೃಡನಿರ್ದಂತಿರೆ ಕೋಟಿ ಕೂಟಕುರುದೈವಕ್ಕಾಸೆಯಂ ಮಾಡದಿರ್, ಕಿಡದಿರ್ ಮಾನವಾ! ನಡೆ, ನೋಡು, ಅರ್ಚಿಸು, ಕೀರ್ತಿಸು, ಆದರಿಸು, ಆನಂದದಿಂ ಬೇಡು, ಬಲ್ವಿಡಿ, ನಂಬು ವಿರೂಪಾಕ್ಷನಂ!' ಈ ಮಾತುಗಳಲ್ಲಿ ಎಂಥ ನಿಶ್ಚಲತೆ! ಎಷ್ಟು ಭರವಸೆ! ಎಷ್ಟು ಬೇಡಿಕೆ! 'ನನ್ನ ಮಾತುಗಳನ್ನು ನಂಬು; ಪ್ರಮಾಣ ಪೂರ್ವಕವಾಗಿ ಹೇಳುತ್ತೇನೆ' ಎಂದು ಕವಿ ಸತ್ಯವಚನಗಳನ್ನಾಡುತ್ತಾನೆ.

ಮಾನವನ ಮನಸ್ಸು ಚಂಚಲ. ಯಾವ ಗಳಿಗೆಗೆ ಯಾವ ಕಾರ್ಯದಲ್ಲಿ ಹೇಗೆ ಪ್ರವರ್ತಿಸುವುದೋ ತಿಳಿಯುವುದು ಕಷ್ಟ. ಭಕ್ತಿ ಅಂಥ ಮನಸ್ಸಿನಲ್ಲಿ ಹುಟ್ಟಬೇಕಾದರೆ ಅಸಾಧಾರಣ ಸ್ಥೈರ್ಯಬೇಕು. ವೈರಾಗ್ಯಕ್ಕೆ ಬಗ್ಗದ ಮನಸ್ಸು ಆಶೆಯ ಮಾತಿಗಾದರೂ ಬಗ್ಗೀತು. ಕವಿ ಅದನ್ನೂ ಸಾಧಿಸಿದ್ದಾನೆ. ಹೀಗಾದರೂ ಭಕ್ತಿಯನ್ನು ಮಾಡು.—

ಅಕ್ಷಯ ಸಂಪದಂ, ಕಿಡದ ಕೀರ್ತಿ, ಅನೂನ ಪರಾಕ್ರಮಂ, ಧರಾ |
ರಕ್ಷಣಶಕ್ತಿ, ದರ್ಪಕನನೇಳಿಪ ರೂಪು ಇನಿತಲ್ಲವಣ್ಣ ಕೇಳ್ ||
ಈ ಕ್ಷಣದಿಂದೆ ಬರ್ಪುದೆಲೆ ಮಾನವ ಮಾಣದಹರ್ನಿಶಂ ವಿರೂ |
ಪಾಕ್ಷನನರ್ಚಿಸುನ್ನತನನರ್ಚಿಸಜಾತನನರ್ಚಿಸಳ್ಕರಿಂ ||

ಉದಾಹರಣೆಗಳನ್ನು ಕೊಟ್ಟು ಮನಸ್ಸು ತಿರುಗುವುದೇನೊ ನೋಡಿದ್ದಾನೆ—

ಕೊಡಗೂಸೊರ್ವಳದೊಂದು ಬಟ್ಟಲೊಳೆ ಪಾಲಂ ತಂದು ಮುಂದಿಟ್ಟು ನೀಂ |
ಕುಡಿ ಎಮ್ಮವ್ವೆ ದಿಟಂ ಕರಂ ಬಡಿವಳ್ ಎಂದಳ್ತಳ್ತು ಕಾರ್ಪಣ್ಯದಿಂ |
ನುಡಿಯಲ್ಕಾನುಡಿಗಂಜಿ ತಾನರರೆ ! ಕಾರುಣ್ಯಾಕರಂ ಜೂಳಿಯಿಂ |
ಕುಡಿದಂ ಪಾಲನಅದೇಂ ಕೃಪಾಳುವೋ ! . . . . . . . ||

ಕಣ್ಣಪ್ಪ, ಚಂಡೇಶ್ವರ ಪಿಳ್ಳೆ, ಜೊಮ್ಮಣ್ಣ ಮೊದಲಾದವರು ಎಂಥ ಭಕ್ತಿಯನ್ನು ತೋರಿದ್ದಾರೆ ! ಆ ಕೊಡಗೂಸು ಎಷ್ಟು ಭಕ್ತಿ ಮಾಡಿದ್ದಾಳೆ ! ಇಷ್ಟೇ ಅಲ್ಲ; ವಿರೂಪಾಕ್ಷ ದೇವರಲ್ಲಿ ನಿಶ್ಚಲವಾದ ಮನವಿಟ್ಟವರಿಗೆ ಅಸಹ್ಯ ಉಗ್ರಬಾಧೆಗಳು ಕೂಡ ಬಯಲಾಗಿವೆ.

ಸ್ಮರನಿಂ ಬೆಂದುರಿವಂಗೆ ರೋಗತತಿಯಿಂದಂ ನೂಂದಳಲ್ವಂಗೆ ನಿ |
ಷ್ಠುರಮುಗ್ರಂ ಪರುಷಂಗಳಿಂ ಬಳಲ್ವಂಗತ್ಯುಗ್ರ ತಾಪಂಗಳಿಂ ||
ಕೊರಗುತ್ತಳ್ಕುವವಂಗೆ ಶತ್ರುಭಯದಿಂ ಬೆಳ್ಪಾಗಿ ಬೀಳ್ವಂಗೆ ಸಾ |
ದರದಿಂ ಕಾಯಲಿದೊಂದೆ ಸಾಲ್ವುದು ದಿಟಂ ನಾಮಂ ವಿರೂಪಾಕ್ಷನಾ ||

ಮಾತಿನಲ್ಲಿ ನಂಬಿಕೆಯನ್ನೂ ಸ್ಥೈರ್ಯವನ್ನೂ ಶಕ್ತಿಯನ್ನೂ ಸೂಸುವ ಈ ಪದ್ಯವನ್ನು ನೋಡಿರಿ—

ಮನಮೊಸೆದರ್ಚಿಸರ್ಚಿಸು ಪೊಗಳ್ಪೊಗಳಾಳ್ದನಾಳ್ದನಂ ಕರಂ |
ನೆನೆನೆನೆ ನೋಡು ನೋಡು ಮರೆಗೊಳ್ ಮರೆಗೊಳ್ ನೆರೆ ನಂಬು
ನಂಬು ಕೆ ||
ಮ್ಮನೆ ಕೆಡಬೇಡ ಬೇಡ ಭರದಿಂ ಸಲೆ ಮೆಚ್ಚಿಲೆ ಮೆಚ್ಚು ಮೆಚ್ಚು ವಂ|
ಚನೆಗಿಡೆ ನಚ್ಚುನಚ್ಚು ಮಿಗೆ ಬಲ್ಪಿಡಿ ಬಲ್ಪಿಡಿ ಹಂಪೆಯಾಳ್ದನಂ ! ||

ಮಾನವಜನ್ಮದಲ್ಲಿ ಹುಟ್ಟಿ ಮೂಕನಾಗದೆ, ಅಂಧನಾಗದೆ, ಕೂನದೇಹನಾಗದೆ, ಪಂಗುವಾಗದೆ ಕಿವುಡನಾಗದೆ, ಹೀನವರ್ಣನಾಗದೆ ಇರುವುದು ಪುಣ್ಯವಲ್ಲವೆ ? ಸಾಧನೆಗೆ ಇದಕ್ಕಿಂತ ಸೌಕರ್ಯ ಬೇಕೆ ? ಈ ಜನ್ಮದಲ್ಲಿ ನಡೆಯದಿರುವುದು ಮುಂದೆ ನಡೆದೀತೆ ? ಹಂಪೆಯರಸನನ್ನು ಈಗ ನೆನೆಯದಿದ್ದರೆ ಬದುಕು ಸಾರ್ಥಕವೆ ? ಹೇಗೆ ಧ್ಯಾನಮಾಡಲಿ ? ಎಲ್ಲಿ ಈಶ್ವರನನ್ನು ಅರಸಲಿ ? ಎಂಬ ತರ್ಕಗಳೇಕೆ ? ಆತನ ಆರಾಧನೆಗೆ ಹೊತ್ತಿನ ಗೊತ್ತೆ ? ಸ್ಥಳದ ವಿವೇಚನೆಯೆ ? ನಿಯಮದ ತಡೆಯೆ ? “ ನಲಿನಲಿದುಬ್ಬಿ, ಬೊಬ್ಬಿಡುತೆ, ಕೊರ್ಬುತೆ, ಕೂಗುತೆ, ಪಾಡುತಾಡುತಗ್ಗಲಿಸುತೆ ಬೀಗಿ ತೂಗುತೆ ಒಸೆದರ್ಚಿಸು ಮಾನವ ಹಂಪೆಯಾಳ್ದನಂ ! ” ಆಗ ಮಾನವ ಜನ್ಮ ಬಂದದ್ದಕ್ಕೆ ಸಾರ್ಥಕ.

ಕ್ಷಣಿಕಸುಖಮಗ್ನನಾದರೆ ಮನುಷ್ಯನಿಗೆ ಎಲ್ಲಿಗೆ ಕೊನೆ? ಇದು ಎಲ್ಲಿಯವರೆಗೆ ಹೀಗೆ ಇರುತ್ತದೆ ? ಇದೇ ಸ್ಥಿರವೆಂಬ ಆಶೆಯೆ ? ಅಂಥ ಆಶೆ ಇದ್ದರೆ ಬಿಟ್ಟುಬಿಡುವುದು ಲೇಸು. ಕವಿ ಅದಕ್ಕೂ ಉದಾಹರಣೆ ಕೊಟ್ಟಿದ್ದಾನೆ:—

ಹೆಂಡತಿ ಬಾರಳರ್ಥವದು ಬಾರದು ಪುತ್ರರು ಬಾರರಿಷ್ಟರುಂ |
ಕಂಪ ಸಖೀಜನಂ ಜನನಿಯುಂ ಬರರಾ ನೆರೆ ಬಾರದಕ್ಕಟಾ ||
ತಂಡದ ಪಾಪಪುಣ್ಯವಿವೆ ಬರ್ಪುವಿವರ್ಕೆ ಮಹೇಶನಂ ನತಾ |
ಖಂಡಲವೃಂದನಂ ಬಿಡದೆ ಪೂಜಿಸು ಮಾನವ ಹಂಪೆಯಾಳ್ದನಂ ! ||

ಬರುವಾಗ ಏನನ್ನೂ ತರಲಿಲ್ಲ. ಹೋಗುವಾಗ ಕೈಯಲ್ಲಿ ಏನನ್ನು ಹಿಡಿದುಕೊಂಡು ಹೋಗಲಾಗದಿದ್ದರೂ ಬೆನ್ನಿನ ಮೇಲೆ ದೊಡ್ಡ ಗಂಟು ಇರುತ್ತದೆ. ಏನನ್ನು ತಂದಿರುವೆ ? ಎಂದು ಅಲ್ಲಿ ಕೇಳಿದರೆ ಒಂದು ಮೂಡೆ ಪಾಪವನ್ನು ಕಟ್ಟಿಕೊಂಡು ಬಂದಿದ್ದೇನೆ, ಎನ್ನುವುದೆ ? ಅದು ಸಾರ್ಥಕವೆ ?

ವೃಥಾ ದುರ್ಗತಿಯನ್ನು ತಂದುಕೊಳ್ಳುವುದೆ ? ಇವಕ್ಕೆಲ್ಲ ಮಾರ್ಗವನ್ನು ನಾವೇ ಮಾಡಿಕೊಳ್ಳುವುದು ಎಂಥ ಜಾಣತನ ? ತಿಳಿದೂ ಮೌಢ್ಯವನ್ನು ಬೆನ್ನಂಟಿಸಿಕೊಳ್ಳುವುದೆ ?

ಸಖ್ಯವೂ ಆತ್ಮನಿರ್ವೇದನೆಯೂ ಭಕ್ತಿಯ ಕೊನೆಯ ಅವಸ್ಥೆಗಳು. ಈಶ್ವರನಲ್ಲಿ ಅಂಥ ನಿರ್ವೇದನೆಯನ್ನು ಮಾಡಿದರೆ ತಾನೆ ಕೃತ್ಯಕೃತ್ಯತೆ, ಭಕ್ತನಾದವನಿಗೆ ಇದಲ್ಲದೆ ಬೇರೆ ಗತಿಯಿಲ್ಲ ಮಮತೆಯ ಮಾಯೆ ಮುಸಿಕಿರುವ ವರೆಗೆ ಅವನಿಗೆ ಕೊನೆಯಿಲ್ಲ, ದಿಕ್ಕಿಲ್ಲ. ' ನಾನು ' ಎನ್ನುವುದು ಭಕ್ತನಲ್ಲಿ ಸ್ವಲ್ಪವೂ ಇರಕೂಡದು. ಎಲ್ಲವೂ ಪರಮಾತ್ಮನ ಅಧೀನ. ಅವನು ಸಕಲದರಲ್ಲಿಯೂ ಅಂತರ್ಯಾಮಿಯಾಗಿ ನಿಂತು ಅಸಾಧಾರಣ ಕಾರ್ಯಗಳನ್ನು ಮಾಡಿ, ನಮ್ಮಿಂದ ಮಾಡಿಸಿ ನಮ್ಮ ಕರ್ಮಾನುಸಾರವಾಗಿ ಫಲವನ್ನು ಕೊಟ್ಟು, ತಾನು ಮಾತ್ರ ಯಾವುದಕ್ಕೂ ಸಿಲುಕದೆ ನಿರ್ಲಿಪ್ತನಾಗಿ ಜ್ಯೋತಿರ್ಮಯನಾಗಿ ಇರುತ್ತಾನೆ. ಭಗವಂತನು ಭಕ್ತನನ್ನು ತನ್ನೆಡೆಗೆ ಕರೆದುಕೊಳ್ಳುವುದಕ್ಕೆ ಭಕ್ತನ ಯೋಗ್ಯತೆ ಎಂಥದಾಗಿರಬೇಕು ! ಎಂಥ ಪರೀಕ್ಷೆಗಳಲ್ಲಿ ಅವನು ಉತ್ತೀರ್ಣನಾಗಿರಬೇಕು! ಮಕ್ಕಳು ತಂದೆ ತಾಯಿಯರಲ್ಲಿ ಕಷ್ಟಸುಖಗಳನ್ನು ಹೇಳಿಕೊಳ್ಳುವಂತೆ, ಭಕ್ತರು ಪರಮಾತ್ಮನಿಗೆ ಸರ್ವವನ್ನೂ ನಿವೇದಿಸಬೇಕು. ನಿರ್ಮಲ ನಿರ್ವ್ಯಾಜ ಭಕ್ತಿಯೇ— ಫಲಾಪೇಕ್ಷೆ ಇಲ್ಲದ ಭಕ್ತಿಯೇ— ಮುಕ್ತಿಗೆ ಕಾರಣ. ಶುದ್ಧ ಹೃದಯವೇ ಭಕ್ತ್ಯುದ್ರೇಕಕ್ಕೆ ಉಚಿತವಾದ ಸ್ಥಲ.

ಹರಿಹರನ ಭಕ್ತಿಯಲ್ಲಿ ಒಂದು ವೈಲಕ್ಷಣ್ಯವಿದೆ; ಔನ್ನತ್ಯವಿದೆ. ವಿರೂಪಾಕ್ಷನ ವಿಷಯದಲ್ಲಿ ಅವನ ಅಂತಃಕರಣ ಎಷ್ಟು ಮೃದುವೋ ಇತರರ ವಿಷಯದಲ್ಲಿ ಅಷ್ಟು ಕಠಿಣ. ಈ ಕಾಠಿಣ್ಯ ದ್ವೇಷವೆನ್ನಿಸುವುದಿಲ್ಲ; ನಿರ್ಲಕ್ಷ್ಯವೆನ್ನಿಸುತ್ತದೆ. ವಿರೂಪಾಕ್ಷನ ಭಕ್ತನಾದ ಮೇಲೆ, ಅಂಥ ದೇವನ ಆಳಾದ ಮೇಲೆ ಇತರರಿಗೆ ತಗ್ಗಿ ನಡೆಯುವುದೆ? ವಿರೂಪಾಕ್ಷಸ್ವಾಮಿ ಎಂಥ ಹೆಚ್ಚಳದ ಅರಸನೋ ತಾನೂ ಅಷ್ಟು ಹೆಮ್ಮೆಯ ದಾಸ. ತನ್ನ ಭಕ್ತಿ ಸಾಮಾನ್ಯವಾದದ್ದಲ್ಲ; ಅದರ ಯೋಗ್ಯತೆ ಕಿರಿದಲ್ಲ. "ಉರಿ ನಡೆವಂತೆ, ಭಾನು ನಡೆವಂತೆ, ಸಿಡಿಲ್ ನಡೆವಂತೆ ನಿನ್ನ ಭಕ್ತರ ನಡೆ!" ಎಂದು ಕೆಚ್ಚೆದೆಯ ಮಾತುಗಳನ್ನಾಡುತ್ತಾನೆ. ಅವನಿಗೆ ವಿರೂಪಾಕ್ಷನೊಬ್ಬನೇ ರಕ್ಷಕ; ಗಂಡನು. ಉಳಿದವರೆ

ಲ್ಲರೂ ತೃಣಸಮಾನ. ಮಾನವನನ್ನು ಹೊಗಳುವುದೆಂದರೆ ಕವಿಯ ಮೈ ಬೆಂಕಿಯಾದೀತು !-''ಘಡ ! ಮಾನವರ್ ಕುಡುವರ್ ಎಂಬುದನಾಡದಿರ್ ಎನ್ನ ಮುಂದೆ !" ಎನ್ನುತ್ತಾನೆ. ಈ ಮನುಷ್ಯರೆಲ್ಲರೂ- ''ಕಪ್ಪಡದ ಶರೀರಿಗಳ್; ತೃಣದ ಹಾಹೆಗಳ್; ಮಣ್ಣ ಬೊಂಬೆಗಳ್ !" ಇಂಥವು 'ಕುಡುವುವೆ?' ಇಂಥವರನ್ನು ಪ್ರಾರ್ಥಿಸುವುದೆ? ಬೇಡಬೇಕಾದರೆ-''ಬೇಡು, ಬೇಡಿದುದನೀವ ಮಹಾನಿಧಿಯನ್ ಮಹೇಶನನ್ !" ಮನುಷ್ಯ ಮಾತ್ರನಲ್ಲಿ ಏನುಂಟು; ದಾಸ್ಯವುಂಟು, ಕುಬುದ್ಧಿಯುಂಟು.–''ದೇವ, ನಿಮ್ಮ ದಯೆಯಿಂ ಪೋಗೆನೆ ಪೋಪ, ಬಾರೆಲವೊ ಬಾರೆನೆ, ಜೀಯ ಹಸಾದಮ್, ಎಂದು ಬೆಳ್ಳಾಗುತೆ ಬರ್ಪ; ಮಾಣ್ ಎಲವೊ ಸುಮ್ಮನಿರ್ ಎಂದೊಡೆ ಸುಮ್ಮನಿರ್ಪ; ಮತ್ತಾಗಳೆ ಬಗ್ಗಿಸಲ್ ಸಡುಗಿ ಬೀಳುವ, ಸೇವಿಪ ಕಷ್ಟವೃತ್ತಿ ನೀಗಿದೆನ್ !" ಎಂದು ನುಡಿದಿದ್ದಾನೆ. ಇಂಥ ದೇವನನ್ನು ಹೊಗಳಿದರೆ ಸಾರ್ಥಕ, ಗತಿ. ಆದ್ದರಿಂದಲೇ–''ಶಶಿಭೂಷಂಗೆ ಈಶ್ವರಂಗೆ ಐದೆ ನಾಲಗೆಯನ್ ಮಾರಿದೆನ್!" ಎಂದು ಹೇಳಿ ಕೇವಲ ಸ್ನೇಹದಿಂದ, ಆತ್ಮೀಯತೆಯಿಂದ, ಶ್ರದ್ಧೆಯಿಂದ –

ಎರಗುವೆನೆನ್ನ ಹಂಪೆಯರಸಂಗೆ ಹರಂಗೆ ಶಿವಂಗೆ ಮಿಕ್ಕಿನ ।
ರ್ಗೆರಗುವಡುಂಟೆ ಪಂಚಮುಖಮುಂಟೆ ಗಜಾಜಿನಮುಂಟೆ ಪತ್ತು
ತೋಳ್ ॥
ಕರಿಗೊರಲುಂಟೆ ಕೆಂಜೆಡೆಗಳುಂಟೆ ಮರುನ್ನದಿಯುಂಟೆ ಭಾಳದೊಳ್
ಮಿರಗುವ ನೇತ್ರಮುಂಟೆ ಶಶಿಯುಂಟೆ ವೃಷಧ್ವಜಮುಂಟೆ ದೇವರೊಳ್॥

ಎಂದು ಕೋರಿ ಹಾಕಿ ಹಂಪೆಯ ವಿರೂಪಾಕ್ಷನ ಆಧಿಕ್ಯವನ್ನೂ ವೈಲಕ್ಷಣ್ಯವನ್ನೂ ತನ್ನ ಆನಂದವನ್ನೂ ಬಹು ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಉತ್ತಮಕಾವ್ಯಗಳಲ್ಲಿ 'ಪಂಪಾಶತಕ'ದಂಥ ಭಕ್ತಿಭಾವೋತ್ಪಾದಕ ಕಾವ್ಯ ಸಿಕ್ಕಲಾರದು. ಕಾವ್ಯಗುಣದಲ್ಲಾಗಲೀ ಪೋಷಣೆಕ್ರಿಯೆಗಳಲ್ಲಾಗಲೀ ನ್ಯೂನತೆ ಎಲ್ಲೂ ಕಾಣುವುದಿಲ್ಲ. ಭಕ್ತಿಯನ್ನು ಎಂಥ ಉಜ್ವಲವರ್ಣಗಳಿಂದ ಹೇಗೆ ಭಾವವತ್ತಾಗಿ ಚಿತ್ರಿಸಿದ್ದಾನೋ ಕಾವ್ಯಾಂಗಗಳನ್ನೂ ಅಷ್ಟೇ ಶ್ರದ್ಧೆಯಿಂದ ಜಾಗರೂಕತೆಯಿಂದ ಚಿತ್ರಿಸಿದ್ದಾನೆ. ಹರಿಹರನ ಆತ್ಮದಲ್ಲಿ ಭಕ್ತಿ ದೊಡ್ಡ ರಥ; ಕಾವ್ಯಗುಣ ಆ ರಥವನ್ನು ನಡೆಯಿಸುವ ಸಾರಥಿ, ಅವನ ಹೃದ

ಯದಿಂದ ಉಕ್ಕಿ ಬರುವ ಆವೇಶಕ್ಕೆ, ಭಕ್ತಿಗೆ ಸಹಾಯಕ ಅವನ ಸಂಸ್ಕಾರ ಫಲ. ಒಂದೊಂದು ವೇಳೆ ಆ ಆ ವೇಶಕ್ಕೆ— ಭಾವಪ್ರವಾಹಕ್ಕೆ— ಜೀವ ವೆರೆಯುವ ಮೇಧಾಶಕ್ತಿಪಟುತ್ತ್ವಗಳೂ ವ್ಯಾಪ್ತಿವೈವಿಧ್ಯಗಳೂ ಅವನಲ್ಲಿ ಕಾಣ ದಿರಬಹುದು. ಹೃದಯದ ಒಂದು ಅವಸ್ಥೆಯನ್ನು ಅಭಿವ್ಯಕ್ತಿಸುವುದಕ್ಕೆ ಪ್ರಯತ್ನಿಸಿ ಸೋಷಣೆಯಲ್ಲಿ ಕಳೆಗುಂದಿ, ಶಕ್ತಿಸಾಲದೆ ಬಹು ಸಂದರ್ಭಗಳಲ್ಲ ಶುಷ್ಕವಾಕ್ಕುಗಳನ್ನೂ ಬರೆದಿರಬಹುದು. ಒಟ್ಟಿನಲ್ಲಿ ಭಕ್ತಿಭಾವವನ್ನೂ ಕಾವ್ಯ ಭಾಗವನ್ನೂ ತನ್ನದೇ ಒಂದು ವೈಶಿಷ್ಟ್ಯದಿಂದ ಮಾತಿನಲ್ಲ ರೂಪುಗೊಟ್ಟು ಪಾಠಕನ ಹೃದಯುವನ್ನೂ ಸೆರೆಹಿಡಿಯುವ ಶಕ್ತಿ ಹರಿಹರನಿಗೇ ಲಭ್ಯ ವಾದುಪು. ಒಂದೊಂದು ವೇಳೆ ಅವನ ತತ್ತ್ವನಿರೂಪಣೆ, ಪರಧರ್ಮಭ ರ್ತ್ಸನೆ, ಕಟುವಾಕ್ಕುಗಳು ಅಸಹ್ಯವಾಗುತ್ತವೆ, ಎಲ್ಲೆ ಮೀರುತ್ತವೆ. ಆದರೆ ಮನುಷ್ಯ ಮಾತ್ರನಾದವನು, ಮೈಮರೆಯಿಸುವ ಆ ಭಕ್ತಿಯಲ್ಲಿ, ಆ ಪ್ರವಾ ಹದಲ್ಲಿ ಮುಳುಗಿ ತೇಲಿ ಹರಿಹರನಲ್ಲಿ ಹೃದಯತಃ ಕೊಂಡಾಡದಿರಲಾಗುವು ದಿಲ್ಲ; ಅವನ ವಿಷಯದಲ್ಲಿ ಹೆಮ್ಮೆ ಪಡದಿರಲಾಗುವುದಿಲ್ಲ; ಆ ಅನುಪಮವಾದ ಆತ್ಮನಿವೇದನೆಯು, ಪ್ರಣಯಪೂಜೆಯ ಚಿತ್ರಗಳನ್ನು ನೋಡಿ ಕಂಬನಿದುಂಬ ದಿರಲಾಗುವುದಿಲ್ಲ.

ಭಾರತೀಪ್ರಿಯ.

---

# ಹರಿಹರನ ಸ್ಥಾನ.

ಕರ್ಣಾಟಕ ಸಾಹಿತ್ಯದಲ್ಲಿ ಹರಿಹರನು ಅಪೂರ್ವಮೂರ್ತಿಸ್ವರೂಪದ ಅದ್ಭುತಶಕ್ತಿಯ ಮಹಾಕವಿಯಾಗಿದ್ದಾನೆ. ಆತನು ಮಹಾಕವಿಯೂ ಅಹುದು, ಮಹಾಕ್ರಾಂತಿಪುರುಷನೂ ಅಹುದು. ಆತನು ಸಾಹಿತ್ಯಕ್ಷೇತ್ರದಲ್ಲಿ ಕೆಲಸ ಮಾಡಿದ್ದರೂ ಮತೋದ್ಧಾರಕನಾಗಿದ್ದಾನೆ, ಮತಪ್ರಚಾರ ಕಾರ್ಯವನ್ನು ಸಾಹಿತ್ಯಮಾರ್ಗದಲ್ಲಿ—ಕಾವ್ಯಮಾರ್ಗದಲ್ಲಿ ಮಾಡಿದ ಮಹಾಕವಿಯಾಗಿದ್ದಾನೆ. ದುರ್ದಮನೀಯುವಾದ ಅಂತರಾವೇಶದ ಬಲುಮೆಯಿಂದ, ಗಂಭೀರವಾದ ಆತ್ಮವಿಶ್ವಾಸದ ಶಕ್ತಿಯಿಂದ ಆತನು ಹೊಸದಾರಿಯನ್ನು ಮಾಡಿಕೊಂಡು ನಡೆದನು. ''ಅಘಟಿತ ಘಟನಾ ನೂತನ ಬ್ರಹ್ಮ''ರಲ್ಲಿ ಹರಿಹರನು ಒಬ್ಬನು.

ಬಸವಣ್ಣಾದಿ ಪ್ರಮಥರು ಮತಾಚಾರ್ಯರಾಗಿ ಬೋಧನೆಯ ಮಹತ್ವದಿಂದ ಎಷ್ಟೊಂದು ಮಹತ್ವದ ಪ್ರತಿಷ್ಠೆಯನ್ನು ಪಡೆದಿರುವರೋ ಅಷ್ಟೇ ಮಹತ್ವದ ಪ್ರತಿಷ್ಠೆಯನ್ನು ಹರಿಹರನು ''ಶರಣ ರಗಳೆ''ಯ* ರಚನೆಯಿಂದ ಪಡೆದಿದ್ದಾನೆ. ಶೂನ್ಯಸಿಂಹಾಸನ-ಸ್ಥಾಪನೆ, ಪಂಚಪೀಠಗಳ ಸ್ಥಾಪನೆ, ಇವುಗಳಿಂದ ಯಾವ ವಿಶೇಷವಾದ ಪ್ರಭಾವವನ್ನು ಜನಗಳ ಮೇಲೆ ಬೀರಿರಬಹುದೋ ಅಷ್ಟೇ ವಿಶೇಷವಾದ ಪ್ರಭಾವವನ್ನು—ಬೇಕಾದರೆ ಇನ್ನೂ ಹೆಚ್ಚಿನ ಪ್ರಭಾವವನ್ನು — ಶರಣ ರಗಳೆಯಿಂದ ಹರಿಹರನು ಬೀರಿದ್ದಾನೆ. ನಮ್ಮ ಕನ್ನಡ ಸಾಹಿತ್ಯದಲ್ಲಿ ಮುಕ್ಕಾಲುಪಾಲೆಲ್ಲ ಮತಗ್ರಂಥಗಳೇ ಇರುವುದರಿಂದ ನಮ್ಮ ಕವಿಗಳಲ್ಲಿ ಮುಕ್ಕಾಲುಪಾಲೆಲ್ಲ ವೈಕುಂಠದಲ್ಲಿಯೋ ಕೈಲಾಸದಲ್ಲಿಯೋ ಸೇರಿಕೊಂಡಿರಬೇಕೆಂದು ತೋರುತ್ತದಷ್ಟೆ. ಆ ಎಲ್ಲ ಕವಿಗಳೂ ನಿಜವಾಗಿ ಹಾಗೆ ಮುಕ್ತಿಯನ್ನು ಪಡೆದಿರುವರೋ ಇಲ್ಲವೋ ನಾವು ಹೇಳಲಾರೆವು. ಆದರೆ ಹರಿಹರನ ವಿಚಾರದಲ್ಲಿ ಮಾತ್ರ ನಾವು ಖಂಡಿತವಾಗಿಯೂ ಹೇಳು

* ಈ ಗ್ರಂಥಕ್ಕೆ ಹರಿಹರನ ರಗಳೆ ಎಂದೂ, ಶಿವಗಣಚಾರಿತ್ರವೆಂದೂ ನಾಮಾಂತರಗಳುಂಟು. ಶಾಂತವೀರೇಶ್ವರನು "ಶಿವಗಣ ಚಾರಿತ್ರ" ವೆಂದು ಒಂದು ಗ್ರಂಥವನ್ನು ಬರೆದಿದ್ದಾನೆ. ಅದಕ್ಕೆ ಹರಿಹರನ ಗ್ರಂಥವು ಭಿನ್ನವಾಗಿದೆ.

ತ್ತೇವೆ. ಶರಣರಗಳೆಯನ್ನು ಮುಗಿಸುವ ಕಾಲಕ್ಕೆ ಪಂಪಾವಿರೂಪಾಕ್ಷನು ಈ ಮಹಾಕವಿಯನ್ನು ಆಲಿಂಗಿಸಿ ತನ್ನಲ್ಲಿ ಐಕ್ಯಮಾಡಿಕೊಂಡೇ ಇದ್ದಾನೆ. ಹಲವು ಶತಮಾನಗಳ ತರುವಾಯ ಬಂದ ಷಡಕ್ಷರಿ

ಕಂ॥ ಮೃದುಮಧುರ ಪದವಿಲಾಸಾ- ।
ಸ್ಪದರಸವಿಸರಪ್ರಕಾಶ-ಕರ್ಣಾಟಕವಿ- ॥
ತ್ವದೊಳೊರ್ವನೆ ಪೆಸರ್ವಡೆದ- ।
ಗ್ಗದ ಹರಿಹರನುದಿತ ಮಾರ್ಗದಿಂದಿದನೊರೆವೆಂ ॥

ಎಂದೂ ''ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್'' ಎಂದೂ ಪ್ರಶಸ್ತಿಪತ್ರಿಕೆಯನ್ನು ಕೊಟ್ಟಿರುವುದು ಕೇವಲ ಔಪಚಾರಿಕವೆಂದು ನಾವು ಭಾವಿಸುವುದಿಲ್ಲ. ಏಕೆಂದರೆ ಎಲ್ಲ ವೀರಶೈವರ ಮೇಲೂ ಹರಿಹರನು ತನ್ನ ಪ್ರಭಾವಮುದ್ರೆಯನ್ನು ಆರೀತಿ ಒತ್ತಿದ್ದಾನೆ.

ಹರಿಹರನು ಮುಡಿಗೆಯ ಅಷ್ಟಕವನ್ನು ರಚಿಸಿದ ವಿಚಾರದಲ್ಲಿಯೂ ರಾಘವಾಂಕನ ಹಲ್ಲುಗಳನ್ನು ಉದುರಿಸಿದ ವಿಚಾರದಲ್ಲಿಯೂ ದಂತಕಥೆಗಳು ಇರುವುವಷ್ಟೆ. ಇವುಗಳನ್ನು ಬೇಕಾದರೆ ನಂಬಬಹುದು, ಬೇಡವಾದರೆ ಬಿಡಬಹುದು. ಹರಿಹರನ ಹಠಸ್ವಭಾವವನ್ನೂ ಉಜ್ವಲ ಭಕ್ತಿಯನ್ನೂ ಕಂಡುಕೊಂಡಿದ್ದ ಮಹನೀಯರು ಯಾರೋ ಈ ಕಥೆಗಳನ್ನು ಕಲ್ಪಿಸಿರಬಹುದು. ಕಥೆಗಳಿಗೆ ಕಾಲಿಲ್ಲದಿರಬಹುದು. ಆದರೆ ಆ ಕಥೆಗಳು ನಿರೂಪಿಸುವ ಹರಿಹರನ ಗುಣಾತಿಶಯಗಳಿಗೆ ಮಾತ್ರ ಕಾಲುಂಟು, ಕೈಯುಂಟು, ಪ್ರಾಣವೂ ಉಂಟು.

ವೀರಶೈವಸಾಹಿತ್ಯದಲ್ಲಿ ವಚನಗಳು ಮತ್ತು ಪುರಾಣಗಳು ಎಂಬ ಎರಡು ಮುಖ್ಯಭಾಗಗಳಿವೆಯಷ್ಟೆ. ಒಂದು ಭಾಗವಾದ ಪುರಾಣಗಳಿಗೆ ಹರಿಹರನು ಆದಿಕವಿ,-ಆಚಾರ್ಯಪುರುಷ. ಶರಣರಗಳೆಯಲ್ಲಿ ಚೋಳದೇಶದ ಅರುವತ್ತು ಮೂರು ಪುರಾತನ ಚರಿತೆಗಳೂ, ನೂತನ ಪುರಾತನರಾದ ಬಸವಣ್ಣಾದಿ ಪ್ರಮಥರ ಚರಿತ್ರೆಗಳೂ ಇವೆ. ಶಿವಗಣ ಚಾರಿತ್ರದ ಪೀಠಿಕಾಪ್ರಕರಣದಲ್ಲಿ ''ಅರುವತ್ತುಮೂವರ ಕಥಾಗರ್ಭ'' ಎಂದು ಹೇಳಿ ''ಪುರಾಣವಂ ರಚಿಸುವೆಂ'' ಎಂದೂ, ಮಹಾದೇವಿಯಕ್ಕನ ರಗಳೆಯ ಕಥಾಗರ್ಭದಲ್ಲಿ ''ಬಿನ್ನ

ಪಂಗೆಯ್ದ ನೀಪುರಾಣಮುಂ" ಎಂದೂ ಕವಿ ಬರೆದಿರುವುದರಿಂದ ಶರಣರಗಳೆಯನ್ನು ವೀರಶೈವಪುರಾಣವೆಂದೇ ಕವಿ ಭಾವಿಸಿದ್ದಾನೆಂದೂ ಹಾಗೆಯೇ ನಾವೂ ಭಾವಿಸಬೇಕೆಂದೂ ಹೇಳುತ್ತೇವೆ. ಹರಿಹರನ ತರುವಾಯ ಬರುವ ಯಾವ ವೀರಶೈವಪುರಾಣ ಕರ್ತೃವಾಗಲಿ ಬಹುಶಃ ಹರಿಹರನ ಕಥಾನಾಯಕರಲ್ಲಿ ಒಬ್ಬರನ್ನು ತೆಗೆದುಕೊಂಡು ಪುರಾಣವನ್ನು ಬರೆಯಬೇಕಾಗಿದೆ. ಕೆಲವರು ಕಥೆಗಳನ್ನು ಮಾರ್ಪಡಿಸಿಕೊಂಡಿರಬಹುದು; ಕೆಲವರು ಹರಹರನಿಗೆ ಕೃತಜ್ಞತೆಯನ್ನು ತಿಳಸದೆ ಹೋಗಿರಬಹುದು. ಅದರೇನು? ವೀರಶೈವ ಕವಿಗಳು ಬೇರೆಬೇರೆಯಾಗಿ ಬರೆದ ಪುರಾಣಗಳನ್ನೆಲ್ಲ ಸಮಷ್ಟಿರೂಪದಲ್ಲಿ ಹರಿಹರನೊಬ್ಬನೇ ಬರೆದಿರುವನೆಂದೂ, ವೀರಶೈವಸಾಹಿತ್ಯೋದ್ಯಾನದಲ್ಲಿ ಅಲ್ಲಲ್ಲಿ ಎದ್ದು ಚಿಮ್ಮುತ್ತಿರುವ ಬುಗ್ಗೆಗಳಿಗೆಲ್ಲ "ಪಂಪಾವಿರೂಪಾಕ್ಷಸಾಕ್ಷಾತ್ಸುಪುತ್ರ"ನ ಕಾವ್ಯಸರಸ್ಸಿನಿಂದ ಜೀವನ ಒದಗಿ ಬಂದಿದೆಯೆಂದೂ ಹೇಳಿದರೆ ಹರಿಹರನ ಗ್ರಂಥರಾಶಿ ಎಷ್ಟಾಗಬಹುದು? ಆತನ ಪ್ರಭಾವ ಎಷ್ಟಾಗಬಹುದು? ಎನ್ನುವುದನ್ನು ತಿಳಿಯಬಹುದಾಗಿದೆ.

ಹರಿಹರನ ಸ್ಥಾನವನ್ನು ಗೊತ್ತುಮಾಡುವುದಕ್ಕೆ ಮೇಲೆ ಹೇಳಿದ ಮುಖ್ಯ ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಎರಡನೆಯದಾಗಿ ಉತ್ತಮ ಸಾಹಿತ್ಯದ ರಸಾನುಭಾವವು ಕೇವಲ ಪಂಡಿತರಿಗೆ ಮಾತ್ರವಲ್ಲದೆ ಸಾಮಾನ್ಯ ಜನರಿಗೂ ದೊರೆಯಬೇಕೆಂದು ಅಭಿಪ್ರಾಯಪಟ್ಟು ಆರೀತಿ ದೊರಕಿಸಿದ ಕ್ರಾಂತಿಪುರುಷನು ಹರಿಹರ. ಪಂಡಿತರ ಮೆಚ್ಚಿಗಾಗಿ ತಾನು ಹಿಂದೆ "*ಗಿರಿಜಾಕಲ್ಯಾಣ"ವನ್ನು ಬರೆದುದಾಯಿತು. ಆ ಚಂಪೂಶೈಲಿಯಲ್ಲಿ ಕಾವ್ಯವನ್ನು ಬರೆಯುತ್ತಿದ್ದಾಗ "ನೀರಸರರಿವಂತೇನಿದು ತಾರೆಲೆಯೇ ಬೀದಿವಾಡೆ ನೆರವಿಯ ತುಮುಕೇ" ಎಂದು ಅಟ್ಟಹಾಸದಿಂದ ಕವಿ ಉದ್ಘೋಷಿಸಿದನು. ಆದರೆ ಈ ಕಾವ್ಯದಿಂದ ಜನರ ಮೇಲೆ ಹೆಚ್ಚು ಪರಿಣಾಮವುಂಟಾಗಲಿಲ್ಲವೆಂದು ಆತನು ತಿಳಿದುಕೊಂಡಿರಬೇಕು. ಆದುದರಿಂದ ಸಾಮಾನ್ಯಜನರಿಗೆ ತಿಳಿಯುವಂತೆ, ಅವರು ಮೆಚ್ಚುವಂತೆ 'ಅವರ ಮೇಲೆ ಸತ್ಪರಿಣಾಮವಾಗಿ ಭಕ್ತಿ ಹೆಚ್ಚುವಂತೆ," ಶರಣರಗಳೆಯನ್ನು ಹಾಡಿನ ಶೈಲಿಯಲ್ಲಿ ಕವಿ ಬರೆಯತೊಡ

* ಮೊದಲು ಗಿರಿಜಾಕಲ್ಯಾಣವನ್ನು ಬರೆದು ಆ ಮೇಲೆ ರಗಳೆಗಳನ್ನು ಬರೆದನೆಂದು ನಮ್ಮ ಅಭಿಪ್ರಾಯ.

ಗಿದನು. ಕಥಾವಿವರಣಕ್ಕೆ, ಕಥಾಪ್ರವಾಹದ ತೀವ್ರಗಮನಕ್ಕೆ ಹೊಸದೊಂದು ಛಂದಸ್ಸನ್ನು ಸೃಷ್ಟಿಮಾಡಿಕೊಳ್ಳಬೇಕೆಂದು ಆತನು ಸಂಕಲ್ಪಿಸಿದನು. ಕನ್ನಡದ ಛಂದಸ್ಸಿನಲ್ಲಿ ಲಲಿತರಗಳೆ, ಉತ್ಸಾಹರಗಳೆ ಮತ್ತು ಮಂದಾನಿಲರಗಳೆಗಳನ್ನು ಪಳಗಿಸಿ- ಕೊಂಡು ನೂತನಶೈಲಿಯ ಆಚಾರ್ಯಪುರುಷನಾದನು. ( ಈ ನೂತನಶೈಲಿಯಲ್ಲಿ ಪ್ರಾಸಗಳನ್ನು ತೆಗೆದು ಬಿಟ್ಟರೆ ಆಧುನಿಕ ಪದ್ಯಶೈಲಿಯ ಸರಳರಗಳೆಯಾಗುತ್ತದೆ. ) ಹೀಗೆ ಈ ನಿರಂಕುಶ ಸಾಹಿತ್ಯಚಕ್ರವರ್ತಿ ಪ್ರಜಾಪಕ್ಷವಾದಿಯಾಗಿ ಕನ್ನಡಸಾಹಿತ್ಯವನ್ನು ಪ್ರಜಾಸಮುದಾಯಕ್ಕೆ ಒದಗಿಸಿ ಕೊಟ್ಟಿದ್ದಾನೆ.

ಆಗಿನ ಕಾಲದಲ್ಲಿ ಹೀಗೆ ಮಾಡುವುದಕ್ಕೆ ಬಹಳ ಎದೆಗಾರತನ ಬೇಕಾಗಿತ್ತೆಂದು ಹೇಳಬಹುದು. ಈಗಿನ ಕಾಲದಲ್ಲಿಯೇ ಆಧುನಿಕ ಪದ್ಯಸಾಹಿತ್ಯವನ್ನು ಪಂಡಿತರು ಅಸಂತುಷ್ಟಿಯ ದೃಷ್ಟಿಯಿಂದ ನೋಡುತ್ತಿದಾರೆ. ಹಿಂದೆ ಚಂಪೂಶೈಲಿಯೇ ಕಾವ್ಯಶೈಲಿಯೆಂದೂ, ಚಂಪೂಕಾವ್ಯಗಳೇ ಕಾವ್ಯಗಳೆಂದೂ ಪುರಸ್ಕಾರವಿದ್ದು ಷಟ್ಪದಿಗಳು ಹಾಡುಗಳಲ್ಲಿ ಪರಿಗಣಿತವಾಗಿದ್ದಾಗ, ಷಟ್ಪದೀ ಕಾವ್ಯಗಳನ್ನು* ಲಕ್ಷಣರಹಿತವಾದ ಹಾಡುಗಬ್ಬಗಳೆಂದು ತಿರಸ್ಕರಿಸುತ್ತಿದ್ದಾಗ ಹರಿಹರನು ಈ ಮಾರ್ಪಾಟನ್ನು ತಂದನೆಂದರೆ ಆತನು ಎಷ್ಟು ಧೈರ್ಯಶಾಲಿಯೆನ್ನುವುದೂ ಎಷ್ಟು ಆತ್ಮವಿಶ್ವಾಸವುಳ್ಳವನೆನ್ನುವುದೂ ತಿಳಿಯುವುದಷ್ಟೆ. ಸತ್ವಶಾಲಿಯಾದ ಈ ಮಹಾಕವಿ

ಕಂ|| ನೋಡುವೊಡೊಂದಕ್ಕರಮದು |
ಮಾಡುವೊಡುಚ್ಚರಣೆಗರಿದು ಮೂರುಂ ತೆರನಂ ||
ಕೂಡೆ ಕವಿತತಿ ವಿಚಾರಿಸ |
ಬೇಡದರಿಂ ರಳಕುಳಕ್ಷಳಂಗಳನಿದರೊಳ್ ||

ಎಂದು ಹೇಳಿ ಕೇವಲ ಗ್ರಂಥಸ್ಥವಾಗಿದ್ದು ವ್ಯವಹಾರದಲ್ಲಿಲ್ಲದ ವ್ಯತ್ಯಾಸವನ್ನು

---

* 'ವರ್ಣಕಕ್ಕಿಲ್ಲ ಲಕ್ಷಣಂ' ಎನ್ನುವುದು ಈ ಷಟ್ಪದೀ ಕಾವ್ಯಗಳನ್ನು ಕುರಿತೇ ಬಂದ ಅಭಿಪ್ರಾಯವಾಗಿರಬಹುದೆಂದು ಊಹಿಸಬಹುದಾಗಿದೆ. ಈ ಷಟ್ಪದಿಗಳಲ್ಲಿ ಬರೆಯ ತೊಡಗಿದ ಪದ್ಮಣಾಂಕ, ಭೀಮಕವಿ ಮುಂತಾದವರೆಲ್ಲ ಒಂದೊಂದು ಬಗೆಯ ಸಮಾಧಾನವನ್ನು ಹೇಳಿ ತಮ್ಮ ಕಾವ್ಯಗಳನ್ನು ಬರೆದಿದ್ದಾರೆ.

ಕಡೆಗೆ ಕಿತ್ತೊಗೆದನು. ಕವಿಗಳು ಹಿಂದೆ ಪ್ರೌಢವಾದ ಚಂಪೂಗಳನ್ನು ಬರೆಯುವಾಗಲೂ ತಿಳಿದೋ ತಿಳಿಯದೆಯೋ ಪ್ರಾಸಸ್ಥಾನಗಳಲ್ಲಿ ಈ ವ್ಯತ್ಯಾಸಗಳನ್ನು ಸಡಲಿಸುತ್ತ ಬಂದಿದ್ದರು. ಆದರೆ ಬಾಯಿಬಿಟ್ಟು ಹೇಳುವ ಧೈರ್ಯವನ್ನು ಪಡೆದಿರಲಿಲ್ಲ. ತಮ್ಮ ಮನಸಿಗೊಪ್ಪದ ಕೆಲವು ಮತಚಾರಗಳನ್ನು ಗುಪ್ತವಾಗಿ ತಾವುಗಳೇ ಉಲ್ಲಂಘಿಸಿದರೂ ಬಹಿರಂಗವಾಗಿ ನಿಂತು ಆ ಮತಾಚಾರಗಳಿಂದ ಈಗೇನೂ ಪ್ರಯೋಜನವಿಲ್ಲವೆಂದು ಹೇಳಲಾರದವರು ಈಗಲೂ ಇದ್ದಾರಷ್ಟೆ. ಹರಿಹರನು ಈ ಗೋಷ್ಠಿಗೆ ಸೇರಿದವನಲ್ಲ. ಆತ ಬಹಳ ಖಂಡಿತವಾದಿ ಮತ್ತು ನಿಷ್ಕಪಟಿ. ಆದುದರಿಂದ ಆತನು ಬಾಯಲ್ಲಿಯೂ ಹೇಳಿ ಕಾವ್ಯದಲ್ಲಿಯೂ ಸಂಪ್ರದಾಯವನ್ನು ಮುರಿದನು. ಅಲ್ಲಿಂದ ಮುಂದೆ ಬರೆಯುವ ಕವಿಗಳಿಗೆ ಮಾರ್ಗವು ಸುಗಮವಾಯಿತು. ಹರಿಹರನ ಸ್ಥಾನವನ್ನು ಗೊತ್ತುಮಾಡುವುದಕ್ಕೆ ಈ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

ಇನ್ನು ಮುಂದೆ ಹರಿಹರನ ಗುಣಾವಗುಣಗಳನ್ನು ಪರಿಶೀಲಿಸಿ ಅವುಗಳ ಪರಿಣಾಮವನ್ನು ವಿಮರ್ಶಿಸುತ್ತೇವೆ. ಈಮಹಾಕವಿ ಭಕ್ತಿಯ ಗಣಿ, ಪರಮವೀರಶೈವದ ಕಣಿ, ಇವುಗಳಿಂದ ಆತನ ಕವಿತೆಗೆ ಒಮ್ಮೆ ಕಳೆ ಏರಿದೆ. ಒಮ್ಮೆ ಕಳೆ ತಗ್ಗಿದೆ. ಕವಿ ಈಗ ಸಾಮಾನ್ಯ ಜನರ ಉದ್ಧಾರಕ್ಕಾಗಿ ಕಾವ್ಯವನ್ನು ಬರೆಯುತ್ತಿದ್ದಾನೆ. ಕಾವ್ಯರಸಾನುಭವದಿಂದ ಮತಾಭಿಮಾನ ವೃದ್ಧಿಹೊಂದಲೆಂದು ಬಯಸುತ್ತಿದ್ದಾನೆ. ಸ್ವಮತಾಭಿಮಾನವು ಪರಮತದೂಷಣೆಯಿಂದ ಬೆಳೆಯತಕ್ಕದ್ದು. ಈ ಆಜ್ಯವಿಲ್ಲದಿದ್ದರೆ ಆಜ್ವಾಲೆ ಏಳುವುದಿಲ್ಲ. ಭಕ್ತಿರಸಪ್ರಧಾನವಾದ ಪಂಪಾಶತಕದಲ್ಲಿ ಕವಿ ತನ್ನ ಇಷ್ಟ ದೇವತೆಯ ಮಹತ್ವವನ್ನು ತೊಂಬತ್ತೊಂಬತ್ತು ಪದ್ಯಗಳಲ್ಲಿ ವರ್ಣಿಸಿದ್ದರೂ

ವೃ || ಕೇಳಿಲೆ ವೈಷ್ಣವಾ ನೆಗಳ್ದ ನಿನ್ನ ನೃಸಿಂಹನನಂದು ಕಾಣುತುಂ|
ಕಾಳಿಗದಲ್ಲಿ ಯೆಮ್ಮ ಶರಭಂ ನುಡಿದೇನದನಕ್ಕಟಾ ! ನಿರೋ- ||
ಧಾಳಿಯನಿನ್ನುಮೊಂದನುರೆ ಪೇಳ್ವೆನು ದಕ್ಷನ ಯಾಗದಲ್ಲಿ ಚಿಃ |
ಪೇಳಲದೇಕೆ ದೇವನಣುಗಂ ನಿಮಗೊಡ್ಡಿದ ಭಂಗಮೆಲ್ಲಮಂ ||

ಎಂದು ಒಂದು ಪದ್ಯದಲ್ಲಿ ಜಯಘೋಷಮಾಡಿದ ಹೊರ್ತು ಆಮಹತ್ವದ

ಶಿಖರ ಮುಟ್ಟುವುದಿಲ್ಲವೆಂದು ಕವಿ ನಂಬಿದ್ದಾನೆ. ಈ ಉದ್ವಿಗ್ನಚಿತ್ತದ, ಅಧಿಕಶಕ್ತಿಯ ಮಹಾಕವಿ ಮತಪ್ರಚಾರದ ಮಹತ್ಕಾರ್ಯಕ್ಕೆ ಕೈಹಾಕಿ ಪಂಪಾವಿರೂಪಾಕ್ಷನ ಸಮ್ಮುಖದಲ್ಲಿ,—ಆದೇವಸ್ಥಾನದ ರಂಗಮಂಟಪದಲ್ಲಿ— ಭಸ್ಮರುದ್ರಾಕ್ಷ—ಮಾಲಾಲಂಕೃತನಾಗಿ ದ್ವಿತೀಯ ಶಂಭುವಿನಂತೆ ಕುಳಿತು ನೆರೆದ ಭಕ್ತವೃಂದಕ್ಕೆ ಶರಣರಗಳೆಯನ್ನು ಹಾಡುತ್ತಿದ್ದಾನೆ. ನಂದೀಶ್ವರಾವತಾರದ ಬಸವಣ್ಣನವರು ಷಟ್ಸ್ಥಲಸಾಧಕರಾಗಿ ಭಕ್ತಿಪ್ರದರ್ಶನದಿಂದಲೂ ಪವಾಡಗಳ ಮಹಿಮೆಯಿಂದಲೂ ಸಹಸ್ರಾರು ಜನರನ್ನು ಕಲ್ಯಾಣಪಟ್ಟಣಕ್ಕೆ ಆಕರ್ಷಿಸಿದ್ದಂತೆ ಗಣಹರುಷನವತಾರದ ಮಹಾಕವಿ ಹರಿಹರನು ಸಾಹಿತ್ಯಸಾಧಕನಾಗಿ ಭಕ್ತಿಪ್ರದರ್ಶನದಿಂದಲೂ ಕಾವ್ಯಾಮೃತದ ಮಹಿಮೆಯಿಂದಲೂ ಸಹಸ್ರಾರುಜನರನ್ನು ಪಂಪಾಕ್ಷೇತ್ರಕ್ಕೆ ಆಕರ್ಷಿಸಿದ್ದಾನೆ. ಅಲ್ಲಿ ಕ್ಷೇತ್ರಪತಿಗಳು ಇಬ್ಬರಾಗಿದ್ದಾರೆ;— ವಿರೂಪಾಕ್ಷ, "ವಿರೂಪಾಕ್ಷಸಾಕ್ಷಾತ್ಸುಪುತ್ರ". ಕವಿಯ ಅಮೃತವಾಣಿಯನ್ನು ಕೇಳುತ್ತಿದ್ದ, ಕವಿಯ ಉಜ್ವಲ ಭಕ್ತಿಮೂರ್ತಿಯನ್ನು ನೋಡುತ್ತಿದ್ದ, ಭಕ್ತಜನರಿಗೆ ಎತ್ತನೋಡಿದರೂ ಶಿವಾಧಿಕ್ಯ; ಎತ್ತನೋಡಿದರೂ ಶಿವಸಾಕ್ಷಾತ್ಕಾರ ಅನುಭವವಾಗುತ್ತಲಿವೆ. ಜನರ ಮೇಲೆ ಇಷ್ಟೊಂದು ಪರಿಣಾಮವುಂಟಾಗುವಂತೆ ಬರೆಯಬಲ್ಲ ಕವಿ ಕರ್ಣಾಟಕ-ಸಾಹಿತ್ಯದಲ್ಲಿ ಮತ್ತೊಬ್ಬನಿದ್ದಾನೆಯೆ ? ಎಂದು ಪ್ರಶ್ನೆಯನ್ನು ಕೇಳಬೇಕಾಗುತ್ತದೆ. ವೀರಶೈವಕವಿಗಳಲ್ಲಿ ಪ್ರಾಯಶಃ ಇಲ್ಲವೇ ಇಲ್ಲ ಎನ್ನಬಹುದು. ಬ್ರಾಹ್ಮಣಕವಿಗಳಲ್ಲಿ ಕುಮಾರವ್ಯಾಸನಿದ್ದಾನೆ ಎನ್ನಬಹುದು. ಕುಮಾರವ್ಯಾಸನಿಗೆ ಶ್ರೀಕೃಷ್ಣನಲ್ಲಿ ಭಕ್ತಿ, ಹರಿಹರನಿಗೆ ಈಶ್ವರನಲ್ಲಿ ಭಕ್ತಿ. ಶ್ರೀ ಕೃಷ್ಣನ ನೆನಪುಂಟಾದಾಗಲೆಲ್ಲ ಮತ್ತು ಶ್ರೀ ಕೃಷ್ಣನು ಕಥಾರಂಗಕ್ಕೆ ಬರುವಾಗಲೆಲ್ಲ ಕುಮಾರವ್ಯಾಸನು ಹೇಗೆ ಮೈಮರೆತು ನಮ್ಮನ್ನೂ ಮೈಮರೆಯಿಸಿ ಹಾಡುತ್ತಾನೋ ಹಾಗೆಯೇ ಹರಿಹರನು ಈಶ್ವರನ ನೆನಪಾದಾಗಲೆಲ್ಲ ಮತ್ತು ಈಶ್ವರನು ಬರುವಾಗಲೆಲ್ಲ ಹಾಡುತ್ತಾನೆ. ಆದರೆ ಕುಮಾರವ್ಯಾಸನಲ್ಲಿ ಪರಮತ ದೂಷಣೆಯಿಲ್ಲ, ಪರದೈವ ತಿರಸ್ಕಾರವಿಲ್ಲ. ನಮ್ಮ ಮಹಾಕವಿ ಹರಿಹರನಲ್ಲಿ ! ............ ಉತ್ತರ ಹೇಳಬೇಕಾದ್ದಿಲ್ಲ.

ಒಂದು ಕಡೆ ಭಕ್ತಿಯ ಆವೇಶ, ಇನ್ನೊಂದು ಕಡೆ ಸಾಮಾನ್ಯ ಜನರ ಮೇಲಿ ದೃಷ್ಟಿ,— ಇವು ಕೆಲವು ವೈಪರೀತ್ಯಗಳನ್ನು ಹರಿಹರನಲ್ಲಿ ಕಾಣಿಸಿವೆ.

“ ಇದು ಪುನರುಕ್ತಿದೋಷವಾಗುತ್ತದೆ, ಇದು ಬಹಳ ವಿಸ್ತಾರವಾಯಿತು, ಇದು ಕವಿತೆಯಲ್ಲ,” ಎಂದು ಹೇಳಿದರೆ “ ಇಷ್ಟವಿದ್ದರೆ ಕೇಳು, ಇಲ್ಲವಾದರೆ ಎದ್ದು ಹೋಗು” ಎಂಬ ನಿಷ್ಠುರದ ಉತ್ತರ ಬರುತ್ತದೆ. ಆದರೆ ನಾವು ಎದ್ದು ಹೋಗುವುದಿಲ್ಲ. ಒಮ್ಮೊಮ್ಮೆ ಈ ಹುಚ್ಚು ಕವಿ ಅರ್ಥವಿಲ್ಲದಂತೆ ಹಾಡಿಬಿಟ್ಟರೂ ಅನೇಕ ಸಂದರ್ಭಗಳಲ್ಲಿ ನಮ್ಮನ್ನು ಕಾವ್ಯಾಮೃತದಿಂದ ಅಮರರನ್ನಾಗಿ ಮಾಡಿದ ನೆನಪೂ ಅದಕ್ಕೆ ತಕ್ಕ ಕೃತಜ್ಞತೆಯೂ ನಮ್ಮಲ್ಲಿವೆ. ಆದ್ದರಿಂದ ಕವಿ ತಿರುನಾಳ್ವೋವರ ರಗಳೆಯಲ್ಲಿ ರಥೋತ್ಸವದ ವಾದ್ಯದ ರಭಸವನ್ನು

“ ನಿಸ್ಸಾಳಧ್ವನಿ ದಂಡಳದಳಮೆನೆ
ನಿಸ್ಸೇಷಧ್ವನಿ ಭರದಿಂ ಘೋರಿಸೆ
ವಾದ್ಯಧ್ವನಿ ಸೋಜಿಗಮೆನೆ ನೆಗೆದುವು;
ಚೋದ್ಯಂ ಪುಟ್ಟಲ್ತರದಿಂದೊಗೆದುವು.
ತಂದೋಂ ಧಿತ್ತೋಂ ಧೋಂ ಎಂದೆನುತುಂ
ದಿಂ ದಿಂ ಧಿಮಿ ಧೀ ಧಿಮಿತೆಂದೆನುತುಂ,
ದುಮುದುಮು ತತ್ತೋಂ ತತ್ತೋಂಗೆನುತುಂ
ಚಮುಕಂ ತಕನಕ ತಕ ಎಂದೆನುತುಂ,
ಝುಂ ಝುಂ ಝುಂಝುಂ ತಕತಕ ಎನುತುಂ
ಝುಂಝುಂ ದಿಕ್ಕಟ ತಕ್ಕಟ ಎನುತುಂ,
ತಂದ್ರುಂ ದಿಕ್ಕಟ ದಿಕ್ಕಟ ಎನುತುಂ
ಝಾಂದ್ರುಂ ಕಟ ಝೋಂದ್ರುಂ ಕಟ ಎನುತುಂ
ಸಂಗೀತಧ್ವನಿಯುಮ್ಮಳಿಸುತ್ತಲ್ ”

ಎಂದು ಹಾಡಿ ಕುಣಿಯುತ್ತಿರುವಾಗ, ಈ ಆವೇಶ ಇಳಿಯಲಿ, ಸ್ವಲ್ಪ ಸಮಾಧಾನ ಸ್ಥಿತಿಗೆ ಬರಲಿ—ಎಂದು ಕಾದಿರುತ್ತೇವೆ.

ಜನರ ಮನಸ್ಸಿಗೆ ಹಿಡಿಯುವಂತೆ ಮತ್ತು ತಾನು ವರ್ಣಿಸುತ್ತಿರುವ ಒಂದು ಸನ್ನಿವೇಶದ ಮಹತ್ವಲ ದೊರೆಯುವಂತೆ ಬರೆಯಬೇಕೆನ್ನುವುದೇ ಕವಿಯ ಧ್ಯೇಯ. ಕವಿಯು ಕೂಡ ಆ ಸನ್ನಿವೇಶದಲ್ಲಿ ಹಾಗೆ ಅಭೇಧ್ಯನಾಗಿ

ಸೇರಿ ಹೋಗುತ್ತಾನೆ. ಇಳೆಯಾಂಡ ಗುಡಿಮಾರನ ರಗಳೆಯನ್ನು ತೆಗೆದು ಕೊಳ್ಳೋಣ. ಆ ಭಕ್ತನು ಶರಣರಿಗೆ ಎಲ್ಲವನ್ನೂ ಕೊಟ್ಟು ಎರಡಂಕಣದ ಮನೆ ಒಂದಿಷ್ಟು ಗದ್ದೆ ಇವುಗಳನ್ನು ಉಳಿಸಿಕೊಂಡಿದ್ದಾನೆ.

ಎನಿತೆನಿತು ಭೂಮಿ ಕ್ರಯದಿಂ ಮಾರಿ ಕಿರಿದಾಗೆ
ಅನಿತನಿತು ತನ್ನಯ ಮನಂ ಪೆರ್ಚಿ ಪಿರಿದಾಗೆ

ಶಿವಭಕ್ತರಿಗೆ ಕೊಡುತ್ತಿದ್ದಾನೆ. ಭಕ್ತರು ಬರುತ್ತಲೇ ಇದ್ದಾರೆ, ಈತನೂ ಕೊಡುತ್ತಲೇ ಇದ್ದಾನೆ.

ಮತ್ತೆ ಶರಣರ್ಬಂದೊಡುಟ್ಟುದಂ ಹೊದೆದುದಂ
ಉತ್ತಮ ಶಿವಾಚಾರಿ ಕೊಟ್ಟಿರ್ಪನಿರ್ದುದಂ

ಕಟ್ಟಕಡೆಗೆ ಆ ಸಂಸಾರದ ಸ್ಥಿತಿ ಎಲ್ಲಿಗೆ ಬಂತು ? ಎನ್ನುವುದನ್ನೂ, ಆಸ್ಥಿತಿಯಲ್ಲಿಯೂ ಗುಡಿಮಾರನ ಭಕ್ತಿಸಂಕಲ್ಪವು ಹೇಗಿತ್ತೆನ್ನುವುದನ್ನೂ ಹರಿಹರನಿಗಿಂತ ಚೆನ್ನಾಗಿ ಯಾರೂ ವರ್ಣಿಸಲಾರರು.

ಸತಿಗೊಂದು ಕಪ್ಪಟಂ ತನಗೊಂದು ಕೋವಣಂ
ಸುತನೆನಿಸುವಾತಂಗೆ ಮತ್ತೊಂದು ಕೋವಣಂ
ಮೂವರುಂ ನಿಂದಿರ್ಪರನಿತುಮನೆ ತಮಗುಳಿಯೆ
ಈವಡಂತೇನುಮಿಲ್ಲದೆ ನಿಜದ ಮನ ಉಳಿಯೆ
ಅದರೊಳಗೆ ಇಳೆಯಾಂಡ ಕುಡುತಮಿರ್ದಂ ನೋಡ,
ಮದನಹರಭಕ್ತರ್ಗೆ ಕುಡುತಮಿರ್ದಂ ನೋಡ.
ಇನಿತುಳಿಯೆ ಭಕ್ತರ್ಗೆ ಮಾಡುತಿರ್ಪಂ ನೋಡ,
ಅನಿತನಿತು ಭಕ್ತಿ ಹೆಚ್ಚುತ್ತಮಿರ್ದುದು ನೋಡ.
ಅನಿತವಸ್ಥೆಯೊಳಿರ್ದು ಸುಮ್ಮನಿರ್ದನೆ ನೋಡ,
ಅನುಪಮದ ಭಕ್ತಂಗೆ ಲೀಲೆ ಮಿಕ್ಕುದು ನೋಡ.
ಧನವಿಲ್ಲದೊಡೆ ಏನು, ಧಾನ್ಯವಿಲ್ಲದೊಡೆ ಏನು,
ಮನೆಯಿಲ್ಲದೊಡೆ ಏನು, ಏನುವಿಲ್ಲದೊಡೇನು ?
ತನುವಿರ್ದಪುದು, ತನುವಿನೊಳಗರ್ಥವಿತ್ತಪೆಂ;
ಮನವಿರ್ದಪುದು, ಮನದೊಳಗರ್ಥಮಂ ಇತ್ತಪೆಂ;

ಹರಣವಿದೆ, ಹರಣದೊಳಗರ್ಧಮಂ ಕೊಟ್ಟಪೆಂ;
ಎರಡು ಕಣ್ಣಿವೆ, ಎರಡರೊಳಗೊಂದ ಕೊಟ್ಟಪೆಂ.
ಇಂತು ಶರಣಗಿರೀವ ಚಿಂತೆಯಂ ಚಿಂತಿಸುತೆ
ಮುಂತೆ ತನಗೇನಾದುದಂ ಕುಡಲ್ಚಿಂತಿಸುತೆ

ಇಳೆಯಾಂಡಗುಡಿಮಾರನಿದ್ದನಂತೆ. ಇದನ್ನು ಕೇಳಿ ಭಕ್ತರು ತಲೆದೂಗರೇ ! ಅದರಿಂದ ಬಾಷ್ಪಗಳನ್ನು ಸುರಿಸರೇ ! ಇದು ಹರಿಹರನ ಮಾರ್ಗ.

ಆದರೆ ಮಹಾಕವಿಯಾದ ಹರಿಹರನು ಯಾವಾಗಲೂ ಪಾಮರಜನ ರಂಜನಾರ್ಥವಾಗಿ ಹೀಗೆ ಬರೆಯುತ್ತಿದ್ದನೆಂದು ಯಾರೂ ಭಾವಿಸಬಾರದು. ಶ್ರೋತೃವರ್ಗದ ಮಟ್ಟಕ್ಕೆ ತಾನು ಇಳಿಯಬೇಕೆಂದು ಈ ಮಹಾಕವಿಗೆ ಆಗಾಗ ಅನ್ನಿಸುತ್ತಿದ್ದರೂ, ಆಶ್ರೋತೃವರ್ಗವನ್ನು ತನ್ನ ಮಟ್ಟಕ್ಕೆ ಎಳೆದು ಕೊಳ್ಳಬೇಕೆಂಬ ಉದಾತ್ತ ಸಂಕಲ್ಪವೂ ಜೊತೆಯಲ್ಲಿಯೇ ಇರುತ್ತಿದ್ದಿತು. ಹರಿಹರನಲ್ಲಿ ಪದಪ್ರಯೋಗಗಳ ವೈವಿಧ್ಯವು ಬಹಳ ಸೊಗಸಾಗಿ ಕಾಣುತ್ತದೆ; ಆವೈವಿಧ್ಯದ ವಿಸ್ತಾರವು ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತದೆ. ದೊಡ್ಡ ಭಾವವನ್ನು ಚಿಕ್ಕ ಮಾತುಗಳಲ್ಲಿ ಅಡಕಮಾಡಿ ಹೇಳುವುದೇ ಹರಿಹರನ ಅಸಾಧಾರಣ ಲಕ್ಷಣ. ಅನೇಕ ವೇಳೆ ಈ ಪ್ರತಿಭಾಜ್ಯೋತಿಯು ನಮ್ಮ ಕಣ್ಮನಗಳನ್ನು ಹಠಾತ್ತಾಗಿ ತನ್ನ ಕಡೆಗೆ ಸೆಳೆದು ಬಿಡುತ್ತದೆ. ತಿರುನಾಳ್ಪೋವರನ್ನು ವರ್ಣಿಸುವಾಗ

ಕುಲದೊಳ್ಕಿರಿಯಂ ಮನದೊಳ್ಪಿರಿಯಂ
ನೆಲದೊಳ್ಕಿರಿಯಂ ಪರದೊಳ್ಪಿರಿಯಂ

ಎಂದು ಭಾವಗರ್ಭಿತವಾಗಿ ಹೇಳಿರುವುದನ್ನು ನೋಡಬಹುದು. ಹರಿಹರನಿಗೆ ಮಾತುಗಳ ಬೆಲೆಗೊತ್ತು. ಬಿಗಿಯಾಗಿ ಬರೆಯಬೇಕೆನ್ನುವಾಗ ಬರೆಯುತ್ತಾನೆ. ಅಲ್ಲಿ ಒಂದಕ್ಷರವನ್ನೂ ತೆಗೆಯಲಾಗುವುದಿಲ್ಲ. ಆದಯ್ಯನ ರಗಳೆಯಲ್ಲಿ ಪದ್ಮಾವತಿಯ ಯೌವನೋದಯ-ವರ್ಣನೆಯನ್ನು ಬಹಳ ಗಂಭೀರವಾಗಿಯೇ ಮಾಡಿರುವುದಲ್ಲದೆ

ನಡು ನಡೆ ನುಡಿಗಳು ಕಿರಿದಾಗುತ್ತಿರೆ
ಮುಡಿ ಮೊಲೆ ಜಘನಂ ಪಿರಿದಾಗುತ್ತಿರೆ

ಎಂದು, ಚನ್ನಯ್ಯನ ರಗಳೆಯಲ್ಲಿ ಚೋಳದೇಶದ ವರ್ಣನೆ ಮಾಡುವಾಗ

ಬೆಳೆಯಿಲ್ಲದೆಡೆಯಿಲ್ಲ ಜನವಿಲ್ಲದೂರಿಲ್ಲ
ನೆಳಲ ತಂಪಿಲ್ಲದಿಂಪಿಲ್ಲ ದಾರವೆಯಿಲ್ಲ
ಕಾವೇರಿ ಸೋಂಕಿದರ ಪಾಪಮಂ ಸೋವೇರಿ
ಕಾವೇರಿ ಸಕಲಸಸ್ಯಾದಿಗಳ ಕಾವೇರಿ
ಹರಿದಳಾವೇಶದೊಳ್ ಹರಭಕ್ತಿರಸದಂತೆ
ಧರಣೀತಳಕ್ಕಮೃತವಿಮಳ ವಾರುಧಿಯಂತೆ.

ಎಂದೂ ಬರೆಯ ಬಲ್ಲ ಕವಿಗೆ ಪದಪ್ರಯೋಗದ ಜಾಣ್ಮೆಯನ್ನು ಯಾರೂ ಕಲಿಸಬೇಕಾಗಿಲ್ಲ.

ಮಹಾಕವಿಯಲ್ಲಿ ಅಡಗಿರುವ ಅದ್ಭುತಶಕ್ತಿಯು ಕೆಳಗಿನ ಮಟ್ಟದಲ್ಲಿಯೇ ನಿಲ್ಲುವುದು ಎಂದಿಗೂ ಸಾಧ್ಯವಿಲ್ಲ. ಆದುದರಿಂದ ಪ್ರತಿಭೆಯು ಬೆನ್ನೇರಿದ ಭಾವಗಳು ಆ ಪ್ರತಿಭೆ ಮೇಲಕ್ಕೇರಿದಂತೆಲ್ಲ ತಾವೂ ಏರುತ್ತ ಹೋಗುವುವು. ಆ ರಭಸ, ಆ ವೇಗ, ಆ ಉಪಮಾನ, ಆ ಉತ್ಪ್ರೇಕ್ಷೆಗಳ ಪರಂಪರೆ ಅಪ್ರತಿಹತವಾಗಿರುತ್ತದೆ. ಶಂಕರದಾಸಿಮಯ್ಯನು ಈಶ್ವರನಿಂದ ಫಾಲನೇತ್ರವನ್ನು ಪಡೆದನಷ್ಟೆ; ನಂದಿಯ ಮೊಗವಡಪನ್ನು ಈಶ್ವರನು ಅದಕ್ಕೆ ತೊಡಸಿದನಷ್ಟೆ

ಉಗ್ರನಸಮುಗ್ರಪ್ರತಾಪರೂಪಿನ ತೆರದಿ
ಉಗ್ರಲೋಚನನ ಪುರಹರನ ಕೀರ್ತಿಯ ತೆರದಿ
ಹೊಸಮುಸೆ ತ್ರಿಶೂಲಕ್ಕೆ ನೊಸಲಕಣ್ಣೊಗೆದಂತೆ
ಅಸಮನಯನಕ್ಕೆ ಕರಚರಣ ಒಲ್ಡೊಗೆದಂತೆ
ಸಿಡಿಲ ಸಂಗಡಕೆ ಬರಸಿಡಿಲೊಡಂಬಡುವಂತೆ
ಮೃಡನ ಸಾಮರ್ಥ್ಯಕ್ಕೆ ಕಣ್ದೆರವೆಯಾದಂತೆ
ತರಣಿಬಿಂಬದ ಹಿಂಡು ನೊಸಲ ಮರೆಹೊಕ್ಕಂತೆ
ಉರಿವಗ್ನಿ ಹೆರೆನೊಸಲ ಹಸೆಯೇರಿ ನಿಂದಂತೆ
ಬಡಬಾಗ್ನಿ ದಾವಾಗ್ನಿ ಸಂಗಡಂಗೊಂಡಂತೆ
ಕಡುಪಿನಿಂ ಕಾಲಾಗ್ನಿ ಹಣೆಗೊಂಡು ನಿಂದಂತೆ
ಮುಗಿಲ ಮರೆಯೊಳ್ ಮೇಘಪಾವಕಂ ನಿಂದಂತೆ
ಬಗೆಯೊಳರಿವಿನ ಮರೆಯ ನಿಜದ ಬೆಳಗಿರ್ಪಂತೆ

ಎನ್ನುವ ವರ್ಣನೆಯನ್ನು ನೋಡಿದರೆ ಹರಿಹರನ ಶಕ್ತಿ ವ್ಯಕ್ತವಾಗುತ್ತದೆ.

ಆದುದರಿಂದ ಕವಿ ತಾನು ಪಾಮರ ಜನರನ್ನು ಉದ್ಧಾರಮಾಡಬೇಕೆಂದೂ, ಅವರನ್ನು ಹೆಚ್ಚಿನ ಮಟ್ಟಕ್ಕೆ ಏರಿಸಬೇಕೆಂದೂ ಸಂಕಲ್ಪಿಸಿದ್ದನೆನ್ನುವುದು ಸ್ಪಷ್ಟವಾಗುತ್ತದೆ. ಈ ಕಾರಣದಿಂದಲೆ ಗಾಢವಾದ ತತ್ವಗಳನ್ನು ಸರಸವಾದ ಶೈಲಿಯಲ್ಲಿ ಹರಿಹರನು ಅಲ್ಲಲ್ಲಿ ಸೇರಿಸಿ ಕಾವ್ಯವನ್ನು ಬರೆಯುತ್ತ ಹೋಗಿದ್ದಾನೆ.

ವಚನಕಾರರು ಸಾಮಾನ್ಯವಾಗಿ ಹೇಳುವ ವಚನವನ್ನು

ತಿಲದ ತೈಲದ ತೆರದಿ ಕಾಷ್ಠದಗ್ನಿಯ ತೆರದಿ
ನೆಲದ ಮರೆಯ ನಿಧಾನದ ತೆರದಿ

ಎಂದು ಮುಂತಾಗಿ ಹರಿಹರನು ಹೇಳಿದ್ದಾನೆ. ಶಂಕರದಾಸಿಮಯ್ಯನು ಲಿಂಗದೊಳಗೆ ಐಕ್ಯನಾದುದನ್ನು

ಬಿಜದೊಳಗಂಕುರಂ ಪುಗುತಿರ್ಪ ಮಾಳ್ಕೆಯಿಂ
ತೇಜಮುಂ ಕಾಂತಿ ಬಗೆದೊಳಪುಗುವ ಮಾಳ್ಕೆಯಿಂ
ಬಿಟ್ಟ ಹಮ್ಮುಂ ಜೀವನುಂ ಪರಮನಪ್ಪಂತೆ
ನೆಟ್ಟನೆ ಜ್ಯೋತಿ ಪರಮಜ್ಯೋತಿಯಪ್ಪಂತೆ
ಕೊಡನುದಕವಾಮಹಾಜಲದೊಳ್ ಬೆರಿಸುವಂತೆ
ಜಡೆಯ ಶಂಕರದೇವನೊಳ್ ಪೊಕ್ಕನೊಲ್ದಂತೆ

ಎಂದೂ, ರೇವಣಸಿದ್ಧನನ್ನು ಕುರಿತು

ಲೋಕಕ್ಕೆ ತಾ ಮರುಳು ತನಗೆ ಲೋಕಂ ಮರುಳು
ಲೋಕದೊಳ್ ಸುಜನರ್ಗೆ ಶಿವನ ತತ್ವದ ಪುರುಳು
ತಾನಾಗಿ ಮೆರೆವುತಿರ್ದಂ ಸಿದ್ಧರೇವಣಂ

ಎಂದೂ ಕವಿ ಹೇಳಿರುವುದನ್ನು ಸರಿಯಾಗಿ ವ್ಯಾಖ್ಯಾನ ವಿವರಣೆ ಮಾಡಿದ ಹೊರ್ತು ಜನರಿಗೆ ಅವು ಅರ್ಥವಾಗುವುದಿಲ್ಲ. ಮಾತುಗಳು ಕಠಿನವಿಲ್ಲ. ಭಾವಗಳು ಮಾತ್ರ ಕಠಿನ. ಆದುದರಿಂದ ಹರಿಹರನು ಸುಲಭವಾಗಿ ಬರೆದ ಮಾತ್ರದಿಂದಲೇ ಕೆಲವು ಕಡೆ ಪುನರುಕ್ತಿಯನ್ನಿಟ್ಟು ಬರೆದ ಮಾತ್ರದಿಂದಲೆ ಸಾಮಾನ್ಯ ಕವಿಯೆಂದು ಭಾವಿಸಬಾರದು. ಆ ಸುಲಭಶೈಲಿಯ ಬುಡದಲ್ಲಿ ಆ ಪುನರುಕ್ತಿಗಳ ತಳದಲ್ಲಿ ತತ್ವಜ್ಞನೂ ಪ್ರತಿಭಾವಂತನೂ ಆದ ಮಹಾಕವಿ ಕುಳಿತಿದ್ದಾನೆ.

ಹರಿಹರನ ವಿಚಾರದಲ್ಲಿ ಭಕ್ತಿಯ ಆವೇಶ, ಉತ್ಕಟವಾದ ಸ್ವಮತಾಭಿಮಾನ–ಎಂದು ವಿಶೇಷಣಗಳನ್ನು ಉಪಯೋಗಿಸಿದ್ದೇವಷ್ಟೆ. ಇವು ಉಗ್ರಸ್ಥಿತಿಯಲ್ಲಿರುವಾಗ ಕೆಲವು ಕಾವ್ಯಗಳನ್ನೂ ಸಮಾಧಾನಸ್ಥಿತಿಯಲ್ಲಿರುವಾಗ ಕೆಲವು ಕಾವ್ಯಗಳನ್ನೂ ಮಾಡಿಸಿವೆ. ಪೆರಿಯಪುರಾಣದ ಕವಿ ರಾಜನ ಬಳಿ ಮಂತ್ರಿಯಾಗಿದ್ದನು. ಆದುದರಿಂದ ಒಂದು ಗಾಂಭೀರ್ಯ, ಒಂದು ಬಿಗಿ, ಮತ್ತು ಒಂದು ಉತ್ತಮ ಸಂಸ್ಕೃತಿ ಮೂಲದಲ್ಲಿ ಕಂಡುಬರುತ್ತವೆ. ಆ ಕವಿಗೆ ಶೈವಮತೋತ್ಕೃಷ್ಟತೆಯನ್ನು ತೋರಿಸುವುದು ಮತ್ತು ಶೈವಮತ ಪ್ರಚಾರಮಾಡುವುದು ಧ್ಯೇಯಗಳಾಗಿದ್ದರೂ ವೇದಗಳಲ್ಲಿಯೂ, ಆಗಮುಗಳಲ್ಲಿಯೂ, ಯಜ್ಞಗಳಲ್ಲಿಯೂ, ಪೂಜೆಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ, ಶೈವಭಕ್ತರಲ್ಲಿಯೂ ಸಮಾನವಾದ ಗೌರವವಿತ್ತು. ಆದುದರಿಂದ ಆ ಕವಿ ಇವುಗಳೆಲ್ಲವನ್ನೂ ಸಮನ್ವಯಮಾಡಿ, ರಾಜನೇ ಶ್ರೋತೃವಾದ್ದರಿಂದ ತಮ್ಮಿಬ್ಬರ ಘನತೆಗೆ ತಕ್ಕಂತೆ ಗಂಭೀರವಾಗಿ ಕೃತಿರಚನೆಮಾಡಿದ್ದಾನೆ. ಹರಿಹರನ ದೃಷ್ಟಿ ಕೇವಲ ವೀರಶೈವದೃಷ್ಟಿ; ಅದರಲ್ಲಿಯೂ ಸ್ಥಳಾಂತರದಲ್ಲಿ ಎಳ್ಳಷ್ಟೂ ಗುಣವನ್ನು ಕಾಣದ ಧರ್ಮಾಂಧತೆಯ ದೃಷ್ಟಿ. ಸಾಲದುದಕ್ಕೆ ಶ್ರೋತೃಗಳು ಸಾಮಾನ್ಯ ಜನರು.

ಶರಣರಗಳೆಯಲ್ಲಿ ಈಶ್ವರನಿಂದ ಹೊಗಳಿಸಿಕೊಳ್ಳದ ಭಕ್ತನೇ ಇಲ್ಲ. ಆ ಭಕ್ತಶಿಖಾಮಣಿಯನ್ನು ಸೊಗಸಾದ ಪುಷ್ಪಕವಿಮಾನದಲ್ಲಿ ಏರಿಸಿ, ಕೈಲಾಸದ ಬಾಗಿಲಲ್ಲಿಳಿಸಿ, ಪಾರ್ವತಿಗೂ ಗಣಗಳಿಗೂ ತೋರಿಸಿ, ಬೆನ್ನು ತಟ್ಟಿ ಕೊಂಡಾಡುವ ಪರಮಾತ್ಮನು ನಮ್ಮೆದುರಿಗಿದ್ದಾನೆ.

ಭಾಪು ಶಂಕರದಾಸ ದೇವ ಶಂಕರದಾಸ
ಭಾಪು ಮಝುಭಾಪೆನ್ನ ವೀರಶಂಕರದಾಸ

* * * *
ಭಾಪು ಮಾದಾರ ಚನ್ನ ಪೂತು ಮಾದಾರ ಚನ್ನ
ಸೋಪಾಧಿಕಂ ಪುಗದ ಶೈವಮಾದರಚನ್ನ
ಗುಪ್ತ ಪೂಜೆಯ ಚನ್ನ ಗುರುತರಾಜ್ಞೆಯ ಚನ್ನ
ಆಪ್ತಗುಣನಿಧಿ ಚನ್ನ ಎನ್ನ ಭಕ್ತಿಯ ಚನ್ನ.

ಎಂದು ಮುಂತಾಗಿ ನಾನಾವಿಧದಿಂದ ಬಣ್ಣಿಸಿ ಹೊಗಳುವ ಪರಮೇಶ್ವರನನ್ನು

ಆ ಉಗ್ರಸ್ಮಿತಿಯ ಭಕ್ತಿಯು ನಮಗೆ ದೊರಕಿಸಿದೆ. ಕವಿ ಹೀಗೆ ಹಾಡುತ್ತ ಆನಂದಬಾಷ್ಪವನ್ನು ಸುರಿಸುತ್ತಿದ್ದರೆ ಶ್ರೋತೃವರ್ಗದ ಚಿತ್ತವೃತ್ತಿಯು ಹೇಗೆ ಪರಿಣಮಿಸುತ್ತಿದ್ದಿತೆನ್ನುವುದನ್ನು ನಾವು ಆಲೋಚಿಸಬೇಕು.

ಈ ಭಕ್ತಿ ಸ್ವಲ್ಪ ಸಮಾಧಾನಸ್ಥಿತಿಗೆ ಬಂದು ಪ್ರತಿಭಾಶಕ್ತಿಗೆ ಎಡೆಗೊಟ್ಟಾಗ ಎಂತಹ ವೃತ್ತಿಯಲ್ಲಿಯೂ ತತ್ತ್ವವನ್ನು ಕಾಣಿಸುವ ಕೆಲಸವನ್ನು ಅದು ಮಾಡಿದೆ. ಇಳೆಯಾಂಡಗುಡಿಮಾರನ ಕಥೆಯನ್ನು ಹಿಂದೆ ಹೇಳಿದ್ದೇವಷ್ಟೆ. ಆಮಹಾದೇವನ ಒಕ್ಕಲ ಮಗನು ಭವನ ಭಕ್ತ್ಯಾರಂಭವನ್ನು ಒಳಗೂ, ಬರಿ ಆರಂಭವನ್ನು ಹೊರಗೂ ಮಾಡುತ್ತಿದ್ದನಂತೆ. ಹರಿಹರನ ಮಾತುಗಳನ್ನು ನೋಡಿ.

ಸಮಚಿತ್ತವೆಂಬ ಭೂಮಿಯನೆ ಹಸನಾಗಿರಿಸಿ
ಅಮರ್ದ ಶಂಕರನ ನೆನಹೆಂಬ ನೇಗಿಲನಿರಿಸಿ
ಅರಿಷಟ್ಕಮಂ ತಂದು ಹೂಡುವೆತ್ತಂ ಮಾಡಿ
ಹರಿವ ಮನವಂ ಕಟ್ಟಿ ಹಿಡಿವ ಹಗ್ಗಂ ಮಾಡಿ
ಗರ್ವಿಸುವಹಂಕಾರಮುಮನಚ್ಚುನಂ ಮಾಡಿ
ಸರ್ವೇಶನಿಷ್ಠೆಯಂ ತಳಿವ ಬೀಜಂ ಮಾಡಿ
ಸುರುಚಿರ ಶಿವಜ್ಞಾನಸಸಿಗಳಂಕುರಿಸುತಿರೆ
ಹರನ ಪರಮಾನಂದರಸದ ಮಳೆಗರೆವುತಿರೆ
ಬಿತ್ತಿ ಬೆಳೆವಂ ಶಿವನ ಸದ್ಭಕ್ತಿಸಸಿಗಳಂ
ಕಿತ್ತು ಕಳೆವಂ ಕ್ಷುತ್ಪಿಪಾಸಾದಿ ಕಳೆಗಳಂ
ಇಂತೊಳಗೆ ಭವನ ಭಕ್ತ್ಯಾರಂಭಮಂ ಮಾಳ್ಪ
ಅಂತೆಲ್ಲರರಿಯೆ ಹೊರಗಾರಂಭಮಂ ಮಾಳ್ಪ,

ಹೀಗೆ ವ್ಯವಸಾಯಕ್ಕೆ ಸಂಬಂಧಿಸಿದಂತೆ ಹಿಂದೆ ಬುದ್ಧದೇವನು ಸಕಲರೂಪಕಾಲಂಕಾರದಿಂದ ತತ್ತ್ವೋಪದೇಶ ಮಾಡಿದ್ದಾನೆ. ಅಲ್ಲಮಪ್ರಭು ಗೋರಾರ್ಯನಿಗೆ ಹೀಗೆಯೇ ಇನ್ನೊಂದು ರೀತಿಯಲ್ಲಿ ತತ್ತ್ವೋಪದೇಶ ಮಾಡಿದ್ದಾನೆ. ಇನ್ನೊಂದು ಉದಾಹರಣೆಯನ್ನು ನೋಡೋಣ. ತಿರುಕುರುಂಪೆತೊಂಡನು ಅಗಸ. ಆದರೆ "ಮನದ ಮಡಿಯನೀವುತಿಲಿರ್ಪ" ಅಗಸ.

ಪಾಪವೆಂಬ ಮಲಿನ ಮನದ ಸೀರೆಯಂ ತೆರಳ್ಚಿ ಕಟ್ಟಿ
ಕೋಪವೆಂಬ ಕತ್ತೆ ನಿಲಲು ಬೆನ್ನ ಮೇಲೆ ಮಾಣದೊಟ್ಟಿ
ನಡೆದು ಭವನ ಭಕ್ತಿರಸದ ಹೊಳೆಯ ತಡಿಯ ಬಳಿಗೆ ಬಂದು
ಮೃಡನೆ ಶರಣೆನುತ್ತೆ ದೇಹವೆಂಬ ಕಲ್ಲ ಬಳಿಗೆ ಬಂದು
ತಾಪತ್ರಯಗಳೆಂಬ ಕಿಚ್ಚಿನಿಂದೆ ಕುದಿಸೆ ಕುದಿವುತಿರಲು
ತಾಪವಾರೆ ವಸ್ತ್ರಕುಲಮನಲ್ಲಿ ಪಿಡಿವು ತೊಳೆವುತಿರಲು
ಒಗೆದನೊಗೆದನಮಮ ಹರನ ಪರಮಭಕ್ತಿರಸದೊಳೊಗೆದ
ಒಗೆದನೊಗೆದನಾಹ ದೇಹಭಾವವಳಿದು ಸುಖದೊಳೊಗೆದ
ಒಗೆದ ದನಿಯನಾಲಿಸಿದರ ಪಾಪ ಓಡಿಹೋಗಲೊಗೆದ
ಒಗೆಯೆ ಸಿಡಿದ ಹನಿಗಳೆಯ್ದಿದವರೆ ಮುಕ್ತರಾಗಲೊಗೆದ
ಏಕನಿಷ್ಠೆಯಿಂದ ತಿರುಹಿ ಮುರುಹಿ ಹಿಳಿದು ಹಿಂಡಿ ಮತ್ತೆ
ಏಕನಭವನೆಂಬ ದಿಟದ ಬಿಸಿಲೊಳೊಣಗಿಸುತ್ತ ಮತ್ತೆ
ಪುರಹರಪ್ರಸಾದದಿಂದೆ ರಂಜಿಸಲ್ಕೆ ಗಂಜಿ ಇಟ್ಟು
ಶರಣಸಂಗದಿಂದೆ ಘಟ್ಟಿಸುತ್ತೆ ಹೊಳಹನೊಪ್ಪವಿಟ್ಟು
ಪರಮನಂಘ್ರಿಗಳಿಗೆ ಇಚ್ಚೆಯಂತೆ ಮಡಿಸಿ ಗಳಿಗೆ ಮಾಡಿ
ತಿರುಕುರುಂಪೆತೊಂಡರೆಸೆವ ಮನದ ಮಡಿಯನೊಂದುಗೂಡಿ
ಸಕಲಭಕ್ತಜನಕೆ ಮನದ ಮಡಿಯನೀವುತಿರ್ದನಲ್ಲಿ
ಸಕಲ ಶರಣಕುಲಕೆ ಸಿಂಗರಂಗಳೀವುತಿರ್ಪನಲ್ಲಿ.

ಹೀಗೆ ವೃತ್ತಿಗಳನ್ನು ತತ್ವಮಯವಾಗಿ ಪೆರಿಯಪುರಾಣದಲ್ಲಿ ಮಾಡಿಲ್ಲ, ಸ್ಕಾಂದಪುರಾಣದಲ್ಲಿಯೂ ಮಾಡಿಲ್ಲ. ಇದು ಹರಿಹರನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿರುವ ತತ್ವಭಂಡಾರ. ಕಾಯಕಗಳಿಂದ ಜೀವನ ಮಾಡುತ್ತಿದ್ದ ಭಕ್ತರಿಗೆಲ್ಲ ವೇದಾಂತ-ಸಿದ್ಧಾಂತಗಳ ಸಾರವನ್ನು ಆಯಾ ಕಾಯಕದ ಕ್ರಿಯಾಕಲಾಪಗಳ ಮೂಲಕವೇ ಬೋಧಿಸಿದ ಮಹಾಗುರು ಹರಿಹರ. ಆದುದರಿಂದಲೇ ಹರಿಹರನಲ್ಲಿ ಮತಾಚಾರ್ಯನ ಪ್ರಭಾವವೂ ಮಹಾಕವಿಯ ಸ್ಫೂರ್ತಿಯೂ ಒಂದುಗೂಡಿ ಆತನ ಸ್ಥಾನವನ್ನು ಮೇಲಕ್ಕೆ ಏರಿಸುತ್ತವೆ. ಆದರೆ ಈ ಮತಾಚಾರ್ಯನು ಸ್ವಮತಾಧಿಕ್ಯಸ್ಥಾಪನೆಯನ್ನು ಮಾಡಬೇಕಾಗಿದೆ. ಪೆರಿಯ ಪುರಾಣದ ಕಥೆಗಳು ತನ್ನ ವೀರಶೈವಭಕ್ತಿಯ ಮಟ್ಟಕ್ಕೆ ಏರಲಾರವೆಂದು ಬೋಧೆ

ಯಾದಾಗ ಆ ಕಥೆಗಳನ್ನು ತನ್ನ ಕಾರ್ಯಕ್ಕೆ ಅನುಕೂಲಿಸುವಂತೆ ನಿಸ್ಸಂಕೋಚವಾಗಿ ಮಾರ್ಪಡಿಸಿದ್ದಾನೆ.

ಪ್ರಸಿದ್ಧವಾದ ಕಣ್ಣಪ್ಪನ ಕಥೆಯನ್ನು ತೆಗೆದುಕೊಳ್ಳೋಣ. ಪೆರಿಯ ಪುರಾಣದಲ್ಲಿ ಇದು ಬಹಳ ಮನೋಹರವಾಗಿ ಬಹಳ ಗಂಭೀರವಾಗಿ ಆದರೂ ಭಕ್ತಿರಸಪ್ರಧಾನವಾಗಿ ಇದೆ. ದೇವಸ್ಥಾನದಲ್ಲಿ ಪೂಜಿಸುತ್ತಿರುವ ಬ್ರಾಹ್ಮಣನು ಬಹಳ ಸಾತ್ವಿಕನು. ಆಗಮೋಕ್ತ ಮಾರ್ಗದಲ್ಲಿ ಶ್ರದ್ಧೆಯಿಂದ ಪೂಜಿಸುತ್ತಿದ್ದ ಭಕ್ತನು. ಕಣ್ಣಪ್ಪನ ಮುಗ್ಧಭಕ್ತಿಯನ್ನು ಆತನು ಅರ್ಥಮಾಡಿಕೊಂಡಿಲ್ಲ. ಆ ಅಪಚಾರಗಳೆಂಬ ಉಪಚಾರಗಳ ಮರ್ಮವನ್ನು ಗ್ರಹಿಸಿಕೊಂಡಿಲ್ಲ. ಆ ಬ್ರಾಹ್ಮಣನ ಸಂಕಟವನ್ನು ನೋಡಿದರೆ ನಮ್ಮ ಕಣ್ಣೀರು ಹರಿಯುತ್ತದೆ. ಈಶ್ವರನಿಗೂ ಮರುಕು ಹುಟ್ಟಿ ಆತನು ಬ್ರಾಹ್ಮಣನ ಕನಸಿನಲ್ಲಿ ಕಾಣಿಸಿಕೊಂಡು ಸಮಾಧಾನ ಮಾಡುತ್ತಾನೆ; “ ನಾಳೆಯ ದಿನ ಕಂಭದ ಮರೆಯಲ್ಲಿದ್ದು ನೋಡು, ಕಣ್ಣಪ್ಪ ಎಂಥ ಭಕ್ತ ಎನ್ನುವುದು ತಿಳಿಯುತ್ತದೆ,” ಎಂದು ಬುದ್ಧಿ ಹೇಳಿ ಅದೃಶ್ಯನಾಗುತ್ತಾನೆ. ಭಗವಂತನನ್ನು ಕನಸಿನಲ್ಲಿ ಕಂಡ ಈ ಸುಕೃತಿಯು ಮಾರನೆಯ ದಿನ ನಡೆಯುವ ಭಕ್ತಿವ್ಯಾಪಾರವನ್ನು ನೋಡುತ್ತಾನೆ; ಪರಮಾತ್ಮನ ಮಂಗಳಹಸ್ತಗಳು ಮೂಡಿ ಬಂದುದನ್ನು ಕಂಡು ಮುಕ್ತನಾಗುತ್ತಾನೆ. ಹರಿಹರನ ಬ್ರಾಹ್ಮಣನು ಮೊದಲು ದಿವಸ ದೇವಸ್ಥಾನದೊಳಗಿನ ಸ್ಥಿತಿಯನ್ನು ಕಂಡು ದುಃಖಿಸುತ್ತಿದ್ದರೆ ಆತನು ಕಪಟಿಯೆಂದಾಗಲಿ ಭಕ್ತಿರಹಿತನೆಂದಾಗಲಿ ತೋರುವುದಿಲ್ಲ.

ಪುಗಿಸದಿರು ಕಂಡೆಯ್ಯ ಪಶುಕರ್ಮಕಾರನಂ
ಪುಗಿಸದಿರು ಹೇಸಿಕೆಯ ಮಾಡುವ ಕಿರಾತನಂ
ಎಂದೆನುತ ಪೊಡಮಟ್ಟು ಬಲಗೊಂಡು ಪಟ್ಟಿರ್ದು
ಇಂದು ಶೇಖರ ಕರುಣಿಸೆಂದೆನುತೆ ನಿಂದಿರ್ದು
ಸುಖನಾಸಿಗರ್ಭಗೃಹದಿಂ ರಂಗಮಂಟಪದ
ಮುಖದ ಮೂರುಂ ಕದವನಿಕ್ಕುತುಂ ವಿಸ್ತರದ
ಸಂಕೊಲೆಗಳಂ ಹೂಡಿ ಬಿಯ್ಯಗಂಗಳನಿಕ್ಕಿ
ಶಂಕರಾ, ಪುಗಿಸದಿರು ಇನ್ನವನೆನುತ್ತಿಕ್ಕಿ

ಬರುತ್ತಿದ್ದರೆ ನಮ್ಮ ಮನಸ್ಸು ಕರಗುತ್ತದೆ. ಆದರೆ ಕವಿ ಮುಂದೆ ಪಾರ್ವತಿಯ ಪಾತ್ರವನ್ನು ಸೃಷ್ಟಿಸಿ ಪಾರ್ವತೀಪರಮೇಶ್ವರರ ಸಂಭಾಷಣೆಯನ್ನು ತಂದುಹಾಕಿ; ಪಾರ್ವತಿ ಬ್ರಾಹ್ಮಣನ ಕಡೆ ವಕೀಲಿ ಕೆಲಸ ನಡೆಸಿದಂತೆ ಕಲ್ಪಿಸಿದ್ದಾನೆ. ಪಾರ್ವತಿ ಬ್ರಾಹ್ಮಣನ ಮತ್ತು ಕಣ್ಣಪ್ಪನ ಪೂಜಾಕ್ರಮಗಳ ವ್ಯತ್ಯಾಸಗಳನ್ನು ವರ್ಣಿಸಿ ಆಗಮೋಕ್ತವಾಗಿ

ಪೂಜಿಸುವ ಪಾರ್ವಂಗೆ ಬಾಯ್ಮುಡುಕದಿರ್ದಿಪಿರಿ
ಓಜೆಗೆಟ್ಟಾ ಲುಬ್ಧಕಂಗೆ ಕರುಣಿಸಿರ್ದಿಪಿರಿ.

* * * *

ಆವ ಪರಿಯಿಂದೊಲ್ದಿರಭವಾ ಕಿರಾತಂಗೆ
ದೇವವಿಲ್ಲದ ದುಶ್ಚರಿತ್ರದ ಕಿರಾತಂಗೆ ?

ಎಂದು ಕೇಳುತ್ತಾಳೆ. ಈಶ್ವರನ ಉತ್ತರವಾದರೂ ಏನು ?

ಪಾರ್ವನಗ್ಗವಣಿ ತಿಳಿ ಮನ ಕದಡು ಎಲೆ ಗೌರಿ
ಪಾರ್ವಗರ್ಚನೆ ಇನಿತು ಮನವತಿ ವಿಷಂ ಗೌರಿ

* * * *

ಸತ್ಯವಿಲ್ಲದ ಪೂಜೆ ಸಸಿನವಪ್ಪುವೆ ಗೌರಿ
ನಿತ್ಯವಲ್ಲದ ಹಾಡು ಸೊಗಸಪ್ಪುದೇ ಗೌರಿ

ಎಂದು ಮುಂತಾಗಿ ಹೇಳುವುದೇ ? ಕಡೆಗೆ ಲಿಂಗದಲ್ಲಿ ಕಣ್ಣೊಡೆದು ರಕ್ತ ಸೋರುತ್ತಿದ್ದರೆ

ಅರಸಿಂಗೆ ಕೇಡಿತ್ತೊ ದೇಶಕ್ಕೆ ಪೊಲ್ಲುದೋ
ಹರನೆ ಬಲಂ ಮಹೋತ್ಪಾತವೇನಪ್ಪುದೋ

ಎಂದು ಊರಿನ ಕಡೆಗೆ ಆ ಪೂಜಾರಿ ಓಡಿ ಹೋದನು: ಈ ಕಥೆಯನ್ನು ಕೇಳುತ್ತಿದ್ದ ಭಕ್ತಜನವೆಲ್ಲ ಕೇಕೇ ಹಾಕಿಕೊಂಡು ನಗುವ ರೀತಿಯಲ್ಲಿ ಹರಿಹರನು ಬ್ರಾಹ್ಮಣನನ್ನು ಅಲ್ಲಗಳೆದು ಕಣ್ಣಪ್ಪನ ಲಿಂಗಭಕ್ತಿಯನ್ನು ವರ್ಣಿಸಿದ್ದಾನೆ.

ಈ ಸ್ವಮತಾಧಿಕ್ಯ ಸ್ಥಾಪನೆಯೂ ಆದರ ಪೋಷಕಗಳಾದ ಪರಮತ ದೂಷಣೆವಿಡಂಬನೆಗಳೂ ಪರಾಕಾಷ್ಠದೆಸೆಯನ್ನು ಮುಟ್ಟಿದಾಗ ಹರಿಹರನ ಪ್ರತಿಭಾಶಕ್ತಿಯೂ ಕೈಲಾಸದ ಶಿಖರಕ್ಕೆ ಏರುತ್ತದೆ. "ಜಯಸಿಂಹರಾಯನಿರ್ಪ

ಕಲ್ಯಾಣದೊಳುಂ ದರ್ಭೆಯ ನಿರ್ಭಾಗ್ಯರುಂ ವೇದವಾದಿಗಳುಂ ಕೊಂಡೆಯರುಂ ತರ್ಕದ ತಾಮಸರುಂ ಯಜ್ಞದ ಅಜ್ಞಾನಿಗಳುಂ ತಿಲದಾನದ ಕುಲಹೀನರುಂ ಮಹಿಷದಾನದ ಸಾಹಸಿಗಳುಂ ಕಾಳಾಮುಖದಾನದ ದಾಳಿಕಾರರೆನಿಪ ದಾನಯಾಚಕರೆನಿಪ ನೀಚರುಂ ನೆರೆದು ಬಂದರಸಂಗೆ ಆಶೀರ್ವಾದಮಂ ಕೊಟ್ಟು*" ಬ್ರಾಹ್ಮಣರಿಗೆ ಏಟಾಯಿತು. ಇನ್ನು ಆದಯ್ಯನ ರಗಳೆಯಲ್ಲಿ ಜೈನರ ಗತಿಯನ್ನು ನೋಡಿ "ಪದ್ಮಾವತಿಯ ಪಿತನಪ್ಪ ಪಾರಿಷ ಪಂಡಿತಂ ಮೇರೆಗೆಟ್ಟ ಮತಿಹೀನಂ ಕೋಪಣದಿಂ ಬಂದ ಹೊಸ ಋಷಿಯರೆನಿಪ ನೀಚರಿಗೆ ಚರಿಗೆಯಂ ಪೇಳೆ ಬರಿಯ ಭಂಡರುಂ ಲೋಚಿನಂ ತಾಳ್ಯರುಂ ಬೆತ್ತಲೆಯ ಭ್ರಷ್ಟರುಂ ರುಂಚದ ಖೂಳರುಂ ತಟ್ಟುಗಳ ಅಜ್ಞಾನಿಗಳುಂ ನಾರುವಾಯ ನರಕಿಗಳುಂ ಸರ್ವಮಲಭಾಂಡರುಂ ನೆರೆದು ಬಂದು" ಎಂದು ಮುಂತಾಗಿ ಸಾಹಿತ್ಯರೀತಿಯಲ್ಲಿ ಬಹಳ ರಸವತ್ತಾಗಿ ಬೈಗಳ ಸುರಿಮಳೆಯನ್ನು ಹರಿಹರನು ಸುರಿಸಿದ್ದಾನೆ. ಇಷ್ಟೇ ಅಲ್ಲ. "ಸುವರ್ಣಖಚಿತಮಾಗಿ ಕೋಳಿಯ ಗೂಡಿನಂತಿರ್ದ ವಿಷ್ಣುಗೃಹದೊಳ್" ಎಂದೂ ಹರಿಹರನು ಹಿಂಜರಿಯದೆ ಹೇಳಿದ್ದಾನೆ. ಇವುಗಳ ಪರಿಣಾಮ ಶ್ರೋತೃವರ್ಗದ ಮೇಲೆ ಏನಾಗಬಹುದು.?

ವೀರಶೈವೇತರರ ವಿಚಾರದಲ್ಲಿ ಹೇಗೆ ಕ್ರೂರವಿಡಂಬನೆಗಳನ್ನು ಹರಿಹರನು ಮಾಡಿದ್ದಾನೆಯೋ ಅದಕ್ಕೆ ವಿಪರೀತವಾಗಿ ಸ್ವಮತೀಯರ ಗುಪ್ತಭಕ್ತಿವರ್ಣನೆಯನ್ನು ಮಾಡಿದ್ದಾನೆ. ಆಗುಪ್ತಭಕ್ತಿಯನ್ನು ವರ್ಣಿಸುವಾಗ ಆ ಸಂಕಟಸ್ಥಿತಿಯು ನಮ್ಮ ಎದೆ ಮುಟ್ಟಿ ನಮ್ಮ ಮರುಕವೂ ಕಣ್ಣೀರೂ ಕೋಡಿಹರಿಯುತ್ತವೆ. ಕಾರಿಕಾಲಮ್ಮೆಯ ಕಥೆಯನ್ನು ತೆಗೆದುಕೊಳ್ಳೋಣ. ಈಕಥೆ ಪೆರಿಯಪುರಾಣದಲ್ಲಿ ಬೇರೆರೀತಿಯಲ್ಲಿದೆ. ಕಾರಿಕಾಲಮ್ಮೆಯ ತಂದೆ ಅಳಿಯನನ್ನೂ ಮಗಳನ್ನೂ ಸ್ವಂತಸ್ಥಳದಲ್ಲಿಯೇ ನಿಲ್ಲಿಸಿಕೊಂಡು ಅಕ್ಕರೆಯಿಂದ ನೋಡಿಕೊಳ್ಳುತ್ತಾ ಇರುತ್ತಾನೆ. ಇವರೆಲ್ಲ ಪರಮಶೈವರು. ಕಾರಿಕಾಲಮ್ಮೆಯ ಗಂಡನಾದ ಮಾಣಿಕ್ಯಶೆಟ್ಟಿ ಭವಿಯೆಂದು ಎಲ್ಲಿಯೂ ಸೂಚನೆ ಬರುವುದಿಲ್ಲ. ಕಾರಿಕಾಲಮ್ಮೆ ಮನೆಯವರಿಗೆ ಹೆದರಿಕೊಂಡು ಗುಪ್ತಭಕ್ತಿಯನ್ನು

* ಶಂಕರದಾಸಿಮಯ್ಯನ ರಗಳೆಯಲ್ಲಿ ಒಂದುಭಾಗ. ಹೀಗೆಯೇ ಬಸವರಾಜದೇವರ ರಗಳೆಯಲ್ಲಿ ಬರುತ್ತವೆ

ಆಚರಿಸಬೇಕಾದ ಸನ್ನಿವೇಶಗಳೇನೂ ಇಲ್ಲ. ಮಾಹೇಶ್ವರನೊಬ್ಬನು ಮನೆಗೆ ಬಂದಾಗ

ಆರುವುಂ ಕಾಣ್ಬುದಕೆ ಮುನ್ನವಾರೋಗಿಪುದು
ಆರುವರಿಯದ ತೆರದಿ ತ್ವರಿತದಿಂ ಕರುಣಿಪುದು

*  *  *  *

ಘನಮಹಿಮ, ಹದುಳನಾರೈಸೆಂದು ರಾಗದಿಂ
ಮನೆಯವರ್ಕಂಡೊಡಂ ಕೊಲುಗೆನ್ನನೆನುತಲ್ಲಿ

ಎನ್ನುವ ಭೀತಿಪ್ರದರ್ಶನಕ್ಕೆ ಎಡೆಯಿಲ್ಲ. ಹರಿಹರನು ಕಾರಿಕಾಲಮ್ಮೆಯನ್ನು ಚಿತ್ರಿಸಿರುವುದು ಸರಸವೂ ವೀರಶೈವದೃಷ್ಟಿಯಿಂದ ಬಹಳ ಮನೋಹರವೂ ಆಗಿದೆ. ಆಕೆಯ ಗಂಡ ಭವಿ, ಅತ್ತೆಮಾವಂದಿರು ಭವಿಗಳು. ಸುತ್ತಲೂ ಭವಿಯ ಪ್ರಪಂಚ. ಕಾಕಸಂಘಾತದೊಳ್ ಸಿಕ್ಕಿರ್ದ ಕೋಕಿಲೆಯ ಪರಿಯಂತೆ' ಭವಿಗಳ ಮಧ್ಯದಲ್ಲಿ ಈಭಕ್ತೆ. ತನ್ನ ಭಕ್ತಿಯನ್ನರಿಯದೆ ಈಭವಿಗಗಳು ಏನು ಹಿಂಸೆ ಮಾಡುವರೊ ಎನ್ನುವ ಭಯ. ಅತ್ತೆಯ ಮನೆಯಲ್ಲಿ ದುಡಿಯುತ್ತಿರುವ ಈತೊತ್ತು ಪೂಜೆಗೂ ಧ್ಯಾನಕ್ಕೂ ವೇಳೆಯನ್ನೂ ಸ್ಥಳವನ್ನೂ ಎಲ್ಲಿಂದ ಕಾಣಬೇಕು? ಈ ಸಂಕಟಸ್ಥಿತಿಯಲ್ಲಿ ಕಾರಿಕಾಲಮ್ಮೆ ಸುಮ್ಮನಿರ್ದಳೇ? ಇಲ್ಲ. ನಿಜವಾದ ನಿಷ್ಠೆಗೆ ಎಲ್ಲವೂ ವೇಳೆಯೇ; ಎಲ್ಲವೂಸ್ಥಳವೇ. ಅಡಿಗೆ ಮಾಡುತ್ತಿರುವ ಈಸೊಸೆ ತತ್ವಮಯವಾಗಿ ಪೆಸರಿ ಮಾಡುತ್ತಿದಾಳೆ.

ಬೋನಮಂ ಮಾಡುವೆಡೆ ದೇವಾರ್ಚನಾಸ್ಥಳಂ
ಏನೆಂಬೆನಲ್ಲಿ ಸಿಂಹಾಸನಂ ಕರತಳಂ
ನೆನೆವ ಘನಚಿಂತೆ ಸಕಲಸ್ತೋತ್ರವಭವಂಗೆ
ಮನದ ನಿರ್ಮಳವಗ್ಘವಣಿ ಮಹಾದೇವಂಗೆ
ಕೆಯ್ಯ ಕೀರೆಯ ಪರಿಮಳದ ಪುಷ್ಪವಭವಂಗೆ
ಸುಯ್ಯ ಕಂಪೆ ಗುಗ್ಗುಳಧೂಪವಾಮಹಿಮಂಗೆ
ನೋಟವೇ ಬೆಳಗಿನಾರತಿ ಶಂಕರಂಗಲ್ಲಿ
ಊಟವಲ್ಲಿಯೆ ಸಮೆದ ಬೋನದೋಗರವಲ್ಲಿ
ಇಂತಾರುಮರಿಯದಂತಿರೆ ಶಿವನನರ್ಚಿಪಳು
ಇಂತು ಶಿವಭಕ್ತಿಯಂ ಮನದೊಳಗೆ ಪೆರ್ಚಿಪಳು

ಓವಿ ಸಾಧಿಸಿ ಬೆಳೆಯಿಸುವಳಲ್ಲಿ ಭಕ್ತಿಯಂ
ತೀವಿ ತುಳ್ಕಾಡಿ ಮುಚ್ಚುವಳಂಜಿ ಭಕ್ತಿಯಂ

* * * *

ಮನದೊಳಗೆ ಮನ್ನಿಸುವಳರ್ಚಿಸುವಳಾಡುವಳ್
ಮಾದೊಳಗೆ ನೋಡುವಳ್ ಮನದೊಳಗೆ ಪಾಡುವಳ್
ಮನದೊಳಗೆ ದೇವಂಗೆ ಬಿನ್ನಪಂ ಮಾಡುವಳ್
ಮನದೊಳಗೆ ಸಂಸಾರದಿರವಿಂಗೆ ಪೇಸುವಳ್
ಅನವರತ ಪರಮಚಿನ್ಮೂರ್ತಿ ಚಿಂತಾಮೌನಿ
ಅನಸೂಯೆ ಭಕ್ತ್ಯಭಿಮಾನಿ ಲಿಂಗಧ್ಯಾನಿ
ಮಾಡುವುದು ಕೆಲಸವದು ಪೂಜೆ ಸರ್ವೇಶಂಗೆ
ನೋಡುವುದು ಮನೆವಾರ್ತೆ ದರ್ಶನವದೀಶಂಗೆ
ತಾನರಿವಳಿಂದುಧರನರಿವನರಿವವರಿಲ್ಲ
ಏನೆಂಬೆನೀ ಪೂಜೆಯಂ ಶಂಭುವೇ ಬಲ್ಲ.

ಭಲೆ ! ಹರಿಹರ. ಕಸವನ್ನು ರಸವನ್ನಾಗಿ ಮಾಡಬಲ್ಲ ವರಕವಿ ! ಎಂದು ಆ ಮಹಾಕವಿಯ ಶೈಲಿಯನ್ನೇ ಅನುಸರಿಸಿ ಆತನನ್ನು ನಾವು ಹೊಗಳಬೇಕಾಗಿದೆ.

ಹರಿಹರನ ಸ್ಥಾನವನ್ನು ಆ ಪ್ರತಿಭೆಯೂ ಭಾವವೈವಿಧ್ಯವೂ ಹೇಗೆ ಏರಿಸುತ್ತವೆನ್ನುವುದನ್ನು ನೋಡಿದೆವಷ್ಟೆ. ಆದರೆ ಈ ಮಟ್ಟದಲ್ಲಿ ಕವಿ ಯಾವಾಗಲೂ ಇರುವುದಿಲ್ಲ. ಇದಕ್ಕೆ ಮುಖ್ಯವಾದ ಕಾರಣವೊಂದಿದೆ. ಹರಿಹರನಲ್ಲಿ ಉತ್ತಮವಾದ ಸಂಸ್ಕೃತಿಯಿಲ್ಲ. ಔಚಿತ್ಯಾನೌಚಿತ್ಯಗಳ ವಿಮರ್ಶೆಯೆ ಸಂಸ್ಕೃತಿಯ ಮುಖ್ಯ ಫಲ. ಪರಮತ ಸಹಿಷ್ಣುತೆ, ಗಾಂಭೀರ್ಯ ಉತ್ಸಾಹಕ್ಕೆ ಒಂದು ಮಿತಿ, ಇವೆಲ್ಲ ಸಂಸ್ಕೃತಿಯುಳ್ಳವನ ಲಕ್ಷಣಗಳು. ಹರಿಹರನಲ್ಲಿರುವ ಈ ದೋಷ ಆತನ ಬಾಯಿಂದ ಅನುಚಿತ ಪದಪ್ರಯೋಗಗಳನ್ನು ಮಾಡಿಸಿ ಬಿಡುತ್ತದೆ. ಚನ್ನಯ್ಯನ ರಗಳೆಯಲ್ಲಿ ಚೋಳರಾಜನು ಚನ್ನಯ್ಯನ ಗುಡಿಸಲಿಗೆ ಬರುತ್ತಾನಷ್ಟೆ. ಪರಮಭಕ್ತನಾದ ಚನ್ನಯ್ಯನ ಪಾದಗಳನ್ನು ಹಿಡಿದುಕೊಂಡು ಶರಣುಹೋಗುತ್ತಾನಷ್ಟೆ. ಪಾದಗಳನ್ನು ಬಿಡಬೇಕೆಂದು ಚನ್ನಯ್ಯನು ಬೇಡಿಕೊಂಡಾಗ ಆ ರಾಜನು ಹೇಳುವ ಮಾತುಗಳನ್ನು ನೋಡಿ.

ಎನೆ, ದೇವ, ದೇವನೊಲ್ದನ ಕುಲಂ ಸತ್ಕುಲಂ
ಘನಮಹಿಮನೊಲ್ದ ಜಾತಿಯೇ ಜಾತಿ ನಿರ್ಮಲಂ
ಶರ್ವನೊಡನುಂಡ ನಿಮ್ಮಯ ಜಾತಿಗಾಂ ಸರಿಯೆ
ಸರ್ವಜ್ಞ, **ನಿಮ್ಮ ಕೆರವಿಂಗೆನ್ನ ಶಿರಸರಿಯೆ.**

ಉದ್ಭಟದೇವರ ರಗಳೆಯಲ್ಲಿ ಆತನು ತನ್ನ ಸತಿಯೊಡನೆ ಪಂಥವನ್ನು ಕಟ್ಟಿ **ಕೊಂಡು** ತನ್ನ ಪುರವನ್ನೇ ಕೈಲಾಸಕ್ಕೆ ಒಯ್ದನಷ್ಟೆ. ಆತನ ಭಕ್ತಿಯ ದೆಸೆ ಯಿಂದ ಪುರವು ಆಕಾಶದಲ್ಲಿ ಪ್ರಯಾಣಮಾಡುತ್ತಲಿತ್ತು ಆದರೆ.

ಪುರವೇರುತ್ತಿರೆ ಪುರಜನರರಿಯರು
ಧರಣಿಯ ಜನ ಬೆರಗಾಗುತ್ತಿರ್ದರು.

ಇದು ಸಹಜವೇ. ಆದುದರಿಂದ ಉದ್ಭಟದೇವನ ಹೆಂಡತಿ ಪುರವೇರುತ್ತಿರ ವುದನ್ನು ಅರಿಯದಾದಳು. ಆಕೆ ಮಧ್ಯಾಹ್ನವಾಗಿಹೋಯಿತು, ನಿನ್ನ ಭಾಷೆ ಏನಾಯಿತು? ಎಂದು ಕೇಳುವ ಸಂಭ್ರಮವನ್ನು ನೋಡಿ

ಕಾಮಾರಿಯ ಸದ್ಭಕ್ತನನರಿಯದೆ
ಕಾಮಿನಿ ನುಡಿದಳ್ ಪೋಪುದನರಿಯದೆ
ಆದುದು ಮಧ್ಯಾಹ್ನವಿದೇನುದ್ಭಟ
ಪೋದುದು ನಿನ್ನಯ ಭಾಷೆಯುದುತ್ಕಟ.

ಹರಿಹರನ ಶೈಲಿ ಅನೇಕ ಕಡೆಗಳಲ್ಲಿ ಬಹಳ ಉತ್ತಮವಾಗಿ ಮಹಾಕವಿಯ ಪಂಥವನ್ನು ಹಿಡಿದು ಮುಂದುವರಿಯುತ್ತಿದ್ದರೂ ಈ ರೀತಿ ಅಲ್ಲಲ್ಲಿ ಅಸಂಸ್ಕೃತ ಲಕ್ಷಣಗಳು ತಲೆಹಾಕುತ್ತಿರುತ್ತವೆ.

ಹರಿಹರನ ಪದ್ಯಶೈಲಿಗಿಂತಲೂ ಗದ್ಯಶೈಲಿ ಉತ್ತಮವಾದುದು. ಕಥೆ ದೊಡ್ಡದಾಗಿರುವ ಸಂದರ್ಭದಲ್ಲಿ ಒಂದು ಸ್ಥಲವನ್ನು ಪದ್ಯದಲ್ಲಿಯೂ ಒಂದು ಸ್ಥಲವನ್ನು ಗದ್ಯದಲ್ಲಿಯೂ ಆತ ಬರೆಯುತ್ತಾನೆ. ಗದ್ಯದಲ್ಲಿ ಕಥೆಯನ್ನು ಹಿಂದೆ ಚಾವುಂಡರಾಯನು ಹೇಳಿದ್ದನು. ಆದರೆ ಹರಿಹರನ ಮನೋಹರ ವಾದ ಶೈಲಿ ಅಲ್ಲಿ ಕಂಡುಬರುವುದಿಲ್ಲ. ಕನ್ನಡ ಸಾಹಿತ್ಯದಲ್ಲಿ ಎಲ್ಲಿಯೂ ಆ ಗದ್ಯದ ಓಟ, ಸೊಗಸು, ಬಿಗಿ, ಶಕ್ತಿ ಕಂಡುಬರುವುದಿಲ್ಲವೆಂದು ಧಾರಾಳ ವಾಗಿ ಹೇಳಬಹುದು. ಹರಿಹರನು ಹೀಗೆ ಹೊಸ ಮಾದರಿಯ ಗದ್ಯನಿರ್ಮಾಣ ಕನಾಗಿ ಸಾಹಿತ್ಯ ಪ್ರಪಂಚದಲ್ಲಿ ಒಬ್ಬ ಅಭಿನವ—ಬ್ರಹ್ಮನಾಗಿದ್ದಾನೆ.

ಒಟ್ಟಿನಲ್ಲ ಹರಿಹರನು ಮಹಾಕವಿ. ಕಥೆ ಹೇಳುವುದರಲ್ಲಿ ನಿಸ್ಸೀಮನು. ಮಿತಿಮೀರಿದ ಅಲಂಕಾರಭಾರದಿಂದ ಜಗ್ಗಿಜಗ್ಗಿ ಅಡಿಯಿಡಲಾರದ ಚಂಪೂ ಕಾವ್ಯದ ಕಥಾಶಿಶುವು ಇಲ್ಲಿ ಕಂಡುಬರುವುದಿಲ್ಲ. ಇಲ್ಲಿ ಕಂಡುಬರುವುದು ಸಹಜಸೌಂದರ್ಯವತಿಯೂ ಬೆಡಗಿನ ನಡಿಗೆಯುಳ್ಳವಳೂ ಆದ ಮುಗ್ಧರಮಣಿ.

ತೊಡಿಗೆಯ ನಿನದಂ ವಾದ್ಯಗುಡುತ್ತಿರೆ
ನಡೆ ಸುಗತಿಗಳಂ ಮೇಳೈಸುತ್ತಿರೆ

ಎನ್ನುವ ಪದ್ಮಾವತಿಯ ಸೌಂದರ್ಯವರ್ಣನೆಯ ಮಾತುಗಳು ಹರಿಹರನ ಕಥಾಸರಣಿಗೆ ಚೆನ್ನಾಗಿ ಅನ್ವಯಿಸುತ್ತವೆ. ಈ ಕಥಾರಮಣಿ ನಡೆಯುತ್ತಿದ್ದರೆ

ಮುಸುಕಿನೊಳು ಸಿಲುಕಿ ನಿಲುವರ್ ಭ್ರಮಿಸಿಯಲ್ಲಲ್ಲಿ
ನಸುನೋಟದೊಳ್ ಸೋಲ್ವನವಯುವರ್ ಕೆಲರಲ್ಲಿ
ನೇವುರದ ನುಣ್ದನಿಯೊಳೆಳೆವುತಿರ್ಪರ್ ಕೆಲರು
ಭಾವಕದ ನಡೆಯೊಳಗೆ ಸಿಕ್ಕಿ ನಿಲುವರ್ ಕೆಲರು

ಎಂಬ ಕಾಮಲತಾಗಮನದ ವರ್ಣನೆ ನಮ್ಮ ಮನಸ್ಸಿಗೆ ಬರುತ್ತದೆ.

ಹರಿಹರನನ್ನು ಇಂಗ್ಲೀಷು ಕವಿಗಳಿಗೆ ಹೋಲಿಸಬಹುದಾದರೆ ಆತನು ಚಾಸರ್. ಇಂಗ್ಲೀಷ್ ಸಾಹಿತ್ಯದಲ್ಲಿ ಆಂಗ್ಲೋ ಸಾಕ್ಸನ್ ಪ್ರಭಾವವು ತಪ್ಪಿ ಶುದ್ಧ ಇಂಗ್ಲೀಷ ಶೈಲಿಯ ಸಂಪ್ರದಾಯಕ್ಕೆ ಹೇಗೆ ಚಾಸರ್ ಆಚಾರ್ಯನಾದನೋ ಹಾಗೆ ಚಂಪೂಪ್ರಭಾವವು ತಪ್ಪಿ ಶುದ್ಧ ಕನ್ನಡದ ಹಾಡಿನ ಶೈಲಿಯ ಸಂಪ್ರದಾಯಕ್ಕೆ ಹರಿಹರನು ಆಚಾರ್ಯನಾಗಿದ್ದಾನೆ. ಹೊಸ ಛಂದಸ್ಸಿನ ಉಪಯೋಗದಲ್ಲಿ, ಹೊಸ ಗದ್ಯದ ನಿರ್ಮಾಣದಲ್ಲಿಯೂ, ವರ್ಣನೆಯಲ್ಲಿಯೂ, ಕಥಾವಿವರಣೆಯಲ್ಲಿಯೂ ನಮಗೇ ಆಶ್ಚರ್ಯವುಂಟಾಗುವಂತೆ ಇವರಿಬ್ಬರಿಗೂ ಬಹಳ ಮಟ್ಟಿಗೆ ಹೋಲಿಕೆಯಿದೆ. ಶರಣರಗಳೆಯು ಒಂದು ರೀತಿಯಲ್ಲಿ ಕಾಂಟರ್‌ಬರಿ ಟೇಲ್ಸ್.

ವೀರಶೈವಮತದ ಚರಿತ್ರೆಯಲ್ಲಿಯೂ ಕನ್ನಡ ಸಾಹಿತ್ಯಚರಿತ್ರೆಯಲ್ಲಿಯೂ ಹರಿಹರನು ಒಂದು ಹೆಗ್ಗುರುತು. ಈ ಮಹಾಕವಿಗೆ ಧರ್ಮಾಂಧತೆ ಸ್ವಲ್ಪ ಕಡಿಮೆಯಾಗಿದ್ದು, ಅದನ್ನು ಸಮತೂಗಿಸುವುದಕ್ಕೆ ಸಂಸ್ಕೃತಿಯ ಭಾರ ಸ್ವಲ್ಪ ಹೆಚ್ಚಾಗಿದ್ದ ಪಕ್ಷದಲ್ಲಿ ಎಷ್ಟು ಚೆನ್ನಾಗಿರುತ್ತಿತ್ತು. ಪೆರಿಯ

ಪುರಾಣದ ಕಥೆಗಳಿಗಿಂತ ಶರಣರಗಳೆಯ ಕಥೆಗಳು ಅನೇಕವು ಹೆಚ್ಚು ಸ್ವಾರಸ್ಯವುಳ್ಳವಾಗಿವೆ. ಹರಿಹರನು ತೋರಿಸಿರುವ ವರ್ಣನೆಗಳ ವಿಸ್ತಾರ ಭಾವವೈವಿಧ್ಯಗಳಾದರೋ ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತವೆ. ಆತನ ಪ್ರತಿಭೆಯ ಮಹೇಂದ್ರಜಾಲದಿಂದ ಈಶ್ವರನೂ ಕೈಲಾಸವೂ ಗಣಪದವಿಯೂ ನಮ್ಮ ಹಸ್ತಗತವಾಗಿವೆ; ನಾಸ್ತಿಕನು ಆಸ್ತಿಕನಾಗಿ ಆಸ್ತಿಕನು ಪರಮಶರಣನಾಗಿ ಪರಿಣಾಮಹೊಂದುತ್ತಾರೆ. ಹರಿಹರಮಹತ್ವವನ್ನು ರಾಘವಾಂಕನು ಕುಮಾರವ್ಯಾಸನಿಗೆ ನಿರೂಪಿಸಿದನೆಂದು ಚಿಕ್ಕನಂಜೇಶನು ಬರೆದಿದ್ದಾನಷ್ಟೆ. ಅದೇಕೆ ಹಾಗೆ ಬರೆದನೋ ? ವೀರಶೈವಸಾಹಿತ್ಯದ ಕುಮಾರವ್ಯಾಸನು ಬ್ರಾಹ್ಮಣ ಸಾಹಿತ್ಯದ ಕುಮಾರವ್ಯಾಸನನ್ನು ಮೀರಿಸಿದವನೆಂದು ತಿಳಿಸುವುದಕ್ಕಾಗಿಯೇ ? ನಮಗೆ ತಿಳಿಯದು. ಇಬ್ಬರಲ್ಲಿಯೂ ಕೆಲವು ಸಾಮಾನ್ಯ ಲಕ್ಷಣಗಳಿವೆ. ಆದರೆ ಅವರವರಿಗೆ ಅಂತರವೂ ಬೇಕಾದಷ್ಟಿದೆ.

ಹರಿಹರನು ಅಸಾಧಾರಣನಾದ ಕವಿ. ಕನ್ನಡಿಗರು ಇನ್ನೂ ಆತನ ಪರಿಚಯವನ್ನು ಸಂಪೂರ್ಣವಾಗಿ ಮಾಡಿಕೊಂಡಿಲ್ಲ. ಶರಣರಗಳೆಯ ಮೂಲಕ ಈ ಪರಿಚಯ ಹೆಚ್ಚುತ್ತಹೋದಂತೆಲ್ಲ ಆತನಲ್ಲಿ ಪ್ರೀತಿಯೂ ಗೌರವವೂ ಹೆಚ್ಚುತ್ತಹೋಗುತ್ತವೆ. ಕುಮಾರವ್ಯಾಸಭಾರತ ಲಕ್ಷ್ಮೀಶನ ಜೈಮಿನಿಭಾರತ ಮುದ್ರಣವಾಗಿ ಜನಗಳಿಗೆ ದೊರೆತಂತೆ ಶರಣರಗಳೆಯೂ ಹಿಂದೆಯೇ ದೊರೆಯಬೇಕಾಗಿತ್ತು.* ಹರಿಹರನ ವಿಚಾರದಲ್ಲಿ ಸ್ವಲ್ಪಮಟ್ಟಿಗೆ 'ರಗಳೆಯ ಕವಿ' ಎನ್ನುವ ಸಂಕೋಚಭಾವವೂ, ಧರ್ಮಾಂಧನೆಂಬ ದೋಷಭಾವವೂ ಇದ್ದೀತು. ಇವುಗಳಿಂದ ಆತನ ಕಾವ್ಯವನ್ನು ನಾವು ನೋಡದಿದ್ದರೆ ಕವಿಗೆ ಅನ್ಯಾಯ ಮಾಡಿದಂತಾಗುವುದಲ್ಲದೆ, ನಮಗೂ ದೊಡ್ಡ ನಷ್ಟವುಂಟಾಗುತ್ತದೆ. ಬೆರಳುಗಳಲ್ಲಿ ಮಾತ್ರ ಎಣಿಸಬಹುದಾದ ಮಹಾಕವಿಗಳಲ್ಲಿ ಹರಿಹರನು ಖಂಡಿತವಾಗಿಯೂ ಒಬ್ಬನು. ಕಾಲಕ್ರಮದಲ್ಲಿ ನಂಬಿಯಣ್ಣನ ರಗಳೆ, ಬಸವರಾಜದೇವರ ರಗಳೆ ಮುಂತಾದುವನ್ನು ಹೆಚ್ಚು ಹೆಚ್ಚಾಗಿ ಪ್ರಚಾರ

---

*ಬಿಜಾಪುರದ ರಾವ್‌ಸಾಹೇಬ ಹಳಕಟ್ಟಿಯವರು ಹರಿಹರನ ರಗಳೆಯನ್ನು—ಕೆಲವು ಭಾಗ ಮುದ್ರಿಸಿದ್ದಾರೆ. ಆದರೆ ಇನ್ನೂ ಮುದ್ರಣವಾಗಬೇಕಾದ ಭಾಗ ಬಹಳ ಉಳಿದಿದೆ. 'ಮಹಾದೇವಿಯಕ್ಕನ ರಗಳೆ' ಸದ್ಧರ್ಮ ದೀಪಿಕೆಯ ಗ್ರಂಥಮಾಲೆಯಲ್ಲಿ ಅಚ್ಚಾಗಿದೆ.

ಮಾಡುತ್ತ ಬಂದ ಹಾಗೆಲ್ಲ ಕುಮಾರವ್ಯಾಸನೊಂದಿಗೆ ಹರಿಹರನು ಸ್ಪರ್ಧಿಸುತ್ತ ಬರುವನು. ಹರಿಹರನು ಹುಟ್ಟುಕವಿ. ವಜ್ರದ ಗಣಿಯಿಂದ ಹೊರಬಿದ್ದ ಈ ಮಹಾವಜ್ರವನ್ನು ಕುಶಲತೆಯು, ಸಂಸ್ಕೃತಿಯ ಕೈಯಿಂದ ಸಾಣೆಗೆ ಹಿಡಿಸಿ ಏಣುಗಳು ಸವೆದು, ದೋಷಭಾಗಗಳು ಕತ್ತರಿಸಿ ಹೋಗುವಂತೆ ಮಾಡಿದ್ದಿದ್ದರೆ ಕನ್ನಡಸಾಹಿತ್ಯದ ಸೌಭಾಗ್ಯಕ್ಕೆ ಎಣೆಯೇ ಇರುತ್ತಿರಲಿಲ್ಲ.

**ಎಂ. ಆರ್. ಶ್ರೀ.**

---

# .ಹರಿಹರನ ರಗಳೆಗಳು

## ಷಟ್ಪದಿ ಕಾವ್ಯಗಳಿಗೆ ಮಾತೃಕೆಗಳು.

ಹನ್ನೆರಡನೆಯ ಶತಮಾನದಲ್ಲಿ ಕರ್ಣಾಟಕದಲ್ಲಿ ಆದ ಕ್ರಾಂತಿಯು ಹೊನ್ನಿನಕ್ಷರಗಳಲ್ಲಿ ಬರೆದಿಡುವಂಥಾದ್ದಾಗಿದೆ. ಈ ಕ್ರಾಂತಿಯು ವೀರಶೈವ ಮತಕ್ಕಷ್ಟೇ ಸಂಬಂಧಿಸಿದುದಲ್ಲ. ಕರ್ಣಾಟಕದಲ್ಲಿ ಎಲ್ಲ ಮತಗಳ ಜೀವಾಳವನ್ನು ತಗಲಿದುದು. ಅದು ಮತಮಾತ್ರಕ್ಕೆ ಸಂಬಂಧಪಟ್ಟ ಕ್ರಾಂತಿಯಲ್ಲ. ಜನಸಾಮಾನ್ಯಕ್ಕೆ ಸಂಬಂಧಪಟ್ಟ ಸರ್ವವಿಷಯಗಳಿಗೂ ತಗಲಿದ ಕ್ರಾಂತಿ. ಸರ್ವತೋಮುಖವಾದದ್ದು. ಅದು ಭಾವನಾರಂಗದಲ್ಲಿಯೇ ನಿಂತು ಮುಂದೆ ಬುಡಮೇಲಾದ ಕ್ರಾಂತಿಯಲ್ಲ ಕಾರ್ಯರಂಗಕ್ಕಿಳಿದು ಕಳೆಗೊಂಡು ಕಡೆತನಕ ಕಾಲೂರಿ ನಿಂತ ಕಾರ್ಯಗಳಿಂದ ಕೂಡಿದ ಕ್ರಾಂತಿ. ಪ್ರಸ್ತುತದಲ್ಲಿ ನಾವು ವಿಚಾರ ಮಾಡುವುದು ಈ ಕ್ರಾಂತಿಯಲ್ಲ ಅದಕ್ಕೆ ಅಂಗವಾದ ಸಾಹಿತ್ಯ ಕ್ರಾಂತಿಯಲ್ಲಿ ಕೈದೀಪವನ್ನು ಹಿಡಿದು ನಿಂತಿರುವ "ಕ್ರಾಂತಿಕಾರ ಹರಿಹರೇಶ್ವರನ ರಗಳೆಗಳು ಷಟ್ಪದಿಕಾವ್ಯಗಳಿಗೆ ಮಾತೃಕೆಗಳು" ಎಂಬುವ ವಿಷಯ.

ಕನ್ನಡದಲ್ಲಿ ನಮಗೆ ದೊರೆಯುವ ಎಲ್ಲಕ್ಕೂ ಹಿಂದಿನ ಛಂದೋಗ್ರಂಥವೆಂದರೆ ನಾಗವರ್ಮನ ಛಂದೋಂಬುಧಿ. ಇದು ಕ್ರಿ. ಶ. ೯೯೦ ರಲ್ಲಿ ಹುಟ್ಟಿದ ಗ್ರಂಥ. ಇದರಲ್ಲಿ ಸಂಸ್ಕೃತದಲ್ಲಿಯ ಸಮವೃತ್ತವನ್ನು ಹಿಡಿದುಕೋಡು ಶುದ್ಧ ಕನ್ನಡದ ರಗಳೆ ತ್ರಿಪದಿ, ಅಕ್ಕರ, ಪದ, ಷಟ್ಪದಿ ಮುಂತಾದವುಗಳ ಲಕ್ಷಣಗಳನ್ನು ಕೊಟ್ಟಿದೆ. ಇವರ ಮೇಲಿಂದ, ಈ ಎಲ್ಲ ರೂಪದ ಕಾವ್ಯಗಳು ನಾಗವರ್ಮನ ಹಿಂದೆ ಇದ್ದುವೋ ? ಅಥವಾ ಅವು ನಾಗವರ್ಮನ ಕಾಲದ ಮತ್ತು ಅವನ ಹಿಂದಿನ ಕವಿಗಳಿಗೆ ಗೊತ್ತಿದ್ದುವೋ ಎಂಬ ಪ್ರಶ್ನೆ ಮುಂದೆ ಬರುವುದು. ನಾಗವರ್ಮನ ಛಂದೋಂಬುಧಿಯ ಹಸ್ತಪ್ರತಿಗಳಲ್ಲಿ ಒಂದಕ್ಕೊಂದು ಸಂಬಂಧವಿಲ್ಲದಂತರಂಗಗಳನ್ನು ನೋಡಲಾಗಿ ಅವುಗಳಲ್ಲಿಕೆಲವು ಪ್ರಕ್ಷಿಪ್ತ ಭಾಗಗಳಿವೆ ಎಂದು ತಿಳಿಯಲಿಕ್ಕೆ ಅವಕಾಶವಿದೆ. ಮತ್ತು ೧೧೬೦ರ ಹಿಂದೆ ಯಾವಕವಿಯೂ 'ರಗಳೆ' 'ತ್ರಿಪದಿ' 'ಷಟ್ಪದಿ' ರೂಪಗಳಲ್ಲಿ ಸಮಗ್ರ

ವಾದ ಗ್ರಂಥಗಳನ್ನು ಬರೆದಿಲ್ಲ. ಆದುದರಿಂದ ಇವೆಲ್ಲ ರೂಪಗಳು ೧೨ನೆಯ ಶತಮಾನದಲ್ಲಿ ಹುಟ್ಟಿದುವೆಂದು ಸ್ಥೂಲವಾಗಿ ಹೇಳಬಹುದು. ಮತ್ತು ಯಾವ ಯಾವ ಕವಿಯು ಯಾವ ಯಾವ ರೂಪದಲ್ಲಿ ಸಮಗ್ರವಾದ ಗ್ರಂಥವನ್ನು ಬರೆದನೋ ಆ ಆ ಕವಿಯು ಆ ರೂಪಗಳಿಗೆ 'ಜನಕ'ನೆಂದು ಹೇಳಬಹುದು. ಇದೇ ನಿಯಮವನ್ನಿಟ್ಟುಕೊಂಡು ಯಾವ ರೂಪವು ಮೊದಲು ಹುಟ್ಟಿತು, ಯಾವ ರೂಪವು ಹಿಂದೆ ಹುಟ್ಟಿತೆಂದು ನಿರ್ಧರಿಸಬಹುದು. ರಗಳೆಗಳು ಮಹಾಕವಿಗಳೆನಿಸಿಕೊಂಡ ಪಂಪ, ರನ್ನ, ಅಗ್ಗಳ, ಅಂಡಯ್ಯ ಮುಂತಾದ ಕವಿಗಳಲ್ಲಿ ಉಪಲಬ್ಧವಿರುತ್ತವೆ. ಆದರೆ ಅವರು ಬಹು ಸ್ವಲ್ಪ ಕಡೆಗೆ ಮಾತ್ರ ಅವುಗಳನ್ನು ಉಪಯೋಗಿಸಿದ್ದಾರೆ. ಸಮಗ್ರ ಗ್ರಂಥಗಳನ್ನು ಅವುಗಳಲ್ಲ ರಚಿಸಿ ಅವುಗಳಿಗೆ ಸಾಹಿತ್ಯದಲ್ಲಿ ಬಹುಮಹತ್ವದ ಸ್ಥಾನವನ್ನು ಕೊಟ್ಟವನೆಂದರೆ ಹರಿಹರನು. 'ರಗಳೆಕವಿ' ಎಂಬ ಹಾಸ್ಯಾರ್ಥದ ಮಾತು ಅವನಿಗೆ ಹಚ್ಚಲ್ಪಟ್ಟಿತ್ತೆಂಬ ಐತಿಹ್ಯವನ್ನು ಅವನು ರಗಳೆಗಳ ಖಾಸ ತಂದೆಯಾಗದಿದ್ದರೂ ಸಾಕು ತಂದೆಯೆಂದೂ, ಮತ್ತು ಅವನ್ನು ಬೆಳಸಿ, ಊರ್ಜಿತಗೊಳಿಸಿ, ಉನ್ನತೆಗೊಯ್ದು ಪರಿಪೂರ್ಣತೆಗೆ ಮುಟ್ಟಿಸಿದನೆಂದೂ ಹೇಳಿ ಸತ್ಯಾರ್ಥವಾಗಿ ಪರಿಶೀಲಿಸುತ್ತೇವೆ.

ಯಾವುದಾದರೊಂದು ಪರಿವರ್ತನೆಯಾಗಲಿ, ಬದಲಾವಣೆಯಾಗಲಿ ಥಟ್ಟನೆ ಎದ್ದು ಬರುವುದಿಲ್ಲ. ಪ್ರತಿಕಾರ್ಯದ ಹಿಂದೆ ಒಂದು ಕಥೆ ಇರುತ್ತದೆ. ಇದು ಹಿಂದಿನಲ್ಲಿ ಬೇರು ಬಿಟ್ಟಿರುತ್ತದೆ. ಮತ್ತು ಮುಂದು ಎದುರಿನಲ್ಲಿ ಮೊಳಕೆಯೊಡೆದಿರುತ್ತದೆ. ಸಾಹಿತ್ಯದಲ್ಲಿಯ ರೂಪಗಳ ಪರಿವರ್ತನೆಯು ಇದನ್ನು ಅನುಸರಿಸಿಯೇ ಇರುತ್ತದೆ.

ರಗಳೆಗಳ ಪರಿವರ್ತನಾವಸ್ಥೆಯು ಒಂದು ದೊಡ್ಡ ಕಥೆಯೇ ಅದೆ. ರಗಳೆಗಳ ಮೊಳಕೆಯು ೧೧೬೦ರ ಹಿಂದೇ ಮೂಡಿತ್ತೆಂದು ಹೇಳಿದರೂ ವೀರಶೈವ ವಚನ ವಾಙ್ಮಯಾರಾಮವನ್ನು ಹೊಕ್ಕು ನೋಡಿದರೆ ಅಲ್ಲಿ ರಗಳೆಯು ಬಾಲಲೀಲೆಯ ಶೋಭೆಯನ್ನು ಸೂಸುತ್ತ ಸ್ವೇಚ್ಛೆಯಿಂದ ಸುಳಿದಾಡುತ್ತಿರುವುದನ್ನು ನಾವು ಕಾಣುವೆವು. ಅವುಗಳಲ್ಲಿ ರಗಳೆಯ ಹೊಳಪನ್ನು ಇಲ್ಲಿ ನೋಡಬಹುದು.

ತಾಮಸ ಮಸುಕಿ ಕಂಗಳ ಕೆಡಿಸಿತೆನ್ನ ಭಕ್ತಿ
ಕಾಮವೆಂಬ ಅಗ್ನಿಯಲ್ಲಿ ಮುರಿದಿಕ್ಕಿತೆನ್ನ ಭಕ್ತಿ
ಉದರಕ್ಕೆ ಕುದಿಕುದಿದು ಮುಂದುಗೆಡಿಸಿತೆನ್ನ ಭಕ್ತಿ
ಇದಿರನಾಶ್ರಯಿಸಿ ಹೋಯಿತೆನ್ನ ಭಕ್ತಿ

(ಬಸವಣ್ಣನವರ ವಚನಗಳು-೨೨)

ಆಧುನಿಕ ಸರಳರಗಳೆಗಳ ವಿಷಯವಾಗಿ ಶ್ರೀ. ಎ.ಆರ್. ಕೃಷ್ಣಶಾಸ್ತ್ರಿಗಳವರು ಹೀಗೆ ಅನ್ನುತ್ತಾರೆ "ಇದು ಹೊಸದಾದರೂ ಹಳೆಯದೇ. ಹಿಂದೆ ಇದೇ ಅಂತ್ಯ ಪ್ರಾಸ ಸಹಿತವಾಗಿದ್ದರೆ 'ಲಲಿತರಗಳೆ' ಎನ್ನಿಸಿಕೊಳ್ಳುತ್ತಿತ್ತು. ಈಗ ಅದೇ ಪ್ರಾಸರಹಿತವಾಗಿ ಸರಳರಗಳೆ ಯಾಗಿದೆ."

ಇನ್ನು ರಗಳೆಗಳು ಷಟ್ಪದಿಗಳಿಗಿಂತ ಮುಂಚಿತವಾಗಿಯೇ ಹುಟ್ಟಿ ಪ್ರಚಾರದಲ್ಲಿ ಬಂದುವೆಂಬ ಮಾತು ಸ್ಪಷ್ಟವಾದ ಮಾತು. ರಾಘವಾಂಕನ ಗುರುವೂ ಮತ್ತು ಮಾವನೂ ಆದ ಹರಿಹರನು ರಗಳೆಕವಿಯಾಗಿದ್ದರೆ ರಾಘವಾಂಕನು ಒಳ್ಳೆ ಶಿಷ್ಯನಂತೆ ತಾನೂ ತನಗೆ ಒಂದು ವಿಶೇಷ್ಯವನ್ನು ಪಡೆದುಕೊಂಡನು. ಅದು 'ಷಟ್ಪದಿಕವಿ' ಯೆಂಬುದು* ಈ ಷಟ್ಪದಿಗಳ ರೂಪವು ಮುಂದೆ ಬಹು ಪ್ರಚಾರದಲ್ಲಿ ಬಂದು ಚೆನ್ನಬಸವ-ಪುರಾಣದಲ್ಲಿ ಉರ್ಜಿತ ಸ್ಥಿತಿಯನ್ನು ಹೊಂದಿ ಜೈಮಿನಿಭಾರತದಲ್ಲಿ ಉನ್ನತ ಸ್ಥಿತಿಯನ್ನೇರಿದೆ.

ಇನ್ನು ಷಟ್ಪದಿಯು ರಗಳೆಯಿಂದ ಹೇಗೆ ಹುಟ್ಟಿತೆಂಬುದಕ್ಕೆ ಅವುಗಳ ರೂಪ ( ಛಂದಸ್ಸು ) ಮತ್ತು ಶೈಲಿಗಳಲ್ಲಿ ಕಂಡುಬರುವ ಕೆಲವು ಕುರುಹುಗಳನ್ನು ಇಲ್ಲಿ ಕೊಡುತ್ತೇವೆ. ನಾಗವರ್ಮನು ತನ್ನ ಛಂದೋಂಬುಧಿಯಲ್ಲಿ ರಗಳೆಯ [ರಘುಟಾ] ಲಕ್ಷಣವನ್ನು ಈ ಪ್ರಕಾರವಾಗಿ ಹೇಳಿದ್ದಾನೆ

ಗಣನಿಯಮ ವಿಪರ್ಯಾಸದೊ |
ಳೆಣೆವಡೆದೊಳ್ಪೆಸೆಯ ಮಾತ್ರಸಮನಾಗಿ ಗುಣ್ ||
ಗುಣಿಯ ಮತದಿಂದ ತಾಳದ |
ಗಣನೆಗೊಡಂಬಟ್ಟೊಡದುವೆ ರಘುಟಾಬಂಧ ||

---

* ಬಸವ, ಚನ್ನಬಸವರು ತಮ್ಮ ಮಂತ್ರಗೌಪ್ಯ, ಪದಮಂತ್ರಗೌಪ್ಯಗಳಲ್ಲಿ ಕುಸುಮ ಭೋಗಷಟ್ಪದಿಗಳನ್ನು ಉಪಯೋಗಿಸಿದ್ದಾರೆ.

ಗಣನಿಯಮವಿಲ್ಲದೆ ಮಾತ್ರೆಗಳು ಸಮನಾಗಿ ತಾಳಕ್ಕೂ ಲಯಕ್ಕೂ ಸರಿ ಹೋಗುತ್ತಿದ್ದರೆ ಅದು ರಗಳೆ ಎಂದೆನಿಸಿಕೊಳ್ಳುವುದು. ತಮಿಳವಾಙ್ಮಯದಲ್ಲಿ ಅನೇಕ ತರದ ರಗಳೆಗಳು ಇರುವುವಂತೆ. ಆದರೆ ಕನ್ನಡದಲ್ಲಿ ಮೂರು ತರದ ರಗಳೆಗಳೇ ಪ್ರಸಿದ್ಧ

ಮಂದಾನಿಲ:— UUUU, UUUU, UUUU, UUUU,

ಲಲಿತ:— UUUUU, UUUUU, UUUUU, UUUUU,

ಉತ್ಸಾಹ:— UUU,UUU, UUU,UUU, UUU,UUU, UUU;UUU.

ಷಟ್ಪದಿಗೂ ಸ್ಥೂಲವಾಗಿ ಗಣನಿಯಮವಿಲ್ಲ. ಅವು ಮಾತ್ರಾ ನಿಯಮಕ್ಕೂ ತಾಳಕ್ಕೂ ಸರಿಹೋಗುವಂತೆ ರಚಿಸಲ್ಪಡುತ್ತವೆ. ಅವುಗಳಲ್ಲಿ ಆರು ಪಾದಗಳು ೧, ೨, ೪, ೫ನೆಯ ಪಾದಗಳು ಸರಿ ಮತ್ತು ೩, ೬ನೆಯ ಪಾದಗಳು ಸಮ ಷಟ್ಪದಿಗಳು ಆರು ತರ ಇರುತ್ತವೆ. ಅವು ಹೀಗೆ:-(೧)ಶರ, (೨)ಕುಸುಮ (೩) ಭೋಗ (೪) ಭಾಮಿನಿ (೫) ಪರಿವರ್ಧಿನಿ (೬) ವಾರ್ಧಕ

ಶರಷಟ್ಪದಿಯು ಮಂದಾನಿಲ ರಗಳೆಯ ಛಂದಸ್ಸಿನ ಮಾರ್ಪಾಡು. ಅದು ಹೀಗೆ:—

ಮಂದಾನಿಲ:— UUUU, UUUU, UUUU, UUUU,

ಶರಷಟ್ಪದಿ:— UUUU, UUUU,

UUUU, UUUU,

UUUU, UUUU, UUUU, UU.

ಮೂರೂ ತರದ ರಗಳೆಗಳಲ್ಲಿ ಆದಿ, ಮಧ್ಯ ಮತ್ತು ಅಂತ್ಯಪ್ರಾಸಗಳು ಬಹು ತರವಾಗಿ ಕಂಡುಬರುತ್ತವೆ. ಮತ್ತು ಡಾ. ಕಿಟೆಲ್‌ರವರ ಛಂದಿಸ್ಸಿನಲ್ಲಿ ಮಧ್ಯದಲ್ಲಿ ಯತಿ ಇರುವದನ್ನು ನಾವು ನೋಡುತ್ತೇವೆ. ಆದುದರಿಂದ ಮಂದಾನಿಲದ ಒಂದು ಪಾದವನ್ನು ತೆಗೆದುಕೊಂಡು ಅದರಲ್ಲಿ ಎರಡು ಸಮ ಭಾಗ ಮಾಡಿ ಶರಷಟ್ಪದಿಯ ಮೊದಲಿನ ಎರಡು ಪಾದಗಳನ್ನೂ ಮತ್ತು ಮಂದಾನಿಲದ ಒಂದು ಪಾದದಲ್ಲಿಯ ಎರಡು ಮಾತ್ರೆಗಳನ್ನೂ ಕಡಿಮೆಮಾಡಿ ಶರಷಟ್ಪದಿಯ ಮೂರನೆಯ ಪಾದವನ್ನೂ ರಚಿಸಲಿಕ್ಕೆ ಬಹು ಸುಲಭವಾಯಿತು.

ಹೀಗೆಯೆ:—

ಲಲಿತ ರಗಳೆ:— ᑌᑌᑌᑌᑌ, ᑌᑌᑌᑌᑌ, ᑌᑌᑌᑌᑌ, ᑌᑌᑌᑌᑌ.

ಕುಸುಮ ಷಟ್ಪದಿ:— ᑌᑌᑌᑌᑌ, ᑌᑌᑌᑌᑌ.
ᑌᑌᑌᑌᑌ, ᑌᑌᑌᑌᑌ.
ᑌᑌᑌᑌᑌ, ᑌᑌᑌᑌᑌ, ᑌᑌᑌᑌᑌ, ᑌᑌ.

ಉತ್ಸಾಹ:– ᑌᑌᑌ, ᑌᑌᑌ, ᑌᑌᑌ, ᑌᑌᑌ, ᑌᑌᑌ, ᑌᑌᑌ, ᑌᑌᑌ, ᑌᑌᑌ.

ಭೋಗಷಟ್ಪದಿ:—ᑌᑌᑌ, ᑌᑌᑌ, ᑌᑌᑌ, ᑌᑌᑌ.
ᑌᑌᑌ, ᑌᑌᑌ, ᑌᑌᑌ, ᑌᑌᑌ.
ᑌᑌᑌ, ᑌᑌᑌ, ᑌᑌᑌ, ᑌᑌᑌ, ᑌᑌᑌ, ᑌᑌᑌ. ᑌᑌ.

ಭಾಮನಿಷಟ್ಪದಿಯು ಮಂದಾನಿಲ ಉತ್ಸಾಹ ರಗಳೆಗಳ ಬೆರಿಕೆ. ಪರಿವರ್ಧಿನಿ ಷಟ್ಪದಿಯ ೧ನೆಯ ೨ನೆಯ ಪಾದಗಳು ಮಂದಾನಿಲರಗಳೆಯ ಒಂದೊಂದುಪಾದ ಮತ್ತು ಮೂರನೆಯ ಪಾದ ಅದರ ಒಂದೂವರೆ ಪಟ್ಟು ಹೀಗೆ ಒಂದರಲ್ಲೊಂದು ಬೆರಿಕೆ ಮಾಡುತ್ತಾ ಹೋದರೆ ಇನ್ನೂ ಅನೇಕ ಷಟ್ಪದಿರೂಪಗಳು ಹುಟ್ಟಬಹುದು, ಇದಲ್ಲದೆ ಆಧುನಿಕ ಕವನಗಳಲ್ಲಿ ಷಟ್ಪದಿ ಖಂಡಗಳು ಮೈದೋರಿವೆ.

ಇನ್ನು ಷಟ್ಪದಿ ಕಾವ್ಯಗಳಲ್ಲಿ ಕಂಡುಬರುವ ಪದಜೋಡಣೆ ಮತ್ತು ಶೈಲಿಗಳು ರಗಳೆಯಿಂದ ಹೇಗೆ ಬಂದುವೆಂಬುದಕ್ಕೆ ಒಂದೇ ಒಂದು ಉದಾಹರಣೆಯನ್ನು ಕೊಟ್ಟು ಬೆಳೆಯುತ್ತಿರುವ ನಮ್ಮ ಬರಹವನ್ನು ನಿಲ್ಲಿಸುತ್ತೇವೆ.

ಪುಟವೆದ್ದು ಹೊಂಗುತಂ ದಳವೇರಿ ಹಿಗ್ಗುತಂ
ನಟ್ಟೆರ್ದೆ ನೋಟದಿಂದೋಜೆಯಂ ಮೀರುತಂ |
ಭವದಿಂದ ಹಿಂಗುತಂ ನೆನಹಿಂದ ಹಿಗ್ಗುತಂ
ಬೆವರುತಂ ಬಿಕ್ಕುತಂ ತೇಗುತಂ ತೂಗುತಂ |
ಕಮವಳಿದು ಸುಳಿದು ಸುಖಿಯಾಗುತಂ ಬೀಗುತಂ
ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ |

**ಬಸವರಾಜದೇವರ ರಗಳೆ.**

“ ನಡೆಗೊಳ್ಳುಂಡು ಬಾಯಾರ್ವಳಂ ಚೀರ್ವಳಂ |
ಕಡಲಿಡುವ ಕಂಬನಿಯೊಳಾಳ್ವಳಂ ಬೀಳ್ವಳಂ |

ಪುಡಿಯೊಳ್ಪೊರಳ್ದು ಬಸವಳಿವಳಂ ಸುಳಿವಳಂ ಭರತಾನುಜನ
ಗಲ್ದು ||
ಅಡಿಗಡಿಗೆ ತಿರುತಿರುಗಿ ನೋಡುವಂ ಬಾಡುವಂ |
ಬಿಡದೆ ಬಿಸುಸುಯ್ದು ಬೇಡಾದಪಂ ಪೋದಪಂ |
ಪೆಡೆಮರಳ್ವಂ ನಿಲ್ವನಳಲುವಂ ಬಳಲುವಂ ಬಟ್ಟೆಯೊಳ್ದಿಟ್ಟಿ
ಗೆಟ್ಟು ”

ಜೈಮಿನಿಭಾರತ.

---

# ಹರಿಹರನ ಶೈಲಿ.



ಪರಂಪರೆಗನುಸಾರವಾಗಿ ಹರಿಹರನು ಗಿರಿಜಾಕಲ್ಯಾಣವೆಂಬ ಚಂಪೂ ಕಾವ್ಯವನ್ನು ಬರೆದನು. ಅದು ಅವನ ಸ್ವತಂತ್ರವೃತ್ತಿಗೆ ಸರಿಹೋಗಲಿಲ್ಲವಾದುದರಿಂದ ಶಿವಗಣದ ಚರಿತ್ರೆಗಳನ್ನು ರಗಳೆರೂಪವಾಗಿ ಬರೆದನು. ಸಾಂಪ್ರದಾಯವನ್ನು ಮಿಕ್ಕಿಹೋದ ಕನ್ನಡಕವಿಗಳಲ್ಲಿ ಈತನು ಮೊದಲನೆಯವನು. ಹೊಸ ಮಾರ್ಗವನ್ನು ತೋರಿಸಿಕೊಟ್ಟು ಚರಿತ್ರೆಗಳನ್ನು ಈ ರೂಪದಿಂದ ಅಂದವಾಗಿ ಬರೆಯಲು ಅನುಕೂಲವೆಂದು ಧೈರ್ಯವಾಗಿ ಮುಂದೆ ಬಂದವನೀತನು. ಸ್ವತಂತ್ರವಾದ ಹೊಸ ವೃತ್ತಿಗೆ ಈಗಿನಂತೆ ಆಗಲೂ ಅನಾದರ. ಆದುದರಿಂದ ಜನರು ಈತನಿಗೆ ರಗಳೆಯ ಕವಿಯೆಂದರು. ಅದರಿಂದ ಆತನಿಗೇನೂ ಕುಂದಕವಿಲ್ಲ. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಬಸವರಾಜದೇವರ ರಗಳೆಯ ಪೀಠಿಕೆಯಲ್ಲಿ ಈ ವಿಷಯವಾಗಿ ಹೀಗೆಂದಿದ್ದಾರೆ:– ''ರಗಳೆಗಳನ್ನು ಬರೆದದ್ದಕ್ಕಾಗಿ ಹರಿಹರನು ತಲೆಬಗ್ಗಿಸಬೇಕಾದದ್ದೇನೂ ಇರಲಿಲ್ಲ. ಒಂದು ವೇಳೆ ಆತನು ಗಿರಿಜಾಕಲ್ಯಾಣವನ್ನು ರಚಿಸದೆಯೇ ಹೋಗಿದ್ದರೂ ಆತನಿಗೆ ಕನ್ನಡಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿ ಬರುತ್ತಿರಲಿಲ್ಲ. ಸಾಹಿತ್ಯದೃಷ್ಟಿಯಿಂದ ಈ ರಗಳೆಗಳು ಅನೇಕ ಚಂಪೂಗ್ರಂಥಗಳಿಗಿಂತಲೂ ಹೆಚ್ಚು ಆದರಣೀಯವೂ ಗೌರವಾರ್ಹವೂ ಆಗಿವೆ.'' ಅದರಂತೆ ಕೆಲಮಟ್ಟಿಗೆ ಆತನ ಸಮಕಾಲೀನರಾದ ನೇಮಿಚಂದ್ರರುದ್ರಭಟ್ಟರ ಕಾವ್ಯಗಳಿಗಿಂತ ತುಸು ಭಿನ್ನರೂಪವಾದ ಗಿರಿಜಾಕಲ್ಯಾಣವು ತುಸು ಚಿಕ್ಕದಾದರೂ ಸೌಂದರ್ಯದಲ್ಲಿ ಅವುಗಳಿಗಿಂತ ಮಿಗಿಲಾದುದೆಂದೇ ಹೇಳಬೇಕಾಗುತ್ತದೆ. ಅದರಲ್ಲಿ ಅಷ್ಟಾದಶ ವರ್ಣನೆಗಳಿರಬಹುದು. ಆ ವರ್ಣನೆಗಳ ಮೂಲಕ ಅನಾವಶ್ಯಕವೆಂದು ಕಂಡುಬರಬಹುದಾದ ಒಂದೆರಡು ಸಂಗತಿಗಳಿರಬಹುದು. ಅವುಗಳಿಂದ ಕಾವ್ಯಕ್ಕೆ ದೋಷವುಂಟಾಗಿಲ್ಲ. ನೇಮಿಚಂದ್ರನ ಲೀಲಾವತಿಯಲ್ಲಿ ವರ್ಣನೆಯ ದೆಸೆಯಿಂದಲೇ ಅನೇಕಾನೇಕ ಅನಾವಶ್ಯಕ ಸಂಗತಿಗಳು ಬಂದುಬಿಟ್ಟಿವೆ. ಅವುಗಳಿಂದ ಕಥಾವಸ್ತುರಚನೆಯಲ್ಲಿ ದೋಷಗಳುಂಟಾಗಿವೆ. ಹರಿ

ಹರನು ವರ್ಣನೆಯ ಸಲುವಾಗಿ ಕಥಾವಸ್ತುವನ್ನು ಆಹುತಿ ಕೊಡುವವನಲ್ಲ. ರನ್ನನ ಗದಾಯುದ್ಧವು ಕನ್ನಡಕಾವ್ಯಸೃಷ್ಟಿಯಲ್ಲಿ ಒಂದು ಹೊಸರೂಪವೆತ್ತಂತೆ ಗಿರಿಜಾಕಲ್ಯಾಣವು ಹರಿಹರದೇವನ ಉದ್ದಾಮವೃತ್ತಿಯನ್ನೊಳಗೊಂಡ ಕ್ರಾಂತಿಕರ ಕಾವ್ಯವು. ಆತನಾದರೋ ಕನ್ನಡದ ಉದ್ದಾಮ ಕವಿಗೋಷ್ಠಿಗೆ ಸೇರಿದ ಒಬ್ಬ ಕವಿಕಳಾವಿಶಾರದವರಂಸನು, ರಸಿಕಚಕ್ರಿ.

ಕಾವ್ಯದಲ್ಲಿ ಕಥಾವಸ್ತು ಮತ್ತು ಅದನ್ನು ಹೇಳುವ ಕ್ರಮ ಅಥವಾ ರೀತಿ ಎಂದು ಎರಡು ಭಾಗಗಳಿರುತ್ತವೆ. ಕಾವ್ಯಕ್ಕೆ ಕಥಾವಸ್ತುವು ಎಷ್ಟು ಮಹತ್ವವನ್ನುಂಟುಮಾಡುವುದೋ ಅಷ್ಟೇ ಮಹತ್ವವನ್ನು ರೀತಿಯು ಉಂಟು ಮಾಡುತ್ತದೆ. ಇದೇ ಶೈಲಿಯು. ಮನುಷ್ಯಶರೀರದ ಒಳಚಲ್ವಿಕೆಯು ಮನ ಸಿನಲ್ಲಿ; ಹೊರಚಲ್ವಿಕೆಯು ಶರೀರದ ಅಂಗಾಂಗಗಳಲ್ಲಿ. ಇವೆರಡೂ ಒಂದೆಡೆ ಸೇರಿದ್ದರೆ ಆಮನುಷ್ಯನು ನಿಜವಾಗಿ ಸುಂದರನು. ಅಂಥವನನ್ನು ನೋಡಿದರೆ ಆನಂದ, ಆಹ್ಲಾದ. ಕಾವ್ಯದ ಸ್ಥಿತಿಯೂ ಅದರಂತೆ. ಕಥಾವಸ್ತುವಿನಲ್ಲಿ ಕವಿಯ ಮನೋವ್ಯಾಪಾರದಿಂದುಂಟಾದ ಸೃಷ್ಟಿಯಿರುತ್ತದೆ. ಶೈಲಿಯು ಆತನ ಭಾಷಾ ವ್ಯಾಪಾರದಿಂದುಂಟಾದ ಬಾಹ್ಯಸ್ವರೂಪವು. ಶೈಲಿಯೆಂದ ಕೂಡಲೆ ಭಾಷಾ ಮಾಧುರ್ಯವೊಂದೇ ಅಲ್ಲ ಗ್ರಂಥರಚನೆಯ ಸಂದರ್ಭದಲ್ಲಿ ಕವಿಯು ಎರಡು ಮನಸುಗಳ ಬಗ್ಗೆ ವಿಚಾರಮಾಡಬೇಕಾಗುತ್ತದೆ. ಒಂದು ತನ್ನದು, ಮತ್ತೊಂದು ಓದುಗನದು. ತನ್ನ ಶೈಲಿಯೊಳಗಿನ ಒಂದೊಂದು ಪದದಲ್ಲಿ ಅಡಕವಾಗಿರುವ ಜೀವಕಳೆಯು ತನ್ನ ಸಾಮರ್ಥ್ಯದಿಂದ ಓದುಗನ ಮನಸ್ಸನ್ನು ಆಕ್ರಮಿಸಿ ತನ್ನ ಕಲ್ಪನಾಸೃಷ್ಟಿಯನ್ನು ಆತನ ಮನೋಭೂಮಿಯ ಮೇಲೆ ಒಡಮೂಡಿಸಿ ತಾನು ಅನುಭವಿಸಿದ ನಾನಾಭಾವಗಳನ್ನು ಓದುಗನು ಅನುಭವಿಸುವಂತೆ ಮಾಡಬೇಕು. ಅಂದರೆ ಕವಿಯ ಕಾರ್ಯವು ಸಫಲ. ಹೀಗಾಗದೆ ಹೋದರೆ ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತೆ' ಆಗುತ್ತದೆ. ಆದುದ ರಿಂದ ಇದೊಂದು ದೊಡ್ಡ ಭಾರವನ್ನು ಕವಿಯು ಯಾವಾಗಲೂ ಹೊತ್ತಿರುತ್ತಾನೆ. ಎಂದೇ ಸಾಹಿತ್ಯಕ್ಕೆ ಬದುಕಿರುವ ಕಲೆಯೆನ್ನುತ್ತಾರೆ. ಇಂತಹ ಕವಿಸೃಷ್ಟಿಯಲ್ಲಿ ಅಕ್ಷರಪ್ರಮಾಣಗಳು ಭಾವಕ್ಕನುಸಾರವಾಗಿರಬೇಕು. ಪದ ಗಳ ಜೋಡಣೆಯು ರಸಭಾವಗಳಿಗೆ ಪುಷ್ಟಿಕರವಾಗಿರಬೇಕು. ಅಂದರೆ ಅಂದ ವಾದ ಅನುರೂಪವಾದ ಸರಿಯಾದ ಪದಗಳ ಜೋಡಣೆಯಿಂದ ವಾಕ್ಯಗಳನ್ನು

ರಚಿಸಿ ಅವುಗಳ ಮುಖಾಂತರವಾಗಿ ಕವಿಯು ಹೃದಯವನ್ನು ತಟ್ಟಿ, ಅಲ್ಲಿ ಬೇರೆ ಬೇರೆ ಭಾವಲಹರಿಗಳನ್ನು ಹುಟ್ಟಿಸಿ ಆನಂದ ವಿತಾನಗಳನ್ನು ಸ್ಫುರಿಸಿ. ಓದುಗರನ್ನು ಕಥಾವಸ್ತುವಿನಲ್ಲಿ ತಲ್ಲೀನಗೊಳಿಸುವುದು ಕವಿಯ ಶೈಲಿಯ ಕಾರ್ಯ ಇದಕ್ಕೆ ವಿಚಾರಶಕ್ತಿಯು ಸಹಾಯವೂ ಬೇಕಾಗುತ್ತದೆ. ಆದುದರಿಂದಲೆ ಒಬ್ಬ ಆಂಗ್ಲ ಗ್ರಂಥಕಾರನು ಹೀಗೆನ್ನುತ್ತಾನೆ. The first and last secret of a good style consists in thinking with the heart as with the head. ಮತ್ತೆ ರಸಭಾವಗಳಿಗೆ ಅನುಗುಣವಾಗಿ ಶೈಲಿಯಲ್ಲಿಯೂ ವಿವಿಧತೆಯು ಕಂಡುಬರಬೇಕು. ಈ ತತ್ವವು ಹರಿಹರನಿಗೆ ಅನ್ವಯಿಸುವುದೇ ಎಂದು ನಾವು ವಿಚಾರಿಸಿ ತಿಳಿಯಬೇಕಾಗಿದೆ.

ವ್ಯಕ್ತಿವ್ಯಕ್ತಿಗಳಲ್ಲಿ ಪ್ರಕೃತಿ ಪ್ರಕೃತಿಗಳು ಭಿನ್ನವಾಗಿರುವಂತೆ ಕವಿಕವಿಗಳಲ್ಲಿ ಶೈಲಿಯೂ ಬಿನ್ನ Styel is personal. ಹರಿಹರನ ಶೈಲಿಯು ಹರಿಹರನದು ಅನ್ಯರದಲ್ಲ. ಅಲ್ಲಿ ಅನ್ಯ ಕವಿಗಳ ಪಡಿನೆಳಲಿರಬಹುದಾದರೂ ಅದರಿಂದ ಹರಿಹರನಿಗೆ ಕುಂದಕವಿಲ್ಲ. ಆತನ ಭಾಷೆಯು ಪ್ರೌಢವಾಗಿದೆ, ಗಂಭೀರವಾಗಿದೆ, ವಿಲಾಸವಿಭ್ರಮಗಳಿಂದ ಹೃದಯಂಗಮವಾಗಿದೆ. ನಿರರ್ಗಲವಾಗಿದೆ, ತಡೆಯಿಲ್ಲದೆ ಒಂದೇಸವನೆ ಹರಿಯುತ್ತಿದೆ. ಎಲ್ಲೆಲ್ಲಿಯೂ ಉಚಿತ ಶಬ್ದಗಳ ದೆಸೆಯಿಂದ ಆತನು ನಿಂತುಕೊಂಡು ಅವು ದೊರೆಯದಿರಲು ಅನ್ಯಯಗಳಿಂದ ತನ್ನ ಕಾರ್ಯಭಾಗವನ್ನು ಆತನು ಪೂರೈಸಿಕೊಳ್ಳುವುದಿಲ್ಲ. ಈ ಸಂದರ್ಭದಲ್ಲಿ ಒಮ್ಮೊಮ್ಮೆ ಕವಿಗಳು ಕಾವ್ಯ ಸೌಂದರ್ಯವನ್ನೇ ಆಹುತಿ ಕೊಟ್ಟ ಉದಾಹರಣೆಗಳು ದೊರೆಯುತ್ತವೆ. ಹರಿಹರನ ಚಂಪೂಶೈಲಿಯೇ ಆಗಲಿ, ರಗಳೆಯ ಶೈಲಿಯೇ ಆಗಲಿ ರಸಭಾವಗಳಿಗನುಸರಿಸಿ ತಾಳಮಟ್ಟುಗಳನ್ನು ಸೂಚಿಸುವ ಶಬ್ದಗಳ ಜೋಡಣೆಯಿಂದ ಬಹು ಅಂದವಾಗಿದೆ.

ಎಲ್ಲಿತ್ತೊ—ಸಸಿಯ—ಬೆಳ್ಗೊಡೆ
ಯೆಲ್ಲಿತ್ತೊ—ಪೂತನೂತ—ಚೂತಗಜಂ—ತಾ ||
ನೆಲ್ಲಿತ್ತೊ—ಪಂಚಬಾಣ—ಮ
ದೆಲ್ಲಿತ್ತೊ—ಕಸುಮಚಾಪ—ವಿಭ್ರಮವೀಗಳ್ || ಗಿ. ಕ. ||

ಎಲೆ ಸುರತಕಾಮಧೇನುವೆ
ಯೆಲೆ ಸುರತಾಂಭೋಧಿಚಂದ್ರಯೆಲೆ ಸುರತಮಹೋ ||
ತ್ಪಲಸೂರ್ಯಯೆಲೆ ಸುರಸಂ-
ಕುಲಪರಮಾರಾಧ್ಯಯೆತ್ತಡಂಗಿದೆ ಮದನಾ || ಗಿ. ಕ. ||

(ಮೊದಲನೆಯ ಪದ್ಯದಲ್ಲಿ ಗದಾಯುದ್ಧದ ಪಡಿನೆಳಲಿದೆ.)

ಮೇಲಿನ ಎರಡೂ ಪದ್ಯಗಳಲ್ಲಿ ರತಿವಿಲಾಪಸಂಗತಿಯಿದೆ. ಮೊದಲನೆಯ ಪದ್ಯವನ್ನು ಓದುವಾಗ ಅಲ್ಲಲ್ಲಿ ತಾವಾಗಿಯೇ ನಿಲ್ಲುವಂತೆ ಪದಗಳ ಜೋಡಣೆಯಿದೆ. ದುಃಖಾವೇಗದಲ್ಲಿ ಕುತ್ತಿಗೆಯ ಸಿರಗಳು ಬಿಗಿದು ಶಬ್ದಗಳು ಹೊರಡದಂತಾಗಿದೆ ಅಲ್ಲಿ. ಸಹಾನುಭೂತಿಯಿಂದ ದುಃಖಿತರನ್ನು ಸಮಾಧಾನಗೊಳಿಸಲು ಯಾರಾದರೂ ಬಂದಾಗ ದುಃಖಾವೇಗವು ಒತ್ತರಿಸಿ ಅದರ ಕೂಡ ಶಬ್ದಗಳು ತೀವ್ರವಾಗಿ ಹೊರಬೀಳುತ್ತವೆ. ಅಂತಾಗಿದೆ ಎರಡನೆಯ ಪದ್ಯದಲ್ಲಿ. ಈ ಎರಡೂ ಪದ್ಯಗಳಲ್ಲಿ ಸ್ತ್ರೀಯರ ಮನಸ್ಥಿತಿಯು ಸ್ಫುಟವಾಗಿ ಹೊಳೆಯುತ್ತಿದೆ. ಆದರೆ ಶಬ್ದಗಳು ಮಾತ್ರ ಸಂಸ್ಕೃತಮಯವಾಗಿವೆ. ಈ ಸಂದರ್ಭದಲ್ಲಿ ಹರೀಶ್ವರನು ದ್ವಿಭಾಷಾಚಕ್ರವರ್ತಿಯೆಂಬ ಸಂಗತಿಯನ್ನು ನೆನಪಿಗೆ ತಂದುಕೊಂಡರೆ ಎಲ್ಲವೂ ಸರಿಹೋಗುವುದು. ರುದ್ರಭಟ್ಟ ನೇಮಿಚಂದ್ರರ ಕಾವ್ಯಗಳಲ್ಲಿಯೂ ಈ ಸಂಗತಿಯು ಒಡೆದುಕಾಣುತ್ತದೆ. ಹೀಗಿದ್ದರೂ ಅದು ತನಗೆ ಹೊಳೆದ ಕೂಡಲೆ 'ಅಲ್ಲಲ್ಲಿ ತಪ್ಪಿದೆನು, ಒಪ್ಪುವೆ' ನೆನ್ನುವಂತೆ ಕನ್ನಡಪದಗಳ ಬಗ್ಗೆ ಉದಾಸೀನನಾಗದೆ ಅಚ್ಚಗನ್ನಡದ ಪದಗಳಿಂದಲೇ ಪದ್ಯಗಳನ್ನು ರಚಿಸುತ್ತಾನೆ. ಮುಂದಿನ ಪದ್ಯಗಳನ್ನು ನೋಡಿ:

ಎತ್ತಣ ಹರನೆತ್ತಣ ತಪ
ಮೆತ್ತಣ ತಾರಕನ ಬಾಧೆಯೆತ್ತಣ ಬಿಸುಗ |
ಣ್ಣೆತ್ತಣುರಿಯೆತ್ತಣೀಯಿರ
ವೆತ್ತಣ ಕೋಟಲೆಯನೆನಗೆ ಮಾಡಿದೆ ಮದನಾ || ಗಿ. ಕ. ||

(ಈ ಪದ್ಯವನ್ನು ಷಡಕ್ಷರದೇವನು ಶಬರಶಂಕರವಿಳಾಸದಲ್ಲಿ

ಎತ್ತಣ ಬನಮೆತ್ತಣ ಕಿಟ
ಯೆತ್ತಣ ಕಾಳ್ಬಿಯದನಾಗಮಂ ಕರ್ಮವೆ ಮೇಣ್ ||

ಮುಂತಾಗಿ ಎಂದು ಅನುಕರಿಸಿದ್ದಾನೆ.)

ರಗಳೆಗಳ ಭಾಷೆಯು ವ್ಯವಹಾರದಲ್ಲಿ ರೂಢವಾದ ಭಾಷೆಯು. ರಗಳೆಗಳನ್ನು ಹರಿಹರನು ಬರೆದದ್ದು ಜನಸಾಮಾನ್ಯಕ್ಕೆಂದು. ಅಂತೆಯೇ ಅವರು ನಿತ್ಯವೂ ಉಪಯೋಗಿಸುತ್ತಿದ್ದ ಭಾಷೆಯನ್ನು ಕವಿಯು ಉಪಯೋಗಿಸಿ ತನ್ನ ಉದ್ದೇಶವನ್ನು ಸಫಲಗೊಳಿಸಿಕೊಂಡಿದ್ದಾನೆ. ಈ ಭಾಷೆಯಲ್ಲಿ ಸಂಸ್ಕೃತಶಬಗರು ತೀರ ಕಡಿಮೆ.

ಕಡುನೇಹದಿಂದೆ ಪಸಿದೈ ಪಸಿದೆ ಎನೆ ನೋಡಿ
ನೇಹದೋಗರಮುಮಂ ತಂದಲ್ಲಿ ಮುಂದಿರಿಸಿ
ಓಹೋಹೋ ಹೊತ್ತು ಹೋಯಿತ್ತೆನುತಲಾದರಿಸಿ
ಎನ್ನವನೆ ಎನ್ನವನೆ ಪಸಿದೆಯ್ಯ ಪಸಿದೆಯ್ಯ
ಎನ್ನವನೆ ಚೆನ್ನವನೆ ಹೊತ್ತು ಹೋದುದೆ ಅಯ್ಯ
ಉಣ್ಣವನೆಯುಣ್ಣವನೆ ಯೆನ್ನವನೆ ಯೆನ್ನಯ್ಯ
ಬಣ್ಣಿಸುತ ಬಣ್ಣಿಸುತ ಉಣ್ಣದನೆ ದಮ್ಮಯ್ಯ
ಅರಿದೆನರಿದೆಂ ನಾಚಿ ಇರ್ದಪೆಯು ನೀನೆಂದು
ಅರಿದಂತೆ ಹಿಂದುಮುಂದಾಗಿ ನೋಡುವೆನೆಂದು
ಇರಲೀಶನೆಂದಿನಂದದಲುಂಡ ಮಾಳ್ಕೆಯಿಂ
ಪರಿಹರಿಸಿ ಭೂತಕ್ಕೆ ಕೊಟ್ಟನೊಲ್ದ ಳ್ತಿಯಿಂ

ಕಾವ್ಯಕ್ಷೇತ್ರವು ಮನಸ್ಸೆಂದು ಹೇಳುತ್ತಾರೆ. ಅಲ್ಲಿ ಭಕ್ತಿಯು ಉದಯವಾಗಿರಲು ಆದರಿಂದ ಪ್ರೇರಿತನಾದ ಕಣ್ಣಪ್ಪನ ಮನಸ್ಥಿತಿಯು ತಾ... ಭಕ್ತಾಗ್ರೇಸರನಾದುದರಿಂದ, ತನ್ನ ಮನಶ್ಚಕ್ಷುವಿನ ಮುಂದೆ ಕಟ್ಟಿದಂತಾಗಿ ಅದನು ಎಲ್ಲರಿಗೂ ತಿಳಿಯುವಂತೆ ಸ್ಫುಟವಾಗಿ ಹೇಳಿ ಬಿಡದ ಹೊರ್ತು ಹರಿಹರನಿಗೆ ಸಮಾಧಾನವಾಗುವುದೆಂತು ? ಇಲ್ಲಿ ಆತನ ಪ್ರದರ್ಶನ—ಶಕ್ತಿಯು ಒಡೆದು ಕಾಣುತ್ತದೆ. ಅದು ಸ್ವಾಭಾವಿಕವಾಗಿದೆ ಆ ಬಗ್ಗೆ ಆತನು ಪ್ರಯತ್ನಪಡಬೇಕಾಗಿಲ್ಲ. ಅದುದರಿಂದಲೇ ಅದನ್ನು ತಿಳಿದುಕೊಳ್ಳಲು ಓದುಗರೂ ಪ್ರಯತ್ನಿಸಬೇಕಿಲ್ಲ.

ಚಮುಕಂ ತಕನಕ ತಕ ಎಂದೆನುತಂ
ಝುಂ ಝುಂ ಝುಂಝುಂ ತಕತಕ ಎನುತಂ
ಝುಂಝುಂ ದಿಕ್ಕಟ ತಕ್ಕಟ ಎನುತಂ

ತಂದ್ರಂ ದಿಕ್ಕಟ ದಿಕ್ಕಟ ಎನುತಂ
ಝೂಂದ್ರಂಕಟ ಝೋಂದ್ರ**ಕಟ** ಎನುತಂ

ಈ ಅವತರಣದೊಳಗಿನ ಅಕ್ಷರಗಳು ನೃತ್ಯದೊಳಗಿನವು ಅವುಗಳಲ್ಲಿ ಕೆಲವು ಕರ್ಕಶ ವರ್ಣಗಳಾಗಿದ್ದರೂ ಲಯಬದ್ಧವಾಗಿ ತಾಲಕ್ಕನುಸರಿಸಿ ಕುಣಿಯುತ್ತಿರುವಾಗ ಶಿಕ್ಷಕನ ಬಾಯಿಂದ [ ಆತನ ಏಕತಾನತೆಯಿಂದ ] ಗಟ್ಟಿಯಾಗಿಯೂ ಕರ್ಕಶವಾಗಿಯೂ ಹೊರಡುತ್ತಿರುವ ಅಕ್ಷರಗಳ ಹಾಗೆ ಪೆಟ್ಟುಗಳಿಗೆ ಅನುಸರಿಸಿವೆ. ಆ ಕಾರಣದಿಂದ ಅಕ್ಷರಗಳ ಕರ್ಕಶತೆಯಿಂದ ವಿರಾಗವುಂಟಾಗದೆ ಸಂಗೀತದಲ್ಲಿ ಓದುಗನು ಲೀನನಾಗುತ್ತಾನೆ.

[ ಕೆಲರು ಇದನ್ನು ಒಪ್ಪದಿರಬಹುದು. ಅದು ಭಿನ್ನಾಭಿಪ್ರಾಯ ]

ಅಲ್ಲಲ್ಲಿ ಕವಿಯು ಶಬ್ದಾಲಂಕಾರ ಯಮಕಗಳಲ್ಲಿಯೂ ಕೆಲಮಟ್ಟಿಗೆ ಆಸಕ್ತನಾಗುತ್ತಾನೆ. ಕ್ವಚಿತ್ತಾಗಿ ಉಪಯೋಗಿಸಿದ ಇಂತಹ ಕ್ರಮದಿಂದ ಒಂದು ಸೌಂದರ್ಯವೇ ಉಂಟಾಗುತ್ತಿದೆಯೇ ಹೊರ್ತು ವಿರೂಪವಲ್ಲ. ಊಟದಲ್ಲಿ ಚಟ್ಣಿ ಉಪ್ಪಿನಕಾಯಿಗಳಿಂದ ರುಚಿಯು ಹುಟ್ಟುತ್ತಿದೆ. ಆದರೆ ಅವುಗಳನ್ನು ಹೆಚ್ಚಾಗಿ ಉಪಯೋಗಿಸುವುದರಿಂದ ಹೊಟ್ಟೆತುಂಬುವುದಕ್ಕೆ ಬದಲಾಗಿ ಊಟದ ರುಚಿಯು ಕೆಟ್ಟುಹೋಗುತ್ತದೆ. ಅದರಂತೆ ಅನುಪ್ರಾಸ ಯಮಕಗಳ ವಿಚಾರ.

ರತಿಗಿತಿಯ ರಂಬೆಗಿಂಬೆಯ ಮಾತು ಬೇಡಿಲ್ಲಿ
ಮತಿಗಿತಿಗೆ ಪೊಗಳ್ವಗಿಗಳ್ವಾಸೆಗಳು ಪುಗವಿಲ್ಲಿ.

.... .... ....

ಬಂದಂ ಬಂದಂ ದೇವರ ದೇವಂ
ಬಂದಂ ದೇವರ ಗಂಡಂ ಬಂದಂ
ಬಂದಂ ಪುರಮಥನಂ ನಡೆತಂದಂ
ಬಂದಂ ಸ್ಮರಮಥನಂ ನಡೆತಂದಂ

.... .... ....

ಕೈ ಕೊಳರವಕಾರಿಗಳೊಂದೆಸೆಯೊಳ್
ಬೈಕೆಯ ಸತಿಯರ ಸಾಲೊಂದೆಸೆಯೊಳ್

.... .... ....

ಬೆವರುತಂ ಬಿಕ್ಕುತಂ ತೇಗುತಂ ತೂಗುತಂ
ಕ್ರಮವಳಿದು ಸುಳಿದು ಸುಖಿಯಾಗುತಂ ಬೀಗುತಂ.

ಹೀಗೆ ಬೇಕಾದಲ್ಲಿ ಅನುಪ್ರಾಸಾಲಂಕಾರವನ್ನು ಭಾವಕ್ಕನುಸಾರವಾಗಿ ಉಪಯೋಗಿಸಿದ್ದಾನೆ. ಈ ಸಂಗತಿಯನ್ನು ಕಂಡುಹಿಡಿದು ವಿರೂಪಾಕ್ಷಪಂಡಿತನೂ ಲಕ್ಷ್ಮೀಶನೂ ತಮ್ಮ ಪುರಾಣಗಳಲ್ಲಿ ಅದನ್ನು ಪದ್ಯಗಳ ಸೌಂದರ್ಯಕ್ಕೆಂದು ಉಪಯೋಗಿಸಿಕೊಂಡಿದ್ದಾರೆ. ಕೆಳಗಿನ ಉದಾಹರಣೆಗಳನ್ನು ನೋಡಿ:

ಬರಹೇಳ್ ನಿಕುಂಭನಂ ಶುಂಭನಂ ಜಂಭನಂ
ಬರಹೇಳ್ ಸಶಬಲನಂ ಪ್ರಬಲನಂ ಸುಬಲನಂ
ಬರಹೇಳ್ ಪ್ರವೀರನಂ ಘೋರನಂ ಶೂರನಂ ಬರಹೇಳ್
ಮಹಾನಾಭನಂ

ಚೆ. ಬ. ಪು. ೫೧೪

ಜಾನಕಿಯ ಸುತನ ಬಾಣಾವಳಿಯ ಹಾವಳಿಯ
ನೇನೆಂಬೆನಹಿತರಂ ಕವರಿದುವು ಸವರಿದುವು
ಬಾನೆಡೆಯೊಳಿಟ್ಟಣಿಸಿ ಹಾರಿದುವು ತೂರಿದುವು ಕೊಂದವರಿ
ದುವು ಪರಿದುವು

ಜೈ. ಭಾ. ೨೦—೪೭

ಹೀಗೆ ಶಬ್ದಾಲಂಕಾರದ ಭರಕ್ಕೆ ಬಿದ್ದಾಗ ಹರಿಹರನ ಶೈಲಿಯು ಕೆಲವೆಡೆಯಲ್ಲಿ ಅಸ್ವಾಭಾವಿಕವಾಗಿದೆ.

ನಿಂದೆಂ ನಿಂದೆಂತು ವೀವೀರದರದನಿಕರಂ ಬಂದೊಡಂ ಬಂದೊಡಂಗೊಂ!
ಡಂದಾವಂದಾವನಂತಿರ್ಪ ಸಪಸಸರಮುಂ ಕಾಣ್ಬನಾಮಾತದಿರ್ಕೆಂ ||
ನಂದಂ ನಂದಂ ಕನಲ್ದಿರ್ಪೊಡೆ ಪೊಡೆ ಪುಲಿಯುಂ ಬೇಗದಿಂ ಬೇಗದಿಂದಂ|
ಬದಂ ಬಂದಂತೆ ಕೊಂದುರ್ಕೆವರ ಕುವರನಂ ಸೊಂಕಿರಾತಂ ಕಿರಾತಂ||

ಗಿ. ಕ.

( ಇದು ನಿಜವಾಗಿ ನಾರಿಕೇಳ ಪಾಕದ ಉದಾಹರಣೆ ) ಇಂತಹ ಅಸ್ವಾಭಾವಿಕತೆಯ ಉದಾಹರಣೆಗಳು ತೀರ ಕಡಿಮೆ.

ಮುದ್ದಣನು ಪಥ್ಯಂ ವಧ್ಯಂ ಗದ್ಯಂ ಹೃದ್ಯಂ ಎಂದು ಹೇಳುವಂತೆ ಹರಿಹರನು ಹೇಳುವವನಲ್ಲ ಪದ್ಯ ಗದ್ಯಗಳಲ್ಲಿ ಆತನಿಗೆ ಸರಿಯಾದ ಕೈಚಳಕವಿದೆ.

ಆತನ ಗದ್ಯವು ಪದ್ಯಗಳಿಗನುಗುಣವಾಗಿ ಕಾವ್ಯದ ಹೃದಯಂಗಮತೆಯನ್ನು ಹೆಚ್ಚಿಸಿ ಓಮ್ಮೊಮ್ಮೆ ವೃತ್ತಗಂಧಿಯಾಗಿ ನಿಲ್ಲುತ್ತದೆ. ಗದ್ಯಶೈಲಿಗೆ ಬಾಣನು ಸೀಮಾಪುರುಷನಾಗಿದ್ದಂತೆ ಹರಿಹರನು ಕನ್ನಡದಲ್ಲಿ. ಈತನ ತರುವಾಯ ಗದ್ಯದಲ್ಲಿ ಈತನನ್ನು ಸರಿಗಟ್ಟುವವರು ೧೭ನೆಯ ಶತಮಾನದವರೆಗೆ ಯಾರೂ ಇರಲಿಲ್ಲ,

ಸುರತರುವಿನಂಕುರದಂತೆ ಪುಣ್ಯದಕೊನರಿನಂತೆ ಭಕ್ತಿಯ ಕುಸುಮದಂತೆ ಮುಕ್ತಿಯ ಫಲದಂತೆ ಬಾಲಚಂದ್ರನಂತೆ ಕಳಹಂಸನಂತೆ ಕಾಮಧೇನುವಿನ ವತ್ಸನಂತೆ ಪರುಷದ ಮರಿಯಂತೆ ನಳನಳಸಿ ಬೆಳೆಯುತಿರ್ಪ ಮಳೆಯರಾಜದೇವಂ ಶೈಶವಲೀಲೆಯೊಳ್ ಮುಂದೆ ತನಗೆ ಪ್ರತ್ಯಕ್ಷನಪ್ಪ ಶಿವನೇರಿ ಬರ್ಪ ನಂದಿಯ ನಿಲವಂತಂ ಬಳಿಕ್ಕೆ ಪಡಿಸಣಮಂ ನೋಡುವಂತೆ ದಟ್ಟಡಿ ಇಟ್ಟು ಶಿವಸ್ತುತಿಯಂ ಶ್ರವಣಮಂ ಮಾಡುವಂತೆ ನುಡಿದು ದೇಶಂಬೆರಸು ಕೈಲಾಸಕ್ಕೀತೆರದೊಳೆತ್ತಿ ಕೊಂಡೊಯ್ವೆನೆಂಬುದಂ ತೋರುವಂತೆ ಮುಂದಿರ್ದ ಹಾಲ ಹೊನ್ನ ಬಟ್ಟಲನೊಯ್ಯನೆತ್ತಿ ನಿಂದಿರುತ್ತುಂ................ಮಳೆಯರಾಜ ಶ· ಮಹಾತ್ಮೆ.

‘ ಪಲ್ಲವದ ನುಣ್ಪಿಂ ಕುಸುಮಾವಳಿಯ ಕಂಪಿಂ ಪಣ್ಗೊನೆಯ ಬಿಣ್ಪಿಂ ಪಕ್ವ ಪಕ್ವ—ಫಳರಸದಿಂಪಿಂ ಕೋಕಿಳಧ್ವಾನದಿಂ ಅಳಿಕುಲದ ಗಾನದಿಂ ಶುಕರವಪ್ರತಾನದಿಂ ಫಳರಸದ ಪಾನದಿಂ ರಾಜಹಂಸಯಾನದಿಂ ಲತಾಮಂಟಪಸ್ಥಾನದಿಂ................ಅತಿಪ್ರಸನ್ನತೆಯನೊಳಕೊಂಡಿರ್ಪುದು’ ಗಿ. ಕ. ಎಂದು ವರ್ಣಿಸುವಾಗ ಬಾಣಕಾದಂಬರಿಯ ಶೈಲಿಗಿಂತ ಇದು ಕಡಿಮೆಯಾಗಿಲ್ಲ. ಅದಕ್ಕಿಂತ ಒಂದು ಹೆಚ್ಚಿನ ಗುಣವು ಇದರಲ್ಲಿದೆ. ಗಿರಿಜಾಕಲ್ಯಾಣದೊಳಗಿನ ಮೇಲಿನ ಗದ್ಯವು ಛಂದೋರೂಪಕ್ಕೆ ತಿರುಗಿ ರಗಳೆಯ ಪಾದಗಳಾಗಿ ಪ್ರವಹಿಸುತ್ತಿರುವುದರಿಂದ ಇದು ವೃತ್ತಗಂಧಿ.

ಒಟ್ಟಾರೆ ಹರಿಹರನ ಶಬ್ದಸಾಮಗ್ರಿಯು ಅಗಾಧವಾಗಿ ರಸಪೋಷಣೆಗೆ ಅನುಕೂಲವಾಗಿ ಭಾವವನ್ನು ಹೊರಹೊಮ್ಮಿಸಿ ಕಾವ್ಯದ ಸೌಂದರ್ಯವನ್ನು ಉಕ್ಕಿಸಿ ಹೃದಯಂಗಮತೆಯನ್ನುಂಟುಮಾಡಿದೆ. ಹೀಗಿದ್ದರೂ ಆತನು ರಳ ಕುಳಗಳನ್ನು ನಿರಾಕರಿಸಿದ್ದುದರಿಂದ, ಪಕಾರಕ್ಕೆ ಹಕಾರಾದೇಶವನ್ನು ಮಾಡಿ

ರುವುದರಿಂದ, ವ್ಯಂಜನಾಂತ ಶಬ್ದಗಳನ್ನು ಸ್ವರಾಂತಮಾಡಿರುವುದರಿಂದ ಅಚ್ಚ ಗನ್ನಡ ಸಾಂಪ್ರದಾಯಿಗಳಲ್ಲಿ ಕೆಲವರು ಆತನನ್ನು ದೂಷಿಸುವುದುಂಟು. ದದತು ದದತು ಗಾಲಿರ್ಗಾಲಿಮಂತೋಭವಂತಃ | ವಯಮಪಿ ತದಭಾವಾದ್ಗಾಲಿದಾನ್ಯೇಽಸಮರ್ಥಾಃ || ಎಂದು ಮಾತ್ರ ನಾವು ಹೇಳುತ್ತೇವೆ.

ಹರಿಹರನು ಆಜನ್ಮಬ್ರಹ್ಮಚಾರಿಯಾಗಿದ್ದುದರಿಂದ ಶೃಂಗಾರರಸವನ್ನು ಆತನು ತನ್ನ ಕಾವ್ಯಗಳಲ್ಲಿ ಪೋಷಿಸಲು ಹೇಗೆ ಸಾಧ್ಯವೆಂದು ಆಕ್ಷೇಪಿಸುವುದೂ ಉಂಟು. ಅದಕ್ಕೆ ಉತ್ತರವು ಹೀಗೆ. ಕಥಾಸಂದರ್ಭಕ್ಕನುಗುಣವಾಗಿ ಮನಸ್ಸಿನಲ್ಲಿ ಭಿನ್ನಭಿನ್ನ ಭಾವೋದ್ದೀಪನವು ಉಂಟಾಗುತ್ತಿದೆ. ಆಆ ಸಂದರ್ಭಗಳಲ್ಲಿ ಹೃದಯವು ಭಿನ್ನಭಿನ್ನ ರಸಗಳಲ್ಲಿ ಏಕರೂಪವಾಗಿ ದರ್ಶನಶಕ್ತಿಯಿಂದ ಆಆ ಚಿತ್ರಗಳನ್ನು ಕಲ್ಪಿಸಿಕೊಳ್ಳುತ್ತದೆ. ಆ ಸನ್ನಿವೇಶವರ್ಣನೆಯು ತೀರಿದ ಕೂಡಲೆ ಉದ್ದೀಪನವು ಕುಂದಿ ಇಲ್ಲದಂತಾಗಿ ಮನಸ್ಸು ಪೂರ್ವಸ್ಥಿತಿಗೆ ಬರುತ್ತದೆ. ಇದರಿಂದ ಕವಿಯ ವೈರಾಗ್ಯಕ್ಕೆ ಎಂದೂ ಭಂಗಬಾರದು. ಇದಕ್ಕೆ ಮತ್ತೊಂದು ಉದಾಹರಣೆಯೆಂದರೆ ಷಡಕ್ಷರದೇವನದು. ಆತನು ವಿರಕ್ತನು. ಹರಿಹರದೇವನಿಗಿಂತ ಆತನು ಒಂದು ಹೆಜ್ಜೆ ಮುಂದೆ ಹೋಗಿ ಶೃಂಗಾರರಸದಲ್ಲಿ ನೇಮಿಚಂದ್ರನನ್ನೂ ಮಿಕ್ಕುವಂತಿದ್ದಾನೆ. ಶೃಂಗಾರರಸದ ಆತನ ಅಭಿಮಾನದಿಂದ ಕೆಲವು ಕಥೆಗಳೂ ಪ್ರಚಲಿತವಾಗಿವೆ.

ಬೆಮರ್ವಳು ಬೆಚ್ಚುವಳುಬ್ಬುವ |
ಳಮರ್ವಳು ಪೆರೆಸಾರ್ವಳಂಜಿ ನಿಲ್ವಳ್ ಸೋಂಕಲ್ ||
ನಿಮಿರ್ವಳ್ ನೆನೆವಳ್ ಮುನಿವಳ್ |
ಸಮುಸಲ್ವಳ್ ಗಿರಿಜೆ ಸೆಡೆದು ಸುಯ್ವಳ್ಕಾಯ್ವಳ್ || ಗಿ. ಕ. ||

ಇದನ್ನು ಹೋಲುವ ಪದ್ಯವೊಂದು ಜೈಮಿನಿ ಭಾರತದಲ್ಲಿದೆ.

ಸುತ್ತನೋಡುವಳೊಮ್ಮೆ ನೂಪುರವಲುಗದಂತೆ |
ಪತ್ತೆಸಾರುವಳೊಮ್ಮೆ ಸೋಂಕಲೆಂತಹುದೆಂದು !
ಮತ್ತೆ ಮುರಿದಪಳೊಮ್ಮೆ ಹೆಜ್ಜೆಹೆಜ್ಜೆಯ ಮೇಲೆ ಸಲ್ವಳಮ್ಮದೆ ನಿಲ್ವಳು ||

ಚಿತ್ತದೊಳ್ನಿಶ್ಚಯಿಸಿ ನೆರೆಯಲೆಳಸುವಳೊಮ್ಮೆ |
ಹೊತ್ತಲ್ಲದಸುಚಿತಕೆ ಬೆದರಿ ಹಿಂಗುವಳೊಮ್ಮೆ |
ತತ್ತಳದ ಬೇಟದೋಳ್ಬೆಂಡಾಗಿ ವಿಷಯೆ ನಿಂದಿರ್ದಳಾತನ ಪೊರೆ
ಯೊಳು || ೩೦—೨೩

ಈ ಎರಡೂ ಪದ್ಯಗಳನ್ನು ಸರಿಹಚ್ಚಿ ನೋಡಿದರೆ ಹರಿಹರನ ರಚನೆಯಲ್ಲಿ ಮರ್ಯಾದೆಯಿದೆ. ಸ್ತ್ರೀಯರಿಗೆ ಸ್ವಭಾವಿಕವಾದ ಶಾಲೀನತೆಯ ಎಲ್ಲೆಯನ್ನು ಆತನು ಮಿಕ್ಕಿಲ್ಲ ಪ್ರೇಮಾತಿರೇಕವನ್ನು ಮಾತ್ರ ತೋರಿಸಿಕೊಟ್ಟಿದ್ದಾನೆ. ಅದೇ ಲಕ್ಷ್ಮೀಶನ ಪದ್ಯದಲ್ಲಿ ಕಾಮಬಾಣಪೀಡಿತೆಯಾದ ವಿಷಯೆಯು ಮುಂದುಗಾಣದವಳೂ ಶಾಲೀನತೆಯಿಲ್ಲದವಳೂ ಎಂದು ಸ್ಫುಟವಾಗುತ್ತದೆ. ಆದುದರಿಂದ ಹರೀಶ್ವರನು ತಾನು ' ಜಾಣಂ ರಸಿಕಂ ಸುಜನಪ್ರಾಣಂ ಕವಿತಾನಿಧಾನಂ ' ಎಂದು ಹೇಳಿಕೊಂಡುದು ಯಥಾರ್ಥವಾಗಿದೆ.

ಕವಿಯು ಪ್ರಚುರವಾದ ಕವಿಸಮಯಗಳನ್ನು ಉಪಯೋಗಿಸಿಕೊಂಡುದಲ್ಲದೆ ಹೊಸ, ವ್ಯಾವಹಾರಿಕ ಉಪಮೆಗಳನ್ನೂ ಕಲ್ಪನೆಗಳನ್ನೂ ಇಟ್ಟುಕೊಂಡಿದ್ದಾನೆ. ಉದಾ:

ಅರೆದಂತೆ, ಕಂಡರಸಿದಂತೆ, ಕರುವಿಟ್ಟಂತೆ, ಮರುಳಂತೆ, ಮರೆದಿರ್ದರಂತೆ, ಮರವಟ್ಟಂತೆ, ಮಂಗಳವೆ ರೂಪುಗೊಂಡಂದದಿಂ.

ಸಿರಿತಂದಿಕ್ಕಿದಶೋಕೆ, ವಾಗ್ವನಿತೆಯಿಟ್ಟಾಮ್ರಂ, ಶಚೀದೇವಿಯಿಟ್ಟರನೇರಿಲ್, ರಂಭೆಯಿಟ್ಟ ಕದಳೀಷಂಡಂ, ಸುರಸ್ತ್ರೀಯರಿಟ್ಟರವಿಂದಾಕರಂ, ಊರ್ವಶೀವಧು ಸರಾಗಂ ತಂದ ಪೂಗದ್ರುಮಂ, ತರದಿಂದಂ ರತಿಯಿಟ್ಟ ದಾಡಿಮಕುಲಂ;

ವನಲಕ್ಷ್ಮಿಗೆ ಸಕಳವಿಳಾ |
ಸಿನಿಯರ್ಬಳೆದೋಳ್ಗಳಿಂದೆ ಚಾಮರವಿಕ್ಕಲ್ ||
ತನತನಗೆ ಬಂದರೆನೆ ತ |
ದ್ವನದೊಳ್ಪೊಂಬಾಳೆಯಿಂದೆ ಪೂಗಮುದೆಸೆಗುಂ || ೧. ಕ. ||

ಬೀಜದೊಳಗೆ ಕಲ್ಪತರುವಿನಂಕುರಂ ವಿರಾಜಿಪಂತೆ, ಮೇಘದೊಳಗೆ ಚಂದ್ರ

ಕಾಂತಿ ಬೆಳಗುವಂತೆ, ಚಂದ್ರಕಾಂತಘಟದ ನಡುವೆ ಬೆಳಗುತಿರ್ಪ ಪರುಸದಂತೆ, ಮನದ ಗರ್ಭಿಣಿ ಬೆಸಲೆಯಪ್ಪಂತೆ, ಪಶುವಿನ ಕೊರಲ ಪಾಶವಂ ಪರಿವಂತೆ.

ಇಂತಲ್ಲದೆ ವಚನಕಾರರ ವಚನಗಳಲ್ಲಿ ಕಂಡುಬರುವ ಪ್ರಸಿದ್ಧವಾದ ಉಪಮೆಗಳನ್ನೂ ಇಟ್ಟುಕೊಂಡಿದ್ದಾನೆ.

ಅಲಂಕಾರಗಳಲ್ಲಿ ಸುಲಭವಾದ ಮತ್ತು ಬಳಿಕೆಯಲ್ಲಿರುವ ಉಪಮೆ, ರೂಪಕ, ಉತ್ಪ್ರೇಕ್ಷೆ, ಭ್ರಮ, ಮಾಲಾದೀಪಕ ಮುಂತಾದವುಗಳನ್ನಷ್ಟೇ ಇಟ್ಟುಕೊಂಡಿದ್ದಾನೆ. ಅಲಂಕಾರಗಳನ್ನು ಹೆಚ್ಚಾಗಿ ಇಟ್ಟುಕೊಂಡರೆ ಕಾವ್ಯವು ಕ್ಲಿಷ್ಟವಾಗಿ ಓದುಗನಿಗೆ ಬೇಸರವನ್ನುಂಟುಮಾಡುತ್ತದೆ. ಗಿರಿಜಾಕಲ್ಯಾಣವು ಚಂಪೂ ಕಾವ್ಯವಾದರೂ ಗದಾಯುದ್ಧದಲ್ಲಿನಂತೆ ಅಲಂಕಾರಗಳು ಅದರಲ್ಲಿ ಅಪರೂಪವಾಗಿ ಜನಸಾಮಾನ್ಯಕ್ಕೂ ಅಲ್ಪಪ್ರಯಾಸದಿಂದ ತಿಳಿಯುವಂತಾಗಿದೆ. ರಗಳೆಗಳಂತೂ ಜನಸಾಮಾನ್ಯದ ದೃಷ್ಟಿಯಿಂದಲೇ ಬರೆದವುಗಳು ಆದುದರಿಂದ ಹರೀಶ್ವರನ ಕಾವ್ಯಗಳಲ್ಲಿ ಪ್ರಸಾದ, ಮಾಧುರ್ಯ, ಸೌಕುಮಾರ್ಯ, ಭಾವ, ವಿಲಾಸ, ವಿಭ್ರಮ, ರಸ ಮುಂತಾದ ಗುಣಗಳು ತುಂಬಿಕೊಂಡು ಅವು ಹೃದಯಂಗಮವಾಗಿವೆ. ಅವನ ಕಾವ್ಯದಲ್ಲಿ ಮನದ ಗರ್ಭಿಣಿಯು ಬೆಸಲೆಯಾಗಿರುವಳು.

ಸೇವ್ಯಂ ಸೌಖ್ಯಂ ಪ್ರಸನ್ನಂ ನವರಸವಿಭವಂ ಪುಣ್ಯಪುಂಜಂ ಶುಭಂ ವಾ |
ಗ್ದೇವ್ಯಾವಾಸಂ ವಿವೇಕೋನ್ನತಜಲನಿಧಿ ಸಂಸಾರವಿಶ್ರಾಮದೇಶಂ ||
ದಿವ್ಯಜ್ಞಾನೋಕ್ತಿಮಾರ್ಗಂ ನಿರತಿಶಯಪದಂ ಕೂರ್ತುಪೇಳ್ದಲ್ತಿ ಯಿಂದಂ |
ಕಾವ್ಯಂ ಕಲ್ಪಾಂತಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ ||

ಕೊಂಡಾಡುಗೆ ಕಲ್ತೋದುಗೆ |
ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೈ ||
ಕೊಂಡೀಕಾವ್ಯಮನಗಜೆಯ
ಗಂಡನಲಂಪಿಂದ ಹಂಪೆಯ ವಿರೂಪಾಕ್ಷಂ ||

ತರದಿಂದಂ ಶಬ್ದವರ್ತ್ಮಂ ರಸವಿಸರವಲಂಕಾರದಿಂ ತೀವುತೊಳ್ಪಿಂ |
ಧರೆಯೊಳ್ಕೈಕೊಂಡು ಪಂಪಾಪುರದಧಿಪವಿರೂಪಾಕ್ಷನಿತ್ತಾಜ್ಞೆಯಿಂದಂ |
ಹರಿದೇವಂ ಭಕ್ತಿಯಿಂದಂ ಗುರುಕರುಣದಿನುತ್ಸಾಹದಿಂ ಮೆಚ್ಚಿಪೇಳ್ದೀ |
ಗಿರಿಜಾಕಲ್ಯಾಣಕಾವ್ಯಂ ರವಿಶಶಿರಸೆಗಳ್ನಿಲ್ವಿನಂ ನಿಲ್ಕೆ ಸಂತಂ || ಗಿ. ಕ||

**ಗೆಳೆಯರ ಬಳಗದ ಮಲ್ಲಿನಾಥ.**

---

# ಹರಿಹರದೇವನ ಗಿರಿಜಾಕಲ್ಯಾಣ.

---

ಧರೆಯೊಳ್ ಮೇಣ್ ಪುಟ್ಟಿ ಪುಟ್ಟುತ್ತಿರುಳ್ವ ನರರ ಮೇಲುರ್ಬಿ ಕರ್ಬಂಗಳಂ ಬಿ।
ತ್ತರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟು ಪೋಪರ್॥
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ।
ವರನಾದಂ ಮತ್ತವಂಗತ್ಯಧಿಕಶಿವಕವೀಂದ್ರಂಗವಾರ್ ಸಾಟಿಯಪ್ಪರ್॥

ರಾಜಶೇಖರವಿಳಾಸಂ ೧, ೧೯.

## ೧. ಪೀಠಿಕೆ.

ಕನ್ನಡ ಸಾಹಿತ್ಯದ ಬೆಳವಣಿಗೆಯ ಇತಿಹಾಸವನ್ನು ವಿವೇಚಿಸಿದ ಪಂಡಿತರಲ್ಲಿ ಅನೇಕರು ಆ ಬೆಳವಣಿಗೆಯ ಕಾಲವನ್ನು ಜೈನ, ವೀರಶೈವ, ಬ್ರಾಹ್ಮಣ ಎಂದು ಕ್ರಮವಾಗಿ ಮೂರು ತೆರನಾಗಿ ವಿಭಾಗಿಸುತ್ತಾರೆ. ಬೇರೆ ಕೆಲವರು ಸಾಹಿತ್ಯದಂತಹ ಸರ್ವಸಮ್ಮತವಾದ ಕಾರ್ಯಕ್ಷೇತ್ರದಲ್ಲಿ ಜಾತಿ-ಮತಭೇದಗಳಿಗೆ ಮಹತ್ವಕೊಡುವಂತಹ ಈ ಬಗೆಯ ಕಾಲವಿಭಾಗಗಳಿಗೆ ಎಡೆಗೊಡಬಾರದೆಂದು ಆಕ್ಷೇಪಿಸುತ್ತಾರೆ. ಈ ವರ್ಗಕ್ಕೆ ಸೇರಿದವರು ಕರ್ಣಾಟಕ ಸಾಹಿತ್ಯದ ಇತಿಹಾಸವನ್ನು ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ಭಾಷೆಯ ಮಾರ್ಪಾಡನ್ನವಲಂಬಿಸಿಯಾಗಲಿ,—ಚಂಪೂ, ಷಟ್ಪದಿ, ಹಾಡುಗಬ್ಬ ಎಂಬ ಸಾಹಿತ್ಯದ ರೂಪಗಳನ್ನವಲಂಬಿಸಿಯಾಗಲಿ ವಿಭಾಗಿಸುವುದು ಉಚಿತವೆಂದು ಪ್ರತಿಪಾದಿಸುತ್ತಾರೆ. ಈ ಬಗೆಯ ಭಿನ್ನಾಭಿಪ್ರಾಯಗಳಲ್ಲಿ ಒಂದೇ ದೃಷ್ಟಿಕೋನದಿಂದ ಸಾಹಿತ್ಯ ವಿವೇಚನೆಯನ್ನು ಮಾಡುವುದು ಸರಿಯಲ್ಲವೆಂಬ ತಥ್ಯಾಂಶವು ಹೊರಡುವುದೇನೋ ನಿಜ; ಆದರೆ ಹರೀಶ್ವರನ ಕೃತಿಗಳ ವಿಮರ್ಶೆಯನ್ನು ಸರಿಯಾಗಿಮಾಡಿ ಕನ್ನಡ ಸಾಹಿತ್ಯದಲ್ಲಿ ಅವುಗಳ ಸ್ಥಾನವನ್ನು ನಿರ್ಧರಿಸಬೇಕಾದರೆ, ಜಾತಿಮತಗಳನ್ನು ಅವಲಂಬಿಸಿದ ವಿಭಾಗಕ್ಕೆ ಪ್ರಾಧಾನ್ಯ ಕೊಡಬೇಕಾಗುತ್ತದೆ. ಕರ್ಣಾಟಕದ ಸಾಹಿತ್ಯೇತಿಹಾಸದಲ್ಲಿ ಹರೀ

ಶ್ವರನ ಕಾಲವು ಒಂದು " ಸಂಧಿ " ಕಾಲವೆಂಬುದನ್ನು ನೆನಪಿನಲ್ಲಿಟ್ಟುಕೊಂಡೆ ಹರೀಶ್ವರನ ಕೃತಿಗಳ ವಿಮರ್ಶೆಯನ್ನು ಮಾಡಬೇಕಾಗುವದು.

ಹರೀಶ್ವರನ ಕಾಲವು ಇನ್ನೂ ಸರಿಯಾಗಿ ನಿರ್ಧಾರವಾಗಿಲ್ಲ. ರೆ|| ಕಿಟ್ಟೆಲ್ ಇವರು ( ಛಂದೋಂಬುಧಿ ಉಪೋದ್ಘಾತ, ಪು. ೫೩ ) ಈ ಕವಿಯ ಕಾಲವು ಸುಮಾರು ಕ್ರಿ. ಶ. ೧೨೮೩ ಇದ್ದಿರಬೇಕೆಂದು ತರ್ಕಿಸಿದ್ದಾರೆ. " ಕವಿಚರಿತೆ " ಕಾರರು (ಭಾಗ ೧ ಪು. ೨೧೯-೨೨೨) ಹರೀಶ್ವರನು ಕ್ರಿ. ಶ. ೧೧೬೫ ಇದ್ದಿರ ಬೇಕೆಂದು ಅನೇಕ ಆಧಾರಗಳೊಂದಿಗೆ ಊಹಿಸಿದ್ದಾರೆ. " ಕೆಲವು ಕನ್ನಡ ಕವಿಗಳ ಜೀವನಕಾಲ " ಎಂಬುದರ ಕರ್ತರಾದ ಡಾ|| ವೆಂಕಟಸುಬ್ಬಯ್ಯನ ವರು ( ಪು. ೨೬೦-೨೭೮ ) ಕವಿಚರಿತೆಕಾರರ ಊಹೆಯನ್ನು ಆಕ್ಷೇಪಿಸಿ ದ್ದಾರೆ. ಕವಿಚರಿತೆಕಾರರು ( ಭಾಗ ೩, ಪು. lxv-lxix ) ಈ ಆಕ್ಷೇಪಣೆ ಗಳಿಗೆ ಮತ್ತೆ ಕೆಲವು ಸಮಾಧಾನವನ್ನು ಹೇಳಿದ್ದಾರೆ. ಆದರೆ ಇತ್ತೀಚೆಗೆ ಪ್ರಕಟವಾಗಿರುವ " ಬಸವದೇವರಾಜರಗಳೆ " " ಅಲ್ಲಮಪ್ರಭುವಿನ ರಗಳೆ " " ಮಹದೇವಿಯಕ್ಕನ ರಗಳೆ " ಎಂಬ ಗ್ರಂಥಗಳು ಹರಿಹರಕೃತವೆಂಬುದಕ್ಕೆ ಪ್ರಬಲಕಾರಣಗಳಿರುವುದರಿಂದಲೂ, ಈ ಕವಿಯ ಸೋದರಳಿಯನಾದ ರಾಘ ವಾಂಕನು " ಸಿದ್ಧರಾಮೇಶ್ವರ ಚರಿತ್ರೆ" ಯನ್ನೂ ಬರೆದಿರುವುದರಿಂದಲೂ, ಹರೀಶ್ವರನು ಬಸವ-ಅಲ್ಲಮ-ಮಹದೇವಿಯಕ್ಕ-ಸಿದ್ಧರಾಮೇಶ್ವರ ಇವರ ಕಾಲದಿಂದ ಈಚೆಯವನೆನ್ನಲು ಸಂದೇಹವಿಲ್ಲ; ಸುಮಾರು ಒಂದು ತಲೆಯಾ ದರೂ ಈಚೆಯವನಾಗಿರಬೇಕು. ಬಸವೇಶ್ವರ ಮೊದಲಾದವರ ಕಾಲವು ಸುಮಾರು ಕ್ರಿ. ಶ. ೧೧೬೦ ಎಂದು ಗ್ರಹಿಸಿದರೆ ಹರೀಶ್ವರನ ಕಾಲವು ಕ್ರಿ. ಶ. ೧೧೯೦ ಎಂದು ಅನುಮಾನಿಸಬಹುದು. ಈ ಕಾಲಕ್ಕೂ ಕವಿಚರಿತೆಕಾರರು (ಭಾಗ ೩ ಪು. lxv-lxix) ಹೇಳಿದ ಕಾಕತೀಯ ರಾಜನಾದ ಪ್ರತಾಪರುದ್ರನ ಕಾಲ (೧೧೪೦—೧೧೯೬) ಕ್ಕೂ ವ್ಯತ್ಯಾಸವೇನೂ ಉಂಟಾಗುವುದಿಲ್ಲ. ಇನ್ನು ಮಲ್ಲಿಕಾರ್ಜುನನ " ಸೂಕ್ತಿಸುಧಾರ್ಣವ " ದಲ್ಲಿ ಹರೀಶ್ವರನ ಪದ್ಯಗಳು ದೊರೆಯುವುದರಿಂದ ಹರೀಶ್ವರನು ಕ್ರಿ. ಶ. ೧೨೪೫ಕ್ಕಿಂತ ಮೊದಲಿನವ ನೆನ್ನಲು ಆವ ಸಂಶಯವೂ ಇಲ್ಲ. ಪ್ರೊ|| ಕುಂದಣಗಾರ ಮತ್ತು ಮಾಳ ವಾಡ ಇವರು ( ಇದೇ ಸಂಕಲನದ ೪೯—೬೪ ಪುಟಗಳಲ್ಲಿ ) ಹರಿಹರನು

"ಹಂಪೆಯ ವಿರುಪಾಕ್ಷ ದೇವಾಲಯದಲ್ಲಿ ಉರಿಯುತ್ತಿದ್ದ ತೆರೆಯನ್ನು ಆರಿಸಿದನೆಂಬ" ಪವಾಡವು ನಡೆದ ಕಾಲವು ಕ್ರಿ. ಶ. ೧೨೧೬ ಎಂದು ನಿರ್ಧರಿಸಿದ್ದಾರೆ. ಒಟ್ಟಿನಲ್ಲಿ ಕ್ರಿ. ಶ. ೧೨ನೆಯ ಶತಮಾನದ ಕೊನೆಯಲ್ಲಿ ಕವಿಯು ಜೀವಿಸುತ್ತಿದ್ದನೆಂದು ನಿರ್ಣಯಿಸಬಹುದು.

ಕ್ರಿ. ಶ. ೧೨ನೆಯ ಶತಮಾನದಲ್ಲಿ ಕಲ್ಯಾಣದ ಬಸವಣ್ಣನ ಹಾಗೂ ಆತನ ಅನುಯಾಯಿಗಳಾದ ಶಿವಶರಣರ ಸಹಾಯದಿಂದ ವೀರಶೈವಮತವು ಕರ್ಣಾಟಕದಲ್ಲೆಲ್ಲ ಹಬ್ಬಿತೆಂಬ ಸಂಗತಿಯು ಈಗ ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಈ ಮತಪ್ರಸಾರದಿಂದ ಕರ್ಣಾಟಕದ ಜನಸಮಾಜದಲ್ಲೆಲ್ಲ ಒಂದು ಬಗೆಯ ಕ್ರಾಂತಿಯುಂಟಾಯಿತು. ಧರ್ಮವು ಯಾವುದಾದರೊಂದು ವರ್ಣದ "ಸೊತ್ತು" ಎಂಬ ತಿಳಿವಳಿಕೆಯು ತಪ್ಪಿ, ಪ್ರತಿಯೊಬ್ಬನಿಗೂ ಧರ್ಮದಲ್ಲಿ ವಿಚಾರಮಾಡುವ ಸ್ವಾತಂತ್ರ್ಯವಿರುತ್ತದೆಂಬ ತಿಳಿವಳಿಕೆಯು ಬೇರೂರಿತು. ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಪ್ರಾರಂಭವಾದ ಈ ಕ್ರಾಂತಿಯು ಕ್ರಮೇಣ ಉಳಿದ ವಿಷಯಗಳನ್ನೂ ಆವರಿಸಿಕೊಂಡಿತು. ಪ್ರತಿಯೊಂದು ಸಂಗತಿಯಲ್ಲಿಯೂ ಈ ಕ್ರಾಂತಿಯ ಮೂಲಕ ಬಹುಕಾಲ ನಡೆದು ಬಂದಿದ್ದ ಕಟ್ಟುಗಳು ಸಡಿಲಾಗತೊಡಗಿದವು; ಹಳೆಯ ಪರಂಪರೆಗಳು ಮಾರ್ಪಟ್ಟು ಹೊಸ ಪರಂಪರೆಗಳು ಬಳಿಕೆಯಲ್ಲಿ ಬರಲಾರಂಭಿಸಿದುವು ಕರ್ಣಾಟಕದ ಸಾಹಿತ್ಯದ ಮೇಲೆಯೂ ಈ ಕ್ರಾಂತಿಯ ಪರಿಣಾಮವು ಆಯಿತೆಂದು ಬೇರೆ ಹೇಳುವ ಕಾರಣವಿಲ್ಲ. ಕ್ರಿ. ಶ. ೧೨ನೆಯ ಶತಮಾನದಿಂದ ೧೭ನೆಯ ಶತಮಾನದ ವರೆಗಿನ ಕನ್ನಡ ಸಾಹಿತ್ಯದಲ್ಲಿ ಈ ಪರಿಣಾಮವು ಚೆನ್ನಾಗಿ ಪ್ರಕಟವಾಗಿದೆ. ಪೂರ್ವದ ಕಂದವೃತ್ತಗಳನ್ನೊಳಗೊಂಡ ಚಂಪೂಪ್ರಬಂಧಗಳ ಬದಲು ರಗಳೆ, ಷಟ್ಪದಿ, ಸಾಗಂತ್ಯ ಮುಂತಾದ ಸುಲಭ ಛಂದಸ್ಸಿನಲ್ಲಿ ರಚಿತವಾದ ಕಾವ್ಯಗ್ರಂಥಗಳು ಈ ಕಾಲದಲ್ಲಿ ಹೆಚ್ಚಾಗಿ ಪ್ರಚಾರಗೊಂಡುವು. ವ್ಯಾಕರಣ ವಿಷಯದಲ್ಲಿಯೂ ಕಾಲಾನುಗುಣವಾಗಿ ಮಾರ್ಪಾಟಗಳುಂಟಾದುವು. ಹಿಂದಣ ಕಾಲದ ಕವಿಗಳು ಧರ್ಮಗ್ರಂಥಗಳನ್ನಾಗಲಿ (ಜೈನ) ಪುರಾಣಗಳನ್ನಾಗಲಿ ಹೆಚ್ಚಾಗಿ ರಚಿಸುತ್ತಿದ್ದರಾದರೂ ಲೋಕಾದರಣೆಯನ್ನೋ ರಾಜಾಶ್ರಯವನ್ನೋ ಬಯಸಿ ಭಾರತ ರಾಮಾಯ

ಣಗಳೊಳಗಿನ ರಸವತ್ತಾದ ಪ್ರಸಂಗಗಳನ್ನಾಯ್ದುಕೊಂಡು ಅವುಗಳನ್ನು ತಮ್ಮ ಆಶ್ರಯದಾತರ ಚರಿತ್ರೆಗಳಿಗೆ ಹೋಲಿಸಿ ಕಾವ್ಯಗಳನ್ನು ರಚಿಸುತ್ತಿದ್ದರು. ಇದಕ್ಕೆ ಆದಿಪಂಪನ "ವಿಕ್ರಮಾರ್ಜುನವಿಜಯ"ವೂ ಕವಿರನ್ನನ ಸಾಹಸಭೀಮವಿಜಯವೂ ಒಳ್ಳೆಯ ಉದಾಹರಣೆಗಳಾಗಿವೆ. ಆದರೆ ವೀರ ಶೈವಮತವು ಪ್ರಸಾರವಾಗಲಾರಂಭಿಸಿದಂದಿನಿಂದ ಇಂತಹ ಕೃತಿಗಳನ್ನು ಬರೆಯುವುದು ಅನುಚಿತವಾದುದೆಂಬ ಅಭಿಪ್ರಾಯವು ನೆಲೆಗೊಳ್ಳಲಾರಂಭಿಸಿತು.

ಶಿವನ ಮತ್ತು ಶಿವಶರಣರ ಹೊರತು ಉಳಿದವರಾರೂ—ದೇವತೆಗಳು ಕೂಡ-ವೀರಶೈವರಿಗೆ ಆರಾಧ್ಯರಲ್ಲ. ವೀರಶೈವರನ್ನುಳಿದು ಮಿಕ್ಕವರೆಲ್ಲ "ಭವಿ" ಗಳೆಂದು ವೀರಶೈವರಮತ. ವಿಷ್ಣು ಮೊದಲಾದ ದೇವತೆಗಳೆಲ್ಲ ಭವದಲ್ಲಿ ಬರುವವರಾದುದರಿಂದ ಅವರೂ "ಭವಿ"ಗಳ ವರ್ಗಕ್ಕೆ ಸೇರಿದವರೆಂದು ವೀರ ಶೈವರ ಗ್ರಹಿಕೆ. ವಿಷ್ಣುವು ತನ್ನ ಹತ್ತು ಅವತಾರಗಳನ್ನು ಭವದಲ್ಲಿ ಬಂದು ನಟಿಸಿದಂತೆ ಶಿವನು ತನ್ನ ಇಪ್ಪತ್ತೈದು ಲೀಲೆಗಳನ್ನು ಮರ್ತ್ಯರೂಪದಿಂದ ನಟಿಸಲಿಲ್ಲವೆಂದು ವೀರಶೈವರ ನಂಬಿಗೆ. ರಾಜಶೇಖರ ವಿಳಾಸದಲ್ಲಿ:—

ಭವದೊಳ್ ಬರ್ಪಮರರ್ಕಳಂ ಭವವಿಮುಕ್ತ್ಯರ್ಥಂ ಶರಣ್ಬೊಕ್ಕೊಡೆ |
ನವರೇನೀವರೆ ಮುಕ್ತಿಯಂ ಭವಹರಂ ನೀನಲ್ಲದಿಷ್ಟಾರ್ಥಮಂ ||
ತವೆ ಮಾಡಲ್ ಸುರಪಾದಪಂ ನೆಗುಮೊ ಬರ್ಬೂರವೃಕ್ಷಂಗಳೇ |
ನ್ನವೆ ಕೇಳಂತಿರೆ ನೀನೆ ಮೋಕ್ಷವರದಂ ಶ್ರೀಶೈಲಜಾವಲ್ಲಭಾ ||

ಎಂದು ಕವಿಯು ಶಿವಪಾರಮ್ಯವನ್ನು ಸ್ಥಾಪಿಸಲು ಬಗೆದುದು ವೀರಶೈವರ ಮತಾನುಸಾರವಾಗಿದೆ. ಇದಲ್ಲದೆ ಕವಿತಾಶಕ್ತಿಯೆಂಬುದು ದುರ್ಲಭವಾದುದು; ಕೇವಲ ಶಿವಕೃಪೆಯಿಂದಲೆ ಕೆಲವರಿಗೆ ಮಾತ್ರ ಲಭಿಸತಕ್ಕುದು; ಆದುದರಿಂದ ಶ್ರೇಷ್ಠವಾದ ಈ ಶಕ್ತಿಯನ್ನು ಶಿವನನ್ನೂ ಶಿವಶರಣರನ್ನೂ ಹೊಗಳುವುದರಲ್ಲಿಯೆ ವಿನಿಯೋಗಿಸಬೇಕಲ್ಲದೆ ಅನ್ಯಥಾ ಉಪಯೋಗಿಸುವುದು ಅತ್ಯಂತಹೇಯವಾದುದೆಂಬ ಅಭಿಪ್ರಾಯವು ವೀರಶೈವ ಕವಿಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಷಡಕ್ಷರದೇವನು :—

ವರ್ಣತತಿ ಮಾತೃಜನಕರ |
ಪರ್ಣಾಪರಮೇಶರೆಂಬ ನಿಗಮೋಕ್ತಿಯನಾ ||
ಕರ್ಣಿಸಿ ತನ್ನುತಿಗೆಯ್ಯದ |
ದುರ್ಣರ-ಕೃತಿಕರನೆ ಲಬ್ಧಪರ್ಣಪರಾಕಂ ||
ರಸೆಯೊಳ್ ರಸವತ್ಕವಿತೆಯು |
ನುಸಿರಲ್‌ಪಡೆದಸಮನಯನನಂ ಪೊಗಳದೆ ಮಾ ||
ನಿಸರಂ ಸುರರಂ ಪೊಗಳ್ವುದು |
ಕಸವರಮಂ ಕಳೆದು ಕಸವನಾಂತವೊಲಕ್ಕುಂ ||
ಆದರಿಂದೆ ಮಹಿತಮಹಿಮಾ |
ಸ್ಪದನಂ ಶಿವನಂ ತದೀಯಶರಣವ್ರಜಮಂ ||
ಪದೆದು ಮುದಮೊದವೆ ಬಲ್ಲಂ |
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ ||

ಎಂದು ಪ್ರತಿಜ್ಞೆಮಾಡಿದ್ದಾನೆ. ಇವನಿಗಿಂತ ಹಿಂದಣ ವೀರಶೈವ ಕವಿಗಳಲ್ಲಿಯೂ ಈ ಪ್ರತಿಜ್ಞೆಯು ಕಂಡುಬರುತ್ತದೆ. ಆದುದರಿಂದ ಇದೊಂದು ವೀರಶೈವ ಪರಂಪರೆಯೆಂದು ಹೇಳಬೇಕು. ಈ ಪರಂಪರೆಗೆ ಹರಿಹರದೇವನೇ ಪುರಸ್ಕರ್ತನೆಂಬುದಕ್ಕೆ ಈ ಲೇಖನದ ಆರಂಭದಲ್ಲಿ ಉದಾಹರಿಸಿದ ಷಡಕ್ಷರದೇವನ ಪದ್ಯವು ಸಾಕ್ಷಿಯಾಗಿದೆ. ಹರಿಹರನು ತನ್ನ " ಪಂಪಾಶತಕದಲ್ಲಿ:—

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ |
ತನತನಗಿಂದ್ರಚಂದ್ರರವಿಕರ್ಣದಧೀಚಿಬಲೀಂದ್ರನೆಂದು ತಾ ||
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ |
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ||

ಎಂದು ಹೇಳಿರುವುದನ್ನು ನೋಡಿದರೆ, ಮತ್ತೂ ತನ್ನ ಸೋದರಳಿಯನಾದ ರಾಘವಾಂಕನು ಹರಿಶ್ಚಂದ್ರನೆಂಬ ಮನುಷ್ಯನನ್ನು ಕುರಿತು ಕಾವ್ಯಬರೆದುದಕ್ಕೆ ಆತನ ಐದು ಹಲ್ಲು ಮುರಿದನೆಂಬ " ದಂತಕಥೆ " ಯನ್ನು ವಿಚಾರಿಸಿದರೆ ಹರೀಶ್ವರನು ಉತ್ಕಟವೀರಶೈವನಾಗಿದ್ದನೆಂಬುದು ಸಿದ್ಧವಾಗುತ್ತದೆ. ಈತನ ಕೃತಿಗಳನ್ನು ವಿವೇಚಿಸಿದರೂ ಇದೇ ಮಾತು ಸ್ಪಷ್ಟವಾಗುವದು.

ವರ್ಣಜಾತಿಗಳ ಕಟ್ಟುಗಳನ್ನು ಮುರಿದೊಗೆಯಲು ಹೊರಟ ವೀರ ಶೈವ ಮತವು ಸಾಮಾನ್ಯಜನತೆಯಲ್ಲಿ ಹಬ್ಬಬೇಕಾದರೆ ಆ ಮತದ ತಿರುಳನ್ನೂ ಶಿವಶರಣರ ಚರಿತೆಗಳನ್ನೂ ಸರ್ವರಿಗೂ ತಿಳಿಯುವಂತೆ ಸರಳವಾದ ಶೈಲಿಯಲ್ಲಿ ಬರೆಯಬೇಕೆಂಬುದನ್ನು ಮನಗಂಡ ಕಬ್ಬಿಗರು ರಗಳೆ-ಷಟ್ಪದಿಗಳಂತಹ ಸುಲಭಗ್ರಂಥಗಳನ್ನು ಆ ಕಾಲದಲ್ಲಿ ಬರೆಯಲಾರಂಭಿಸಿದರು. ಹರಿಹರದೇವನಾದರೂ ಈ ತತ್ವವನ್ನನುಸರಿಸಿ ಶಿವಶರಣರ ೧೦೧ (ಅಥವಾ ೧೨೦) ರಗಳೆಗಳನ್ನು (ರಘುಟಾ-ರಗಳೆಯೆಂಬ ಛಂದಸ್ಸಿನಲ್ಲಿ) ರಚಿಸಿರುವನು. ಈ ಗ್ರಂಥಗಳಲ್ಲ ಕೆಲವುಗಳಲ್ಲಿ ಒಂದು ಸ್ಥಳವು ರಗಳೆಯ ರೂಪದಲ್ಲಿ ಮುಂದಿನ ಸ್ಥಳವು ಗದ್ಯರೂಪವಲ್ಲಿ ಹೀಗೆ ಅನುಕ್ರಮವಾಗಿ ಬರೆಯಲ್ಪಟ್ಟಿರುವುವು. ಇವುಗಳೊಳಗಿನ ಭಾಷೆಯು ಸುಲಭವಾಗಿಯೂ ಮೃದುಮಧುರವಾಗಿಯೂ ಇರುವುದು ಕಾವ್ಯ ಗ್ರಂಥಗಳಲ್ಲಿರಬೇಕಾದ ಎಲ್ಲ ಗುಣಗಳು ಈ ರಗಳೆಗಳಲ್ಲಿ ಇರುವುವು. ಕವಿಯು ಈ ಗ್ರಂಥಗಳನ್ನಷ್ಟೇ ಬರೆದಿದ್ದರೂ ಆತನ ಘನತೆಗೆ ಆವ ವಿಧದ ಚ್ಯುತಿಯೂ ಉಂಟಾಗುತ್ತಿದ್ದಿಲ್ಲವೆಂಬುದು ಅನೇಕ ಪಂಡಿತರ ಅಭಿಪ್ರಾಯವಾಗಿದೆ. ಆದರೂ ಕವಿಯು "ಗಿರಿಜಾಕಲ್ಯಾಣ" ವೆಂಬ ಚಂಪೂ ಕಾವ್ಯವೊಂದನ್ನು ಪ್ರತ್ಯೇಕವಾಗಿ ರಚಿಸಿದ್ದಾನೆ. ಅದರಲ್ಲಿ ಈಶ್ವರನ ಪಂಚವಿಂಶತಿ ಲೀಲೆಗಳಲ್ಲಿ ಒಂದಾದ "ಗಿರಿಜಾಕಲ್ಯಾಣ" ವೆಂಬ ಲೀಲೆಯು ವರ್ಣಿತವಾಗಿದೆ. ಹರಿಹರನು ಇದುವರೆಗೆ ರಗಳೆಯ ಛಂದಸ್ಸಿನಲ್ಲಿಯೆ ತನ್ನ ಗ್ರಂಥಗಳನ್ನೆಲ್ಲ ರಚಿಸಿದ್ದುದರಿಂದ ಪಂಡಿತರು ಈತನನ್ನು "ರಗಳೆಯ ಕವಿ" ಯೆಂದು ಪರಿಹಾಸಮಾಡಿದರೆಂದೂ, ಈ ಅವಮಾನವನ್ನು ಹೋಗಲಾಡಿಸಿಕೊಳ್ಳಲು ಕವಿಯು ಪಂಡಿತರಿಗೆ ಮೆಚ್ಚಿಗೆಯಾಗುವಂತಹ ಚಂಪೂ ಶೈಲಿಯಲ್ಲಿ ಈ ಗ್ರಂಥವನ್ನು ರಚಿಸಿದನೆಂದೂ ಜನಜನಿತವಾಗಿ ಬಂದ ಒಂದು ಆಖ್ಯಾಯಿಕೆಯಿದೆ. ಇತ್ತೀಚೆಯ ಕೆಲ ಪಂಡಿತರು ಈ ಕಥೆಯನ್ನು ನಂಬದೆ ಗಿರಿಜಾಕಲಾಣವೇ ಮೊದಲು ರಚಿತವಾದ ಗ್ರಂಥವೆಂತಲೂ ರಗಳೆಗಳು ಹಿಂದಿನಿಂದ ರಚಿತವಾದವುಗಳೆಂತಲೂ ಅಭಿಪ್ರಾಯಪಡುತ್ತಾರೆ. ತಥ್ಯಾಂಶವು ಹೇಗೇ ಇರಲಿ, ಉದ್ದಾಮಕವಿಗಳೆಂದೆನಿಸಿಕೊಳ್ಳಬೇಕೆನ್ನುವವರು ಚಂಪೂ ಕಾವ್ಯಗಳನ್ನು ರಚಿಸಲೇಬೇಕೆಂಬ ಆ ಕಾಲದ ಸಂಪ್ರದಾಯವು ಹರಿಹರನ ಕಾಲಕ್ಕೆ ಸಿಥಿಲವಾಗಲಾರಂಭಿಸಿದ್ದರೂ ಇನ್ನೂ ಸಂಪೂರ್ಣವಾಗಿ ಭಂಗವಾಗಿ

ದ್ದಿಲ್ಲವೆಂದು ಊಹಿಸಬಹುದು. ಹರಿಹರದೇವನು ವಿದ್ವಜ್ಜನರ ಮೆಚ್ಚುಗೆಯನ್ನು ಪಡೆಯಲಿಕ್ಕಲ್ಲದಿದ್ದರೆ ಪರಮತದ ಪಂಡಿತರಿಗೆ ಶಿವಪಾರಮ್ಯವನ್ನು ತಿಳಿಸುವ ಇಚ್ಛೆಯಿಂದಾಗಲಿ, ಈ ಕಾವ್ಯವನ್ನು ಚಂಪೂರೂಪವಾಗಿ ರಚಿಸಿರಬೇಕು.

---

## ೨. ಕಥಾಸಾರಾಂಶ.

ಈಶ್ವರನ ಪಂಚವಿಂಶತಿ ಲೀಲೆಗಳಗಳಲ್ಲಿ ಒಂದಾದ "ಗಿರಿಜಾಕಲ್ಯಾಣ"ವೆಂಬ ಲೀಲೆಯನ್ನು-ಅದರ ಸಾರಾಂಶವನ್ನೂ ಕವಿಯೇ ಗ್ರಂಥಾರಂಭಕ್ಕೆ ಹೇಳಿದ್ದಾನೆ— ಕಥಾವಸ್ತುವಾಗಿಟ್ಟುಕೊಂಡು ಕವಿಯು ಹತ್ತು ಆಶ್ವಾಸಗಳ ಮಹಾಕಾವ್ಯವನ್ನು ಹೇಗೆ ರಚಿಸಿದ್ದಾನೆಂಬುದನ್ನು ನೋಡುವಾ.

**೧ನೆಯ ಅಶ್ವಾಸ :**—ಆರಂಭದಲ್ಲಿ ತನ್ನ ಇಷ್ಟದೇವತೆಯಾದ ಪಂಪಾ ವಿರೂಪಾಕ್ಷನನ್ನೂ ಪಾರ್ವತಿ-ಗಣಪತಿ-ಷಣ್ಮುಖ ಇವರನ್ನೂ ಸ್ತುತಿಸಿ, "ಶಿವನ ಸರ್ವಮುಖ"ರಾದ ಶಿವಭಕ್ತರನ್ನೂ, ಮಯೂರ-ಕಾಳಿದಾಸ ಮಲುಹಣ ಮೊದಲಾದ ಪೂರ್ವದ ಶಿವಕವಿಗಳನ್ನೂ ಸ್ಮರಿಸಿ, ತನ್ನ ಕಾವ್ಯದ ಗುಣಗಳನ್ನು ಹೇಳಿಕೊಂಡು, ಕನ್ನಡ ಕವಿಗಳ ಸಂಪ್ರದಾಯಾನುಸಾರವಾಗಿ ಕುಕವಿಗಳನ್ನು ನಾನಾಬಗೆಯಾಗಿ ನಿಂದಿಸುತ್ತಾನೆ. ತನ್ನ ಕುಲಗುರುವನ್ನೂ ಗುರುಕುಲವನ್ನೂ ಹೊಗಳಿ, ಮಾಯಿದೇವರ ಶಿಷ್ಯನಾದ ತಾನು ಈ ಕಾವ್ಯವನ್ನು ರಚಿಸಿರುವೆನೆಂದು ಹೇಳಿಕೊಳ್ಳುತ್ತಾನೆ. ಮಹಾಕಾವ್ಯದ ಅಂಗಗಳಾದ ಪರ್ವತ-ಸಮುದ್ರ ವರ್ಣನೆಗಳನ್ನು ಮಾಡಲುದ್ಯುಕ್ತನಾಗುತ್ತಾನೆ. ಹಿಮಾಲಯದ ವಿಸ್ತಾರವನ್ನೂ ಔನ್ನತ್ಯವನ್ನೂ, ಅಲ್ಲಿ ವಾಸಿಸುತ್ತಿದ್ದ "ಪುಣ್ಯಂ ಪಣ್ಣಾದ" ತೆರದ ತಾಪಸರನ್ನೂ ಸರಸವಾಗಿ ಬಣ್ಣಿಸಿದ್ದಾನೆ. ಮುಂದೆ ಕಾನನದ, ಅಲ್ಲಿ ನಡೆದ ಬೇಟೆಯ ವರ್ಣನೆಯನ್ನು ಆನೇಕ ಪದ್ಯಗಳಲ್ಲಿ ಮಾಡಿ ಈ ಆಶ್ವಾಸನವನ್ನು ಮುಗಿಸಿದ್ದಾನೆ. ಹಿಮಾಚಲದ ವರ್ಣನೆಯ ಹೊರತು ಉಳಿದ ವರ್ಣನೆಗಳೆಲ್ಲ ಕೇವಲ ಕಾವ್ಯಲಕ್ಷಣವನ್ನು ಪೂರೈಸುವುದಕ್ಕಾಗಿ ಬರೆದುವುಗಳಾಗಿವೆ.

**೨ನೆಯ ಆಶ್ವಾಸ:**—ಹಿಮಾಚಲದಲ್ಲಿದ್ದ ಗಿರಿರಾಜನ ದೇಶ, ಅರಣ್ಯದ ಹೊಲಗಾವ ಪಾಮರಿಯರು, ಪ್ರಪಾಶಾಲೆಯೊಳಗಿನ ಸ್ತ್ರೀಯರು-ಈ ವಿಷಯ ಗಳನ್ನು ಯಥೋಚಿತವಾಗಿ ವರ್ಣಿಸಿ, ರಾಜಧಾನಿಯಾದ ಓಷಧಿಪ್ರಸ್ಥದ ಉಪವನವರ್ಣನೆಯನ್ನು ಯಥೇಚ್ಛವಾಗಿ ಮಾಡಿದ್ದಾನೆ. ಇದು ಬಹಳ ವಾಗಿ ಲಂಬಿಸಿದ್ದರೂ ಶಬ್ದಾಲಂಕಾರಗಳಿಂದಲೂ ಸ್ವಭಾವೋಕ್ತಿಗಳಿಂದಲೂ ಸ್ವಾರಸ್ಯವಾಗಿದೆ. ಮುಂದೆ ಓಷಧಿಪ್ರಸ್ಥಪುರ, ಗಿರಿರಾಜ ಮೇನೆಯರು, ಅರ ಸನ ಒಡ್ಡೋಲಗ-ಇವುಗಳ ವರ್ಣನೆಯಲ್ಲಿ ಈ ಆಶ್ವಾಸವು ಕೊನೆಗಾಣುತ್ತದೆ.

**೩ನೆಯ ಆಶ್ವಾಸ:**— ಕಥೆಯು ನಿಜವಾಗಿ ಆರಂಭವಾಗುವುದು ಈ ಆಶ್ವಾಸದಲ್ಲಿ. ಶಿವನ ಅರ್ಧಾಂಗಿಯಾಗಲು ತಕ್ಕ ಕನ್ನೆಯನ್ನು ಪಡೆಯ ಬೇಕೆಂಬ ಕುತೂಹಲದಿಂದ ಗಿರಿರಾಜನ ಪತ್ನಿಯಾದ ಮೇನಾದೇವಿಯು ದಾಕ್ಷಾಯಣಿಯನ್ನು ಕುರಿತು ತಪವಾಚರಿಸುವಳು. ತಂದೆಯಾದ ದಕ್ಷನು ಮಾಡುತ್ತಿದ್ದ ಯಾಗಕ್ಕೆ ತನ್ನನ್ನು ಕರೆಯದಿದ್ದರೂ ಹೋಗಿ ಅವಜ್ಞೆಹೊಂದಿ ಪತಿನಿಂದೆಯನ್ನು ಕೇಳಲಾರದೆ ದಾಕ್ಷಾಯಣಿಯು ಮರಳಿ ಬರುತ್ತಿರುವಲ್ಲಿ, ತಪಸ್ಸುಮಾಡುತ್ತಿದ್ದ ಮೇನೆಯನ್ನು ಕಂಡು ಅವಳಿಗೆ ಪುತ್ರಿಯಾಗಿ ಜನಿಸು ವೆನೆಂದು ಹೇಳಿ ಅವಳ ಹೃತ್ಕಮಲದಲ್ಲಿ ನೆಲೆಸುವಳು. ಮೇನೆಯು ಕ್ಷಿಪ್ರ ದಲ್ಲಿಯೆ ಗರ್ಭವತಿಯಾಗುವಳು. ಗರ್ಭವರ್ಣನೆಯನ್ನು ಎಂಟು ಪದ್ಯಗಳಲ್ಲಿ ಕವಿಯು ಮಿತವಾಗಿಯೆ ಮಾಡಿದ್ದಾನೆನ್ನಬಹುದು. ನವಮಾಸಗಳು ತುಂಬುವವು; ಶುಭಮುಹೂರ್ತಗಳು ಕಾದುಕೊಂಡಿದ್ದಂತೆ ಪಾರ್ವತಿಯು ಜನಿಸುವಳು. ಆದರೆ “ಶಿವಲಿಂಗೇಕ್ಷಣಲೋಲುಪೆ” ಯಾಗಿ ಕಣ್ಣು ಮುಚ್ಚಿಕೊಂಡೇ ಇರುವಳು. ತಾಯಿ-ತಂದೆಗಳು ಅಂಜಿ ಗುರುವಾದ ಶೈವಾಚಾರ್ಯರನ್ನು ಕೇಳಲು, ಅವರು ಶಿವಲಿಂಗವನ್ನು ತೋರಿಸಿದರೆ ಶಿಶುವು ಕಣ್ಣು ತೆರೆಯಬಹುದೆಂದು ಹೇಳುವರು. ಅದೇ ಮೇರೆಗೆ ಶಿವಲಿಂಗ ವನ್ನು ತೋರಿಸಲು ಪಾರ್ವತಿಯು ಕಣ್ಣು ತೆರೆದು ಮೊಲೆವಾಲನುಂಡು ಯಥಾ ಪ್ರಕಾರ ಶಿಶುಚೇಷ್ಟಿತಗಳನ್ನಾರಂಭಿಸುವಳು. ಕ್ರಮೇಣ ಅಭಿವರ್ಧಿಸುತ್ತ ಬಾಲಲೀಲೆಯನ್ನು ಮೆರೆಯುವಳು. ಬಾಲ್ಯಾವಸ್ಥೆಯಲ್ಲಿ ಶಿವನಿಳಯದಲ್ಲ ಆಡುವುದು, ಮಳಲ ಲಿಂಗವನ್ನು ಪೂಜಿಸುವುದು ಪಾರ್ವತಿಯ ನಿತ್ಯದ

ಆಟಗಳಾಗಿದ್ದವು. ಶಿವಲಿಂಗಪೂಜೆಯು ನಿಬ್ಬೆರಗಿನಲ್ಲಿ ಮೈಮರೆಯುತ್ತಿದ್ದ ಳೆಂಬುದನ್ನು ಬಣ್ಣಿಸುವಾಗ ಕವಿಯು ಶಿವಪೂಜೆಯ ನಿಜವಿಧಾನವನ್ನು ತಿಳಿಸಿದ್ದಾನೆ. ಬಾಹ್ಯೋಪಕರಣಗಳಿಗಿಂತಲೂ ಅಂತಃಶುದ್ಧಿಯು ಹೆಚ್ಚಿನ ದೆಂಬುದನ್ನು ಗಿರಿಜೆಯ ಪೂಜಾಕ್ರಮದಲ್ಲಿ ಪ್ರಕಟವಾಗುವಂತೆ ಮಾಡಿದ್ದಾನೆ. ನೂತನ ಕಲ್ಪನೆಯ ಪರಮಾವಧಿಯನ್ನು:—

ತರಣಿಯ ಮಧುಕರನಿಕರದ ।
ಮರುತನ ಕಾಲ್ಗುಳಿಯಿವೆಂದು ಪೂವಂ ಬಿಟ್ಟಾ ॥
ಗಿರಿಸುತೆ ಮನಃಕುಸುಮದಿಂ ।
ಪರಮನನೇಕಾಂತಭೂಮಿಯೊಳ್ ಪೂಜಿಸುವಳ್ ॥

ಎಂಬುದರಲ್ಲಿ ತೋರಿಸಿದ್ದಾನೆ. ಗಿರಿಜಾತೆಯು ಈ ರೀತಿ "ಶಿವನಂ ಮರುಳ್ಗೊಂಡಿ" ರುವುದನ್ನು ಕಂಡು ಅವಳ ಸಹಚರಿಯರು ಗಿರಿರಾಜನಿಗೆ ತಿಳಿಸುತ್ತಾರೆ. ಆತನು ಅಲ್ಲಿಗೆ ಹೋಗಿ ಪೂಜಾನಿರತಳಾಗಿದ್ದ ಮಗಳನ್ನು ಕರೆಯಲು, "ಪುತ್ರೀಭಾವವ ನಟಿಸಲೆಂದು" ಗಿರಿಜಾತೆಯು ಶಿವಲಿಂಗವನ್ನು ಬೀಳ್ಕೊಂಡು ತಂದೆಯೊಡನೆ ಮನೆಗೆ ಹಿಂದಿರುಗುವಳು.

**೪ನೆಯ ಆಶ್ವಾಸ:—** ತಾಯ್ತಂದೆಗಳ ಪಾಲನೆಯಲ್ಲಿ ಗಿರಿಜಾತೆಯು ಬಾಲ್ಯವನ್ನು ಕಳೆದು, ಯೌವನಪದಾರೂಢಳಾಗುವಳು.

ನವಕುಚಕಳಶಂಗಳಿನೊ ।
ಣ್ಮುವ ಮುಡಿಗುಡಿಯಿಂ ಮಿ ।
ಕ್ಕವಯವದಿಂದಗಜೆ ಯೌವನಮನಿದಿರ್ಗೊಂಡಳ್ ॥

ಎಂದು ಮುಂತಾಗಿ ಗಿರಿಜೆಯ ಯೌವನೋದಯವನ್ನು ಕವಿಯು ರಸವತ್ತಾಗಿ ವರ್ಣಿಸಿದ್ದಾನೆ. ಓರಗೆಯ ಗೆಳತಿಯರೊಡನೆ ಗಿರಿಜೆಯು ಸಕಲ ಲೀಲಾ ವಿಲಾಸವನ್ನು ಮಾಡುತ್ತಿರುವಳೆಂಬ ಅವಕಾಶವನ್ನು ಕಲ್ಪಿಸಿಕೊಂಡು ಕವಿಯು ಕಾವ್ಯಾಂಶವಾದ ಜಲಕ್ರೀಡೆಯನ್ನಿಲ್ಲಿ ತಂದೊಡ್ಡಿದ್ದಾನೆ. ಇತ್ತ ನವಯೌವನವತಿಯಾದ ಮಗಳನ್ನು ಕಂಡು ತಾಯ್ತಂದೆಗಳು ಅವಳ ವಿವಾಹದ ವಿಚಾರ

ವನ್ನು ತಮ್ಮೊಳಗೆ ಮಾಡುತ್ತಿರುವಷ್ಟರಲ್ಲಿ ನಾರದ ಋಷಿಯು ಸ್ವರ್ಗಲೋಕ ದಿಂದ ಅವರಲ್ಲಿಗೆ ಬರುತ್ತಾನೆ. ಗುರುಮೂರ್ತಿಯೆಂದು ಆತನನ್ನು ಆದರ ಪೂರ್ವಕವಾಗಿ ಸತ್ಕರಿಸುತ್ತಿರುವಲ್ಲಿ ಸಖೀಜನರೊಡನೆ ಗಿರಿಜೆಯು ಬಂದು ತಂದೆಯ ತೊಡೆಯಮೇಲೆ ಕುಳಿತುಕೊಳ್ಳುತ್ತಾಳೆ. ನಾರದನು ಅವಳಿಗೆ ಭಯಭಕ್ತಿಯಿಂದ ಸಾಷ್ಟಾಂಗ ಪ್ರಣಾಮವನ್ನು ಮಾಡಿ “ ತಾಯೇ, ತವರೇ ತ್ರಿಭುವನದಾಯುವೇ ಕರುಣಿಸ”ಂದು ಸ್ತೋತ್ರ ಮಾಡುತ್ತಾನೆ. ಇದನ್ನು ಕಂಡು ಆಶ್ಚರ್ಯಚಕಿತರಾದ ಗಿರಿರಾಜಮೇನೆಯರು ತಮ್ಮ ಮಗಳನ್ನು ನುತಿಸಿದ ಕಾರಣವನ್ನು ಕೇಳಲು, ನಾರದನು ನಸುನಕ್ಕು, “ ಮನುಮುನಿ ಬ್ರಹ್ಮರಿಗೆ ನಿಲುಕದ ಅಗಜೆಯ ಚರಣಗಳಿಗೆ ಎರಗಲು ನಾನೆಷ್ಟರವನು ? ಏನೋ ಒಂದು ನೆವದಿಂದ ಪಾರ್ವತಿಯು ನಿಮ್ಮ ಪುಣ್ಯೋದರದಲ್ಲಿ ಬಂದರೆ ಜಗನ್ಮಾತೆಯನ್ನು ನಿಮ್ಮ ಮಗಳೆಂದು ಕರೆಯಬಹುದೇ? ತಾಯೇ ನವರತ್ನಕ್ಕೆ ಅಬ್ಧಿ ? ಚಿಂತಾಮಣಿಗೆ-ಮೊರಡಿ ? ಮುತ್ತಿಂಗೆ-ಸಿಂಪು ಇಂದುವಿಂಗಂ-ರವಿಗಂ ಪೂರ್ವಾಶೆ? ಲಿಂಗಕ್ಕೆ ಅವನಿ? ಸುಧೆಗೆ-ದುಗ್ಧಾಬ್ಧಿ? ಪದ್ಮಕ್ಕೆ-ಪಂಕಂ?” ಎಂದು ಕೇಳುತ್ತಾನೆ. “ ಶಿವನ ಅರ್ಧಾಂಗಿಯಾದ ಈಕೆಯನ್ನು ಆತನಲ್ಲಿಗೆ ಕಳು ಹಿಸಿ; ಆತನೇ ಇವಳಿಗೆ ತಕ್ಕವರನು ” ಎಂದು ಅವರನ್ನು ಒಡಂಬಡಿಸುತ್ತಾನೆ. ಸಂಧ್ಯಾಕಾಲವಾಗುವುದು. ಗಿರಿರಾಜನು ನಾರದನೊಡನೆ ಶಿವಾರ್ಚನೆಮಾಡಿ ರಾತ್ರಿ ವಿಹಾರಾರ್ಥವಾಗಿ ಅವರೀರ್ವರು ಸಚಿವ ಸಾಮಂತರೊಡನೆ ಹೊರಡು ತ್ತಾರೆ. ಈ ಪ್ರಸಕ್ತಿಯನ್ನುಪಯೋಗಿಸಿ ಕವಿಯು ಕಗ್ಗತ್ತಲೆ, ಬೆಳದಿಂಗಳು ಪಣ್ಯಾಂಗನಾವೀಧಿ, ವಿರಹವ್ಯಥೆ ಇವುಗಳ ಸವಿಸ್ತಾರವರ್ಣನೆಯಲ್ಲಿ ಈ ಆಶ್ವಾಸಾಂತದ ವರೆಗೆ ಅನೇಕ ಪದ್ಯಗಳನ್ನು ವೆಚ್ಚಮಾಡಿದ್ದಾನೆ. ಇಲ್ಲಿ ಋಷಿ ಶ್ರೇಷ್ಠನೂ ಆದರ್ಶಬ್ರಹ್ಮಚಾರಿಯೂ ಆದ ನಾರದನನ್ನು ಕರೆದುಕೊಂಡು ಗಿರಿರಾಜನು ರಾತ್ರಿ ವಿಹಾರವನ್ನು ಈ ರೀತಿಯಾಗಿ ಮಾಡಿದನೆಂದು ವರ್ಣಿಸು ವುದು ಕಥಾಪೋಷಣೆಗೆ ಯಾವರೀತಿಯಿಂದಲೂ ಸಹಾಯಕಾರಿಯಾಗದೆ ಓದು ಗರ ಮನಸ್ಸಿನಲ್ಲಿ ಬೇಸರವನ್ನುಂಟುಮಾಡುತ್ತದೆನ್ನಬಹುದು; ಔಚಿತ್ಯಭಂಗ ವುಂಟಾಗಿದೆಯೆಂದೂ ಹೇಳಬಹುದು. ಆದರೆ ಸಂಪ್ರದಾಯದ ಮೇರೆ ಬಂದ ಈ ವರ್ಣನೆಗಳನ್ನು ಸ್ವತಂತ್ರವಾದವುಗಳೆಂದು ಕಲ್ಪಿಸಿದರೆ ಒಂದೊಂದೂ ಮನೋಹರವಾಗಿವೆಯೆಂಬುದು ಮಾತ್ರ ಸ್ಪಷ್ಟವಾಗುತ್ತವೆ.

**೫ನೆಯ ಆಶ್ವಾಸ;**— ಬೆಳಗಾದೊಡನೆಯೆ ಗಿರಿರಾಜನು ಪಾರ್ವತಿಯ ನ್ನೊಡಗೊಂಡು ಹಂಪೆಯ ನೆರೆಯಲ್ಲಿ ತುಂಗಭದ್ರಾ ತೀರದಲ್ಲಿ ಹೇಮಕೂಟಾ ಚಲಕ್ಕೆ ಬರುವನು. ಅಲ್ಲಿ ನಿಜಧ್ಯಾನದಲ್ಲಿದ್ದ ಶಿವನನ್ನು ಕಂಡು ಹರ್ಷದಿಂದ "ಮೆಯ್ಯಿಕ್ಕಿ ನಿಂದು ಕೈಯಂಮುಗಿದು" ಪಾರ್ವತಿಯನ್ನು ಕರೆದು ಶಿವನನ್ನು ಅರ್ಚಿಸೆಂದು ಹೇಳುವನು. ಇಲ್ಲಿ ತನ್ನ ಇಷ್ಟದೇವತೆಯಾದ ಹಂಪೆಯಾಳ್ದ ನಲ್ಲಿದ್ದ ನಿಜಭಕ್ತಿಯನ್ನೇ ಕವಿಯು ಗಿರಿರಾಜನಲ್ಲಿ ಆಹ್ವಾನಿಸಿದ್ದಾನೆ. ಗಿರಿ ರಾಜನ ಬಾಯಲ್ಲಿ ಬಂದ ಕೆಳಗಣ ಪದ್ಯವು ಕವಿಯ ಪಂಪಾಶತಕದ ದಾಟಿ ಯನ್ನೆ ನೆನಪಿಗೆ ತಂದುಕೊಡುತ್ತದೆ:—

ಅನುಪಮನಿರ್ದನಿರ್ದನೆ ಶರಣ್ಬುಗು ಶಾಶ್ವತಮೂರ್ತಿಯಿರ್ದನಿ |
ರ್ದನೆ ನಡೆನೋಡು ಚಂದ್ರಧರನಿರ್ದನೆ ನಂಬು ನಿಜೇಶನಿರ್ದನಿ ||
ರ್ದನೆ ಪರಿಭಾವಿಸಪ್ರತಿಮನಿರ್ದನೆ ಕೀರ್ತಿಸು ಶಂಭುವಿರ್ದನಿ |
ರ್ದನೆ ಪದೆದರ್ಚಿಸರ್ಚಿಸೊಲವಿಂದಮೆ ಪಾರ್ವತಿ ಹಂಪೆಯಾಳ್ದನಂ ||

ಪಾರ್ವತಿಯಾದರೂ ಅಹಂಕಾರ, ಕಾರ್ಪಣ್ಯ, ನಿರ್ವೇದ, ಆಶೆ ಮೊದಲಾದ ಭಾವಗಳಿಂದ ಕೂಡಿದವಳಾಗಿ ಶಿವನನ್ನು ಕಣ್ತುಂಬ ನೋಡಿ ನಮಸ್ಕರಿಸಿ, " ಶಿವನನ್ನು ನನ್ನ ಗುರುವೆಂದೂ ನನ್ನಾಳ್ದನೆಂದೂ ನಂಬಿದ್ದೇನೆ; ನಿತ್ಯಾರ್ಚ ನೆಯ ಉತ್ಸವದಲ್ಲಿಯೆ ಇರುವೆನು; ನೀನು ಹೋಗೆಂದು" ತಂದೆಯನ್ನು ಕಳು ಹಿಸುತ್ತಾಳೆ. ಸಹಚರಿಯರಾದ ಜಯೆವಿಜಯೆಗೊಳು "ಶಿವನನ್ನು ಅರಿಯು ವುದು ಹರಿಬ್ರಹ್ಮರಿಗೂ ಅಸಾಧ್ಯವಾದಾಗ ನನ್ನಳವೆ? ಭಕ್ತಿಯಿಂದ ಅರ್ಚಿಸು ವೆನು" ಎಂದು, ನೆರೆಯ ಉಪವನದಲ್ಲಿಯ ಹೂಗಳನ್ನು ತಂದು ಮಾಲೆಗಟ್ಟಿ ಈಶ್ವರನನ್ನು ಅರ್ಚಿಸಲಾರಂಭಿಸುತ್ತಾಳೆ. ಅರ್ಚಿಸುತ್ತ ಶಿವನ ಸರ್ವಾಂಗ ವನ್ನೀಕ್ಷಿಸುತ್ತ ಆತನಲ್ಲಿಯೇ ತಲ್ಲೀನಳಾಗುತ್ತಾಳೆ. ಅವಳ ಪೂಜಾವಿಧಿಯಲ್ಲಿ ಭಕ್ತಿಯಿದೆ. ಆದರೆ ಅದರ ಕಟ್ಟಡವು ಶೃಂಗಾರದ ತಳಹದಿಯ ಮೇಲೆ ನಿಂತಿದೆ. ಅಂತೆಯೆ ಮುಂದೆ ಶಿವನಿಂದ ಅವಳಿಗೆ ಅವಜ್ಞೆಯುಂಟಾಗುವದಿದೆ. ಕಾಮನನ್ನು ಸುಟ್ಟ ಶಿವನನ್ನು ಒಲಿಸಿಕೊಳ್ಳುವುದು ಶೃಂಗಾರವಲ್ಲ; ಘೋರ ತಪಶ್ಚರ್ಯವೆಂಬುದು ಗಿರಿಜೆಗೆ ಹಿಂದಿನಿಂದ ತಿಳಿಯುತ್ತದೆ. ಇದನ್ನೆಲ್ಲ

ಕವಿಯು ಸೂಕ್ಷ್ಮವಾಗಿ, "ಶೃಂಗಾರರಸಕ್ಕೆ ಮನದಂದು" "ನಾನಾಭೋಗ ದೊಳ್ ಕೂಡುವೆನೆಂಬಾಶೆಯಿಂದ" ಎಂದು ಮುಂತಾಗಿ ಅಲ್ಲಲ್ಲಿ ಸೂಚಿಸಿದ್ದಾನೆ.

**೬ನೆಯ ಆಶ್ವಾಸ:**— ಇತ್ತ ತಾರಕಾಸುರನೆಂಬ ರಕ್ಕಸನು ಪ್ರಬಲನಾಗಿ ಭುವನತ್ರಯವನ್ನು ಗೆಲ್ದು ಅಖಿಳಜನಕ್ಕೆ ತಪವನ್ನೊದವಿಸುತ್ತಾನೆ. ಅವನ ಅಟ್ಟುಳಿಯನ್ನು ತಾಳಲಾರದೆ ಸುರನರೋರಗರೆಲ್ಲರು ಬ್ರಹ್ಮಾದಿ ದೇವತೆಗಳಿಗೆ ಮೊರೆಯಿಡುತ್ತಾರೆ. ದೇವತೆಗಳು ತಾರಕಾಸುರನೊಡನೆ ಸಂಧಾನ ಮಾಡಲು ಯತ್ನಿಸಿ ಅದು ನಿಷ್ಫಲವಾಗಲು ಯುದ್ಧಕ್ಕೆ ಸಿದ್ಧರಾಗುತ್ತಾರೆ. ಘೋರ ಸಂಗ್ರಾಮವಾಗಿ ಅದರಲ್ಲಿ ದೇವತೆಗಳು ಪರಾಜಿತರಾಗುವರು. ಅವರ ಸೈನ್ಯ ವೆಲ್ಲ ಬೆಂಗೊಟ್ಟು ಓಡಿಹೋಗಿ ಮೇರುರಜತಾದ್ರಿಗಳ ಗುಹೆಗಳನ್ನು ಸೇರು ವುದು. ಹರಿಬ್ರಹ್ಮಸುರೇಂದ್ರರು ಮುಂದಣ ಕಾರ್ಯವನ್ನಾಲೋಚಿಸುತ್ತ ಶಿವನಿಂದ ಜನಿಸಿದ "ಕುಮಾರನ" ಹೊರತು ತಾರಕನನ್ನು ಗೆಲ್ಲುವದು ಅಸಾಧ್ಯವಾದುದರಿಂದ ಶಿವನ ತಪಸ್ಸನ್ನು ಕೆಡಿಸಿ ಅವನನ್ನು ಪಾರ್ವತಿಯೊ ಡನೆ ಕೂಡಿಸುವುದೇ ಉಪಾಯವೆಂದೂ, ಇದಕ್ಕೆ ಮನ್ಮಥನೇ ತಕ್ಕವನೆಂದೂ ಅವನನ್ನು ಕರೆಯಿಸುತ್ತಾರೆ.

**೭ನೆಯ ಆಶ್ವಾಸ:**—ಮನ್ಮಥನು ಬಂದೊಡನೆ ಅವನಿಗೆ ಶಿವನ ತಪೋ ಭಂಗವನ್ನು ಮಾಡೆಂದು ವಿಷ್ಣು ಆಜ್ಞಾಪಿಸುವನು. ಶಿವನ ತಪೋಭಂಗ ವೆಂದರೆ ತನ್ನ ಸರ್ವನಾಶವೆಂದರಿತ ಮನ್ಮಥನು:—

ಹರಿಯಲ್ಲಿಗೆ ತಮಮಂ ಕೇ।
ಸರಿಯಲ್ಲಿಗೆ ಕರಿಯುನಭ್ರ ಶಿಖಿಯಲ್ಲಿಗೆ ಕೇ॥
ಉರಗನನಟ್ಟುವ ತೆರದಿಂ।
ಹರನಲ್ಲಿಗೆ ತಂದೆ ಕಳಿಪುವರೆ ನೀವೆನ್ನಂ॥

ಎಂದು ಪ್ರಶ್ನೆಮಾಡುತ್ತಾನೆ. "ನಿನ್ನಿಂದ ಸಕಳಜಗಂ ಸುಖದಿಂದಿರ್ಪೊಡೆ ಹರಣದೊಂದು ಹುರುಳನರಸುವರೇ" ಎಂದು ವಿಷ್ಣುವು ಅವನನ್ನು ಒಪ್ಪಿಸು ತ್ತಾನೆ. "ಇಂದೆ ನೂರು ತೀವಿತ್ತೆಂದು" ಮನಸ್ಸು ಗಟ್ಟಿಮಾಡಿ ಕಾಮನು ಆ ಕಾರ್ಯವನ್ನು ಕೈಕೊಳ್ಳಲು ಸಿದ್ಧನಾಗುವನು. ಕೂಡಲೆ ವಸಂತಋತು

ತಲೆದೋರುವುದು; ಕಾಮನು ತನ್ನ ಪಂಚಶರಗಳನ್ನು ಸಜ್ಜುಗೊಳಿಸುವನು. ತನ್ನ ಸುಪ್ರಸಿದ್ಧ ಚತುರಂಗ ಬಲವನ್ನೂ ಮಂತ್ರಿ ಸೇನಾನಾಯಕರಾದ ವಸಂತ ಚಂದ್ರಮರನ್ನೂ ಬರಮಾಡಿಕೊಳ್ಳುವನು. ಅವರೆಲ್ಲರೂ—"ಶಿವನಲ್ಲಿ ತಂತಮ್ಮ ಪರಾಕ್ರಮನ್ನು ತೋರಿಸಿ ಆತನಲ್ಲಿ ಗೆಲ್ಲುವೆವು ಸಂದೇಹಬೇಡ" ವೆಂದು ಎದೆತಟ್ಟಿ ಹೇಳುವರು. ಇಲ್ಲಿಯ ವರ್ಣನೆಯು ವಿಚಿತ್ರವಾಗಿಯೂ ಹಾಸ್ಯರಸವ್ಯಂಗ್ಯವಾಗಿಯೂ ಇರುವುದು. ವಸಂತನು [ನಿನ್ನ ಬಾಣಗಳಾದ]

ಕಿಸಲಯದ ಕುಸುಮವಿತತಿಯ ।
ಪೆಸರೇಕಾಸ್ಥಾಣುವಿನ ವಿನಿಶ್ಚಲಮನಮಂ ॥
ಬೆಸುಗೆಗಳಿದೊಡೆದು ಮೂಡಲ್ ।
ಮಿಸುಪಂಕುರವೊಂದೆ ಸಾಲದೇ ಮದನನೃಪಾ ॥

ಎಂದು "ಬಡಾಯ" ಕೊಚ್ಚಿಕೊಳ್ಳುವಾಗ ಓದುಗರ ಮುಖದಲ್ಲಿ ಮುಗುಳ್ನಗೆ ಮೂಡುವುದು, ಕವಿಯ ಸಾಮರ್ಥ್ಯವೂ ಪ್ರಕಟವಾಗುವುದು. ಅಂತೂ ಅವರ ಹುರುಪಿನ ಮಾತಿಗೆ ಉಬ್ಬಿ ಮನ್ಮಥನು ಶಿವನನ್ನು ಗೆಲ್ಲುವೆನೆಂಬ ಹೆಮ್ಮೆಯಿಂದೆ ತನ್ನ ಪಡೆಯೊಡನೆ ಹೇಮಕೂಟಾಭಿಮುಖನಾಗಿ ಹೊರಡುವನು.

**೮ನೆಯ ಆಶ್ವಾಸ:**–ಕಾಮನ ಕಮನೀಯಬಲವು ಭೃಂಗಕೋಕಿಲಗಳ ವೀರವಾದ್ಯದಿಂದ ಕಳಕಳವನ್ನೆಬ್ಬಿಸುತ್ತ, ಮಾರ್ಗದಲ್ಲಿನ ಯೋಗಿಗಳನ್ನೂ ವಿರಹಿಗಳನ್ನೂ ನಿರಾಯಾಸವಾಗಿ ಗೆಲ್ಲುತ್ತ ಹೇಮಕೂಟಾಚಲಕ್ಕೆ ಬಂದು ಅದನ್ನು ಮುತ್ತುವುದು. ಆ ಸ್ಥಾನರಕ್ಷಕನಾದ ನಂದೀಶ್ವರನು ಈ ಸೈನ್ಯದ ಕಳಕಳರವಕ್ಕೆ ಶಿವಧ್ಯಾನದಿಂದ ಎಚ್ಚೆತ್ತು ಕೋಪದಿಂದ "ಇಂತಹ ಪುಂಡಾಟವನ್ನು ಮಾಡುವರಾರೆಂ"ದು ಗರ್ಜಿಸುವನು. ಕೂಡಲೆ ತನ್ನ ಬಲವು ಭಯಚಕಿತವಾಗಿ ದಿಕ್ಕೆಟ್ಟು ಓಡುವುದನ್ನು ಕಂಡ ಮನ್ಮಥನು "ನಂದೀಶನ ಬಲ್ಪೇ ಇಷ್ಟಾದಮೇಲೆ ಶಿವನನ್ನು ಎದುರಿಸುವದಂತೂ ಅಸಾಧ್ಯ" ವೆಂದು ಚಿಂತಿಸುತ್ತಿರಲು, ಶಿವಾರ್ಚನೆಗೆಂದು ಗಿರಿಜೆಯು ಪುಷ್ಪಕದಲ್ಲಿ ಬರುವುದನ್ನು ಕಂಡು ಅವಳ ಮರೆಹೊಗುವನು. ಈಶ್ವರನ ತಪವನ್ನು ಕೆಡಿಸುವುದು ತನಗೂ ಇಷ್ಟವಾದ ವಿಷಯವಾದುದರಿಂದ ಗಿರಿಜೆಯು ಅವನನ್ನು ತನ್ನ

ಪುಷ್ಪಕದ ಮರೆಯಲ್ಲಿಯೆ ಒಳಯಕ್ಕೆ ಕರೆದುಕೊಂಡು ಹೋಗುವಳು. ಶಿವ ಸಾನಿಧ್ಯವನ್ನೈದಿ "ಸಾಯಲ್ಬಲ್ಲರ" ದೇವನಾದ ಮನ್ಮಥನು ರತಿಯನ್ನು ಸಮೀಪದಲ್ಲಿರಿಸಿ ನಿಲ್ಲಿಸಿಕೊಂಡು ಶಿವನ ಮೇಲೆ 'ಉನ್ಮಾದನವೆಂಬ" ಒಂದು ಹೂಬಾಣವನ್ನು ಬಿಡುವನು. ಅದು ಶಿವನನ್ನು ಮುಟ್ಟಲಾರದೆ ಹಿಂದಿರುಗಿದುದನ್ನು ಕಂಡು " ಮದನ, ಮೋಹನ, ಸಂತಾಪ, ವಶೀಕರಣ " ವೆಂಬ ಉತ್ತರೋತ್ತರ ಕಠೋರಗಳಾದ ಶರಗಳನ್ನು ಒಂದೊಂದಾಗಿ ಬಿಡುವನು. ಅವೆಲ್ಲವೂ ನಿಷ್ಫಲವಾಗುವವು. ಮನ್ಮಥನು ಸ್ವಲ್ಪ ಉತ್ಸಾಹಭಂಗನಾಗುವನು. ಈ ಕೌತುಕವನ್ನು ನೋಡುತ್ತಲಿದ್ದ ದೇವತೆಗಳ ಮಧ್ಯದಲ್ಲಿದ್ದ ನಾರದನು " ಎತ್ತಣ ಕಾಮು, ಎತ್ತಣ ಅಭವ, ಎತ್ತಣ ಬಾಣ " ಎಂದು ಮದನನ್ನು ಅಣಕವಾಡುವನು. ಅಷ್ಟರಲ್ಲಿ ನಿತ್ಯದಂತೆ ಗಿರಿಜಾತೆಯು ಶಿವನನ್ನು ಅರ್ಚಿಸಲಾರಂಭಿಸಿ ಆತನ ಸರ್ವಾಂಗವನ್ನು ಪುಷ್ಪಗಳಿಂದ ಅಲಂಕರಿಸುತ್ತ, " ಕುಸುಮಶರಂಗಳಂತೆಯುಮಿರ್ದ ತನ್ನ ಸವಿಸುಪ್ಪಿಗಳಿಂದ ಹರನಂ ನೋಡುತುಂ ತಪೋಭರಮಂ ಬಿಡಿಸಲಿರ್ದ" ಪಾರ್ವತಿಯನ್ನು ನೋಡಿ ಮದನನು ಹುರುಪುಗೊಂಡು ಐದೂ ಅಂಬುಗಳನ್ನು ಒಟ್ಟಿಗೆ ಶಿವನ ಮೇಲೆ ಬಿಡುವನ್ನು ಹರಿವಿರಿಂಚಾದಿ ದೇವತೆಗಳ ಮನದ ಬಯಕೆಯೂ, ಪಾರ್ವತಿಯ ಮನೋರಥವೂ, ಕಾಮನ ಪಂಚಬಾಣಾನುಸಂಧಾನವೂ ಕೂಡಿ ಶಿವನ ತಪಸ್ಸನ್ನು ಭಂಗಮಾಡುವುವು. ಶಿವನು ಕಣ್ದೆರೆದು ಮುಂದಿರ್ದ ಪಾರ್ವತಿಯನ್ನು ನೋಡಿ ಈ ಸ್ಥಿತಿಯುಂಟಾದ ಕಾರಣವನ್ನು ಅರಸುತ್ತ ಎಡಗಡೆ ನಿಂತಿದ್ದ ಕಾಮನನ್ನು ಸಮುಗೋಪದಿಂದ ನೋಡಲು ಆತನ ಹಣೆಗಣ್ಣುರಿಯಿಂದ ಕಾಮನು ಬೆಂದು ಹೋಗುವನು. ಕೂಡಲೆ ಅವನ ಭಸ್ಮವನ್ನು ಮೈಗೆ ಸವರಿಕೊಂಡು ಶಿವನು ಪಾರ್ವತಿಯನ್ನು ನೋಡದೆಯೂ ನುಡಿಸದೆಯೂ ಅಂತರ್ಧಾನನಾಗುವನು. ಇತ್ತ ರತಿ ಕಾಮನ ವಿನಾಶಕ್ಕೆ ಬಹುವಾಗಿ ಶೋಕಿಸಿ ಗಿರಿಜಾತೆಯು ಮರೆಹೋಗುತ್ತಾಳೆ. ಗಿರಿಜಾತೆಯು ಅವಳ ಗಂಡನನ್ನು ಬದುಕಿಸಿ ಕೊಡುವುದಾಗಿ ಅಭಯಕೊಡುತ್ತಾಳೆ. ಶಿವನ ಅವಜ್ಞೆಯಿಂದ ಪಾರ್ವತಿಯ ಸ್ವಾಭಿಮಾನವು ಉಜ್ವಲಗೊಳ್ಳುವುದು. ಶಿವನಿದ್ದಲ್ಲಿ ತಾನು ಹೋದರೆ ತನ್ನನು ನುಡಿಸದೆ ಹೋದುದರಿಂದ ತಾನಿದ್ದಲ್ಲಿಗೆ ಅವನನ್ನು ಬರಮಾಡಿಕೊಳ್ಳುವೆನೆಂದು ಪ್ರತಿಜ್ಞೆಮಾಡುವಳು.

**೯ನೆಯ ಆಶ್ವಾಸ:**–ಪಾರ್ವತಿಯು ತಪಸ್ಸಿಗೆ ತಕ್ಕ ವೇಷವನ್ನು ಧರಿಸಿ ಹೇಮಕೂಟದ ಅಗ್ರದಲ್ಲಿ ಶಿವನನ್ನು ಕುರಿತು ಉಗ್ರತಪವನ್ನು ಆಚರಿಸುತ್ತಾಳೆ. ಬೇಸಗೆಯಲ್ಲಿ ಪಂಚಾಗ್ನಿ ಮಧ್ಯದಲ್ಲಿ ನಿಂತು, ಮಳೆಗಾಲದಲ್ಲಿ ಮಳೆ ನಿಂತರೂ ಹನಿನಿಲ್ಲದ ಆಲದಮರದ ಕೆಲದಲ್ಲಿ ನೆಲಸಿ, ಚಳಿಗಾಲದಲ್ಲಿ "ಮಂಜು ನೆರೆ ಮಾಣೊಡೆ ಶೀತಂ ಮಾಣದಿರ್ಪ" ಕಾಸಾರತಟದಲ್ಲಿ ನಿಂದು ಗಿರಿಜಾತೆಯು ನಿಷ್ಠುರ ತಪಸ್ಸನ್ನು ಆಚರಿಸುತ್ತಿರಲು, ಶಿವನು ಅದನ್ನು ತಿಳಿದು ಇನ್ನು ತಡ ಮಾಡಬಾರದೆಂದು ಅವಳ ಪರೀಕ್ಷೆಗಾಗಿ ವಟುವೇಷವನ್ನು ತಳೆದು ಅಲ್ಲಿಗೆ ಬರುತ್ತಾನೆ. ಗಿರಿಜಾತೆಯ ಸಹಚರಿಯರಾದ ಜಯೆವಿಜಯೆರು ಆತನಿಗೆ ಅತಿಥಿಸತ್ಕಾರವನ್ನು ಮಾಡಿ ಫಲಾಹಾರವನ್ನು ತಂದಿಡುತ್ತಾರೆ ಪಾರ್ವತಿಯನ್ನು ಕೆಣಕಬೇಕೆಂದಿದ್ದ ಶಿವನು "ತಪಸ್ಸನ್ನು ಮಾಡುತ್ತಿದ್ದ ಈ ಕನ್ನೆ ಯಾರು? ಯಾರ ಸಲುವಾಗಿ ತಪವಾಚರಿಸುತ್ತಾಳೆ" ಎಂದು ಕೇಳುತ್ತಾನೆ. "ಆ ಸುದ್ದಿ ನಿಮಗೇಕೆ? ಫಲಾಹಾರವನ್ನು ಮಾಡಿರಿ" ಎಂದು ಅವರು ಉತ್ತರವಿತ್ತರೂ ಶಿವನು "ಏಕೆ, ಕೇಳಿದರೇನು ದೋಷ? ಇಂತಹ ಹೊಸ ಹರೆಯದಲ್ಲಿ ಈ ಬಗೆಯ ಉಗ್ರತಪಸ್ಸನ್ನು ಸಹಿಸುವದು ಇವುಗಳಿಂದ ಹೇಗಾದೀತು?" ಎಂದು ಕೇಳುತ್ತಿದ್ದಂತೆ ಅವನ ಮಾತುಗಳು ಪಾರ್ವತಿಯನ್ನು ಎಚ್ಚರಗೊಳಿಸುವವು. ವಟುವೇಷದಲ್ಲಿದ್ದರೂ ಆತನ ದರ್ಶನದಿಂದ ಅವಳಿಗೆ ಹರ್ಷಸುಖವುಂಟಾಗುವುದು. ಶಿವನಿಗೂ "ಆತುರಪುಳಕ" ವುಂಟಾಗಿ ತನ್ನ ನಿಜರೂಪವನ್ನು ತೋರಬೇಕೆಂದೆನಿಸಿವರೂ ಸಾವರಿಸಿಕೊಂಡು ಆಕೆಯನ್ನೇ ಕುರಿತು "ಎಲೌ ಮುಗ್ಧೇ ಕೋಮಲಕಾಯಳಾದ ನೀನು ಇಷ್ಟು ಕಠೋರ ತಪಸ್ಸನ್ನೇಕೆ ಆಚರಿಸುವೆ? ಯಾರ ಸಲುವಾಗಿ? ಅಂತಹ ಪುಣ್ಯ ಪುರುಷನದಾವನು?" ಎಂದು ಬೆಸಗೊಳ್ಳುತ್ತಾನೆ. ಆಕ್ಷೇಪಸೂಚಕವಾದ ಈಮಾತುಗಳು ಪಾರ್ವತಿಗೆ ಚಿಂತೆಯನ್ನುಂಟು ಮಾಡುತ್ತವೆ. ಹೇಳಲೆ ಬೇಡವೆ ಎಂದು ವಿಚಾರಮಾಡಿ ಕೊನೆಗೆ ಶಂಕರನ ಹೆಸರನ್ನು ಹೇಳುವಳು. ಶಿವನು ಬೇಕೆಂತಲೆ ಗಹಗಹಿಸಿ ನಕ್ಕು "ಹೇ ಕೋಮಲಾಂಗಿ, ಕಾಮಹರನಲ್ಲಿ ಸುಡುಗಾಡ ಸೇರಿದವನಲ್ಲಿ ಹೇಗೆ ಮನಸ್ಸಿಟ್ಟೆ?

ನೀನಿನಿಯಳ್ ವಿಷನಾತಂ |
ನೀನತಿಪ್ಪುದು ಕಠಿಣಗುಣಗಣಾಶ್ರಯನಾತಂ |

ನೀನಬಲೆಯುಗ್ರನಾತಂ |
ನೀನುರುತರಭೀರು ಸರ್ಪಭೂಷಣನಾತಂ ||

ಇಂತಹನಿಗೆ ಅಂಜದೆ ಮನವನೆಂತು ಮಾಡಿದೆ ? " ಎಂದು ಅವಳ ಮನಸ್ಸಿಗೆ ಚುಚ್ಚುವಂತೆ ಶಿವನನ್ನು ನಿಂದಿಸಿ ಮಾತಾಡುತ್ತಾನೆ. ಪಾರ್ವತಿಗೆ ಅತ್ಯಂತ ಕೋಪಬರುತ್ತದೆ. ತಪಸ್ಸಿನಲ್ಲಿ ಕೋಪಿಸುವುದು ತಪಕ್ಕೆ ಕೇಡುಂಟುಮಾಡುತ್ತದೆಯಾದರೂ ಪತಿನಿಂದೆಯನ್ನು ಕೇಳುವುದು ಹೆಚ್ಚಿನ ಪಾಪವೆಂದು ಬಗೆದು ಪಾರ್ವತಿಯು ಆ ವಟುವನ್ನು ವಿಭೂತಿಯ ಚೂರಿನಿಂದ ಹೊಡೆಯುತ್ತಾಳೆ ಕೂಡಲೆ ಶಿವನ ಹುಸಿರೂಪು ಹೋಗಿ ನಿಜರೂಪವು ಗೋಚರವಾಗುತ್ತದೆ ಈ ಆಶ್ವಾಸದಲ್ಲಿ ಕವಿಯು ತನ್ನ ಸಾಮರ್ಥವನ್ನು ಚೆನ್ನಾಗಿ ತೋರಿಸಿ ಕೊಂಡಿದ್ದಾನೆ. ವಟುವೇಷದಲ್ಲಿ ಶಿವನು ಹೇಮಕೂಟಚಲಕ್ಕೆ ಬಂದ ಸನ್ನಿವೇಶವು ಅತ್ಯಂತ ರಸಭರಿತವಾಗಿದೆ.

**೧೦ನೆಯ ಅಶ್ವಾಸ:**–ಶಿವನ ನಿಜರೂಪವನ್ನು ಕಂಡ ಪಾರ್ವತಿಯು ಸಹಜಲಜ್ಜೆಯಿಂದ ತಲೆವಾಗುತ್ತಾಳೆ. ಶಿವನು ತವಕದಿಂದ ಅವಳ ಕೈಹಿಡಿದು ತನ್ನೊಡನೆ ಕೂಡಲೇ ಕೈಲಾಸಕ್ಕೆ ಬಾಯೆಂದು ಕರೆಯುತ್ತಾನೆ. ಗಿರಿಜಾತೆಯು ಅದಕ್ಕೊಪ್ಪದೆ ಗಿರಿರಾಜನಿಂದ ತನ್ನನ್ನು ಬೇಡಿ ಲಗ್ನವಾಗಬೇಕೆಂದು ಕೇಳಿಕೊಂಡು ಶಿವನನ್ನು ಬೇಡಿಕೊಳ್ಳುತ್ತಾಳೆ. ಅಷ್ಟರಲ್ಲಿ ರತಿಯು ಅಲ್ಲಿಗೆ ಬಂದು ಪ್ರಣಾಮಮಾಡಲು ಅವಳ ಪತಿಯಾದ ಕಾಮನನ್ನು ಬದುಕಿಸಬೇಕೆಂದು ಪಾರ್ವತಿಯು ಶಿವನನ್ನು ಬೇಡಿಕೊಳ್ಳುತ್ತಾಳೆ. ಶಿವನು ಮನ್ಮಥನು ಅನಂಗನಾಗಿ ರತಿಯೊಡನೆ ಇರಲೆಂದು ಹೇಳಿ ಅಂತರ್ಧಾನನಾಗುತ್ತಾನೆ. ಪಾರ್ವತಿಯು ಮನೆಗೆ ಹಿಂತಿರುಗಲು ತಾಯ್ತಂದೆಗಳು ಅವಳನ್ನು ಸಂಭ್ರಮ ದಿಂದ ಇದಿರ್ಗೊಳ್ಳುವರು. ಮುಂದೆ ಶಿವನಪರವಾಗಿ ಸಪ್ತಋಷಿಗಳು ಗಿರಿರಾಜನಲ್ಲಿಗೆ ಬಂದು ಕನ್ಯಾನಿಶ್ಚಯವನ್ನು ಮಾಡುವರು. ಕೂಡಲೇ ಗಿರಿರಾಜನು ವಿವಾಹ ವ್ಯವಸ್ಥೆಯನ್ನು ಕೈಕೊಳ್ಳುವನು. ವಿಶ್ವಕರ್ಮನು ಶಿವನ ವಿವಾಹಕ್ಕೆ ತಕ್ಕುದಾದ ಕಲ್ಯಾಣಮಂಟಪವನ್ನು ನಿರ್ಮಿಸುವನು. ಶುಭ ಮುಹೂರ್ತದಲ್ಲಿ ಶಿವಗಿರಿಜೆಯರ ವಿವಾಹವು ಬಹು ವಿಜೃಂಭಣೆಯಿಂದ ಸುರ ನರೋರಗರ ಮುಂದೆ ಸಾಂಗವಾಗುವುದು. ಪಾರ್ವತಿಯನ್ನೊಡಗೊಂಡು

ಶಿವನು ಕೈಲಾಸಕ್ಕೆ ಹೋಗುವನು. ಶಿವನಿಂದ ಜನಿಸಿದ ಏಳುದಿನದ ಕುಮಾರನಿಂದ ತಾರಕಾಸುರನು ಹತನಾಗಿ ಮೂಲೋಕವು ಸಂತೋಷವನ್ನು ತಾಳುವುದು.

ಹರಿಹರನು ಈ ಕಥೆಯನ್ನು ನೆಯ್ದ ಬಗೆಯನ್ನು ವಿವೇಚಿಸಿದರೆ ಆತನಿಗೆ ಮುಖ್ಯವಾಗಿ ಹೇಳಬೇಕಾಗಿದ್ದ ವಿಷಯವು ಪಾರ್ವತೀ-ಪರಿಣಯವಾಗಿದ್ದು ಅದಕ್ಕೆ ಪೋಷಕವಾದ ಅಂಗಗಳೆಂದು ಪಾರ್ವತಿಯ ಜನನ-ಬಾಲ, ಬಾಲ್ಯದಲ್ಲಿ ಸಹ ಶಿವನಲ್ಲಿದ್ದ ಅವಳ ಸಹಜಭಕ್ತಿ, ಯೋಗಸಮಾಧಿಯಲ್ಲಿದ್ದ ಶಿವನನ್ನು ಅವಳು ಪೂಜಿಸುವ ವಿಧ, ಮನ್ಮಥನ ದಹನ, ಪಾರ್ವತಿಯ ಉಗ್ರ ತಪಸ್ಸು, ಶಿವನ ಪ್ರಸನ್ನತೆ ಇವುಗಳನ್ನು ಕವಿಯು ತಕ್ಕಷ್ಟು ವಿಸ್ತಾರವಾಗಿ ವರ್ಣಿಸಿದ್ದಾನೆ. ಕಾಳಿದಾಸನ ಕುಮಾರ ಸಂಭವ ಕಾವ್ಯಕ್ಕೂ ಇದೇ ಕಥೆ ವಸ್ತುವಾಗಿದ್ದರೂ ಆ ಕವಿಗೆ ಕುಮಾರನ ಉತ್ಪತ್ತಿಯೂ, ತಾರಕಾಸುರನ ವಧವೂ ಮುಖ್ಯವಾದವುಗಳಾದುದರಿಂದ ಆ ಭಾಗಗಳನ್ನು ಹೆಚ್ಚು ವಿಸ್ತರಿಸಿ ಬರೆದಿದ್ದಾನೆ. ಇದಲ್ಲದೆ ಬಾಲ್ಯದಲ್ಲಿ ಪಾರ್ವತಿಯು ಪ್ರಕಟಿಸಿದ ಶಿವನಲ್ಲಿಯ ಭಕ್ತಿಯನ್ನು ಕಾಳಿದಾಸನು ವರ್ಣಿಸಿರುವುದಿಲ್ಲ. ಪಾರ್ವತಿಯ ತಪಶ್ಚರ್ಯದ ಕಾಲಕ್ಕೆ ಶಿವನು ವಟುವೇಷದಲ್ಲಿ ಬಂದಾಗ ಆತನಿಗೆ ಆದರ ಸತ್ಕಾರವನ್ನು ಮಾಡಿದವಳು ಪಾರ್ವತಿಯೇ ಎಂದೂ, ಶಿವನು ಅವಳನ್ನೇ ಮಾತಾಡಿಸಿ ತಪಶ್ಚರ್ಯದ ಕಾರಣವನ್ನು ಕೇಳಿದನೆಂದೂ ಕಾಳಿದಾಸನು ಬಣ್ಣಿಸಿದ್ದಾನೆ. ಹರಿಹರನು ಹಾಗೆ ಹೇಳದೆ ಶಿವನು ತಪೋವನಕ್ಕೆ ಬಂದಾಗ ಪಾರ್ವತಿಯು ಧ್ಯಾನಸ್ಥಳಾಗಿದ್ದಳೆಂದೂ ಅವಳ ಸಹಚರಿಯರು ಆತನಿಗೆ ಅತಿಥಿ ಸತ್ಕಾರವನ್ನು ಮಾಡಿದರೆಂದೂ, ಪಾರ್ವತಿಯ ತಪಸ್ಸಿನ ವಿಷಯವಾಗಿ ಶಿವನು ಅವರನ್ನೇ ಮೊದಲು ಕೇಳಿದವನೆಂದೂ ವರ್ಣಿಸಿದ್ದಾನೆ. ಇಂತಹ ಅನೇಕ ವ್ಯತ್ಯಾಸಗಳನ್ನು ಕಾಣಬಹುದಲ್ಲದೆ ವರ್ಣನೆಯಲ್ಲಿಯಾಗಲೀ ಇತರ ಸಂಗತಿಗಳಲ್ಲಾಗಲಿ ಹರಿಹರನು ಕಾಳಿದಾಸನನ್ನು ಅನುಕರಿಸಿದಂತೆ ಕಾಣುವುದಿಲ್ಲ. ಸ್ವತಂತ್ರವಾಗಿಯೇ ತನ್ನ ಕಾವ್ಯವನ್ನು ರಚಿಸಿದ್ದಾನೆಂದು ಹೇಳಬಹುದು.

# ೩ ಹರಿಹರನ ಶೈಲಿವರ್ಣನೆ ಇತ್ಯಾದಿ.

ಹರೀಶ್ವರನು ಗಿರಿಜಾಕಲ್ಯಾಣವನ್ನು ಜೈನಪದ್ಧತಿಗನುಸಾರವಾಗಿ ಚಂಪೂಶೈಲಿಯಲ್ಲಿ ರಚಿಸಿದ್ದಾನೆಂದು ಸ್ಥೂಲವಾಗಿ ಹೇಳಬಹುದಾದರೂ ಅದ ರಿಂದ ಅವನ ಶೈಲಿಯ ಯಥಾರ್ಥ ಜ್ಞಾನವಾಗಲಾರದು. ಆತನ ಶೈಲಿಯ ವೈಯಕ್ತಿಕತೆಯೂ ವೈಶಿಷ್ಟ್ಯವೂ ತಿಳಿಯಬೇಕಾದರೆ ಸಾಮಾನ್ಯವಾಗಿ ಶೈಲಿ ಯನ್ನೇ ಕುರಿತು ಹೆಚ್ಚು ಆಳವಾಗಿ ವಿಚಾರಮಾಡಬೇಕಾಗುವುದು. ಕನ್ನಡ ಸಾಹಿತ್ಯದ ಸಿಂಹಾವಲೋಕನವನ್ನು ಮಾಡಿದರೆ ಚಂಪೂ ಗ್ರಂಥಗಳಿಗೆ ಸಾಮಾನ್ಯವಾದದ್ದೊಂದು ಶೈಲಿಯು ದೃಗ್ಗೋಚರವಾಗುವುದು ನಿಜ; ಅಲ್ಲದೆ ಅದು ಷಟ್ಪದಿಶೈಲಿಯಿಂದಾಗಲಿ ಸಾಂಗತ್ಯದ ಶೈಲಿಯಿಂದಾಗಲಿ ಭಿನ್ನವಾದು ನೆಂದೂ ಸ್ಪಷ್ಟವಾಗಿ ಕಂಡುಬರುವುದು. ಆದರೆ ಈ ಶೈಲಿಯನ್ನು ಯಾವ ನೊಬ್ಬ ಲಾಕ್ಷಣಿಕನಾಗಲಿ ವೈಯಾಕರಣಿಯಾಗಲಿ ಕವಿಗಳಿಗಾಗಿ ಮೊದಲು ಸಿದ್ಧಪಡಿಸಿಟ್ಟಿರಲಿಲ್ಲ. ಸಮರ್ಥನಾದ ಒಬ್ಬ ಕವಿಯ-ಆದಿಪಂಪನಂತಹನು-ಸಂಸ್ಕೃತದಲ್ಲಿ ವಿರಳವಾಗಿ ಪ್ರಚಾರದಲಿದ್ದ ಚಂಪೂ ಮಾದರಿಯನ್ನಾಯ್ದು ಕೊಂಡು ತನಗೆ ಬೇಕಾದಂತೆ ಹೆಚ್ಚುಕಡಿಮೆಗಳನ್ನು ಮಾಡಿಕೊಂಡು, ತಾನು ತೆಗೆದುಕೊಂಡ ವಿಷಯಕ್ಕೆ ಯೋಗ್ಯವಾಗುವಂತಹ ತನ್ನಮನಸ್ಸಿಗೆ ತೃಪ್ತಿಕರವಾಗುವಂತಹ ಶೈಲಿಯಲ್ಲಿ ಗ್ರಂಥವೊಂದನ್ನು ರಚಿಸಿರಬೇಕು. ಅದು ಇತರ ಓದುಗರಿಗೂ, ವಿಮರ್ಶಕರಿಗೂ ಮೆಚ್ಚಿಗೆಯಾದೊಡನೆ ಹಿಂದಿನಿಂದ ಬಂದ ಕವಿಗಳು ಅದನ್ನು ಅನುಸರಿಸಿರಬೇಕು. ಅದೇ ಒಂದು ಪರಂಪರೆಯಾ ಗಿರಲಿಕ್ಕೆ ಸಾಕು. ಈ ರೀತಿಯಾಗಿ ಬಳಿಕೆಯಲ್ಲಿ ಬಂದ ಚಂಪೂ ಶೈಲಿಯಲ್ಲಿ ಕಾಣಬರುವ ಮುಖ್ಯ ಲಕ್ಷಣಗಳೆಂದರೆ; ಸಂಸ್ಕೃತ ಶಬ್ದಗಳ ಪ್ರಾಚುರ್ಯ, ದೀರ್ಘಸಮಾಸಗಳ ಬಳಕೆ, ನಿಬಿಡವಾದ ವಾಕ್ಯರಚನೆ, ಹಳಗನ್ನಡ ಶಬ್ದಗಳ ಶುದ್ಧರೂಪ ಪ್ರಯೋಗ ಇವೇ ಮುಂತಾದವುಗಳ ಈ ಮಾದರಿಯು ವೃತ ಗಳಿಗೆ-ಅದರಲ್ಲಿಯೂ ಶಾರ್ದೂಲ, ಸ್ರಗ್ಧರೆ ಮೊದಲಾದ ಗಂಭೀರ ವೃತ್ತಗಳಿಗೆ-ಅನುರೂಪವಾದ ಶೈಲಿಯು; ಆದರೆ ಮಾತ್ರಾಗಣಗಳಿಂದ ಕೂಡಿದ ಕನ್ನಡ ಛಂದಸ್ಸಿಗೆ ಎಂದರೆ ಕಂದ-ರಗಳೆ-ಷಟ್ಪದಿ ಮುಂತಾದವುಗಳಿಗೆ ಅಷ್ಟು ಸರಿ ಯಾಗಿ ಒಪ್ಪತಕ್ಕ ಶೈಲಿಯಲ್ಲ ಈ ಮಾತು ಚಂಪೂ ಗ್ರಂಥಕಾರರಿಗೆ ಗೊತಿ

ಲ್ಲವೆಂತಲ್ಲ. ಆದಿಪಂಪನು ಕೂಡ ತನ್ನ ಓಜಸ್ವಿಯಾದ ಶೈಲಿಯನ್ನು ಛಂದಸ್ಸಿಗೆ ಅನುಗುಣವಾಗುವಂತೆ ಅನೇಕ ಕಡೆ ಸಾಧ್ಯವಾದಮಟ್ಟಿಗಾದರೂ ಸಡಿಲು ಮಾಡಿದ್ದಾನೆಂಬುದು ಅತನ ಕಂದಗಳಲ್ಲಿಯೂ ರಗಳೆ ( ಭಾ ೧,೫೮;೪,೧೦ ) ಗಳಲ್ಲಿಯೂ ಕಂಡುಬರುತ್ತದೆ: ಆದರೂ ಆ ಚಂಪೂಶೈಲಿಯು ನಿಬಿಡವೇಷನವು ಆತನ ಕೃತಿಗಳಲ್ಲಿ ಎಲ್ಲೆಲ್ಲಿಯೂ ಆವರಿಸಿರುತ್ತದೆ. ಉದಾಹರಣೆಗಾಗಿ ( ಆದಿಪುರಾಣದೊಳಗಿನ )—

ಬಕಕುರರಪಕ್ಷಿವಿಕ್ಷಿಪ್ತಕಂಜಕಿಂಜಲ್ಕಪುಂಜರಿತಾಚ್ಛೋದಕಪರಿಪೂರ್ಣ
ತಟಾಕಪ್ರಪರಸರೋನಿಕರರಂಜಿತಾವಳಯಂ॥

ಎಂಬುದು ಒಂದು ಕಂದಪದ್ಯವೆಂದು— ಹಾಗೆ ಬರೆಯದೇ ಇದ್ದಲ್ಲಿ-ತಟ್ಟನೆ ತಿಳಿದುಕೊಳ್ಳುವುದು ಕಠಿಣವಾಗುತ್ತದೆಂಬದನ್ನು ಒಪ್ಪಬೇಕಾಗುವದು. ಅಭಿನವಪಂಪನಾದರೋ, ಚಂಪೂ ಗ್ರಂಥಗಳಲ್ಲಿ ಸಹ ಕಂದಪದ್ಯಗಳು ಉಳಿದ ವೃತ್ತಪದ್ಯಗಳಿಗಿಂತ ಹೆಚ್ಚಾಗಿ ಉಪಯೋಗವಾಗುವದರಿಂದ ಅವುಗಳಿಗನುಗುಣವಾದ ಶೈಲಿಯೇ ಹೆಚ್ಚು ರಮಣೀಯವಾದುದೆಂದು ಕಂಡುಹಿಡಿದಿದ್ದಾನೆ ಆದುದರಿಂದಲೇ ರಾಮಾಯಣದೊಳಗಿನ ಆತನ ಕಂದಪದ್ಯಗಳು ಅಷ್ಟು ಸೊಗಸಾಗಿರುವುವು, ಆದರೆ ಆತನ ವೃತ್ತಗಳು ಭಕ್ತಿ, ಕರುಣೆ, ಪ್ರೇಮ ಮೊದಲಾಗಿ ಸೌಮ್ಯಭಾವಗಳಿಗೆ ಒಪ್ಪುವಷ್ಟು ಲಲಿತವಾದುವಾದರೂ ವೀರ, ಕ್ರೋಧ ಮೊದಲಾದ ರೌದ್ರ ರಸಗಳನ್ನು ಗ್ರಹಿಸಲು ಅಸಮರ್ಥವಾದವೆನ್ನಬಹುದು. ಹೀಗಿದ್ದರೂ ಒಟ್ಟಿನಲ್ಲಿ ಆತನ ರಾಮಾಯಣವು ಮನೋಹರವಾಗಿಯೂ ಕರ್ಣಕಮನೀಯವಾಗಿಯೂ ಇರುವುದೆನ್ನಲು ಅಡ್ಡಿಯಿಲ್ಲ ಈ ರೀತಿಯಾಗಿ ಕವಿಗಳು ತಮ್ಮ ವ್ಯಕ್ತಿತ್ವಕ್ಕನುಗುಣವಾಗಿ ಶೈಲಿಯನ್ನು ಮಾರ್ಪಡಿಸಿಕೊಳ್ಳುತ್ತಿದ್ದರಾದರೂ ಒಟ್ಟಿನಲ್ಲಿ ಚಂಪೂ ಶೈಲಿಯೆಂಬುದೊಂದು ಇದ್ದೇ ಇರುವುದೆಂಬುದು ಸುಳ್ಳಲ್ಲ. ಇದು ಪಂಡಿತರನ್ನು ಮೆಚ್ಚಿಸಬಲ್ಲಶೈಲಿ; ಪಾಮರರನ್ನು ರಂಜಿಸಬಲ್ಲ ಶೈಲಿಯಲ್ಲ. ಆರಂಭದಲ್ಲಿ ಪೀನಪಿನದ್ಧವಾದ ಗಹನ ಗ್ರಥಿತವಾದ ಈ ಶೈಲಿಯು ಕ್ರಮೇಣ ಶಿಥಿಲವಾಗುತ್ತ ಮಿದುವಾಗುತ್ತ ಪಂಡಿತ ಪಾಮರರಿಗೂ ಸರಿಯಾಗಿ ರಂಜಿಸುವಂತಹ ಲಕ್ಷ್ಮೀಶ ( ಅಂತೆಯೆ) ವಿರೂಪಾಕ್ಷ ಪಂಡಿತರ ಸರಳವೂ, ಸುಗಮವೂ ಆದ ಷಟ್ಪದಿಶೈಲಿಯಾಗಿ ಪರಿ

ಣಮಿಸಬೇಕಾದರೆ ಹಲವು ಶತಮಾನಗಳು ಕಳೆಯಬೇಕಾಯಿತು; ರಾಘವಾಂಕ, ಕುಮಾರವ್ಯಾಸ, ಮಂಗರಸ, ಗುಬ್ಬಿಮಲ್ಲಣಾರ್ಯ ಮೊದಲಾದ ಹಲವು ಪ್ರತಿಭಾಸಂಪನ್ನರಾದ ಕವಿಗಳೂ ಪ್ರಯತ್ನ ಪಡಬೇಕಾಯಿತು. ಈ ಮಧ್ಯೆ ಹಳೆಯ ಪರಂಪರೆಯನ್ನು ಮುರಿಯುವುದು ಅನುಚಿತವೆಂಬ ಅಭಿಪ್ರಾಯದಿಂದ ಚಂಪೂ ಯೋಗ್ಯವಾದ ಶೈಲಿಯಲ್ಲಿಯೇ ಷಟ್ಪದಿ ಕಾವ್ಯಗಳನ್ನು ಬರೆಯಲು ಯತ್ನಿಸಿದ ಕವಿಗಳೂ ಕೆಲವರು ತಲೆದೋರುತ್ತಾರೆ. ಅಂತಹರಲ್ಲಿ ಒಬ್ಬನಾದ ಪದ್ಮಣಾಂಕನ "ಪದ್ಮರಾಜಪುರಾಣ" ವನ್ನು ಪರಿಶೀಲಿಸಿದರೆ ಅವನು ಬಳಸಿ ಶೈಲಿಯು ಒಂದುವೇಳೆ ವಿಷಯಕ್ಕೆ ಯೋಗ್ಯವಾದುದೆಂದು ಕಂಡರೂ ಛಂದಸ್ಸಿಗೆ ಒಪ್ಪತಕ್ಕದ್ದಲ್ಲವೆಂದೂ ಈ ಬಗೆಯ ಪ್ರಯತ್ನಗಳು "ಕೂಸಿನ ತಲೆಯೋಳ್ ಬಿಣ್ಗೊರೆಯನಿಟ್ಟವೋಲಸುಖಕರಂ" ಎಂದೂ ಸ್ಪಷ್ಟವಾಗುತ್ತದೆ.

ಹೀಗೆ ವಿಹಂಗಮದೃಷ್ಟಿಯಿಂದ ಕರ್ನಾಟಕ ಸಾಹಿತ್ಯವನ್ನು ವಿಚಾರ ಮಾಡಿದಾಗ ಸಾಹಿತ್ಯಕ್ಷೇತ್ರದಲ್ಲಿ ಹರಿಹರನ ಸ್ಥಾನವು ಸ್ಪಷ್ಟವಾಗಿ ಕಾಣಲಾರಂಭಿಸುತ್ತದೆ. ಆತನು ಚಂಪೂಶೈಲಿಯು ಮಾರ್ಪಡಿಸಲು ಆರಂಭಿಸಿದ ಸಂಧಿಕಾಲದಲ್ಲಿದ್ದನೆಂತಲೂ, ಅದನ್ನು ಮಾರ್ಪಡಿಸಲು ಮನಃಪೂರ್ವಕಗಾಗಿ ಪ್ರಯತ್ನಪಟ್ಟನೆಂದೂ ಗೊತ್ತಾಗುತ್ತದೆ. ಕಾವ್ಯರಸಾಸ್ವಾದನವು ಬಹುಜನ ಸಮಾಜದಲ್ಲಿ ಹಬ್ಬಬೇಕಾದರೆ ಸುಗಮವಾದ ಶೈಲಿಯು ಬರೆಯಬೇಕೆಂಬ ನೂತನ ಪರಂಪರೆಯ ಸ್ಥಾಪಕನಾಗಿದ್ದಾನೆಂಬುದೂ ಪ್ರಕಟವಾಗುತ್ತದೆ. ಆದುದರಿಂದ ಹಿಂದಣ ಶೈಲಿಯೊಳಗಿನ ಕ್ಲಿಷ್ಟತೆಯನ್ನು ಸಾಕಷ್ಟು ಹೋಗಲಾಡಿಸಿದ್ದರೂ ಬಿಗುವನ್ನು ಕಾಯ್ದುಕೊಂಡಿದ್ದಾನೆ. ಅದರೊಡಗೆ ಸರಳತೆಯನ್ನು ಸುಗುಮತೆಯನ್ನು ಬೇಕಾದಷ್ಟು ಸಾಧಿಸಿದ್ದರೂ ನಿಸ್ಸತ್ವಕ್ಕೆ ಇಂಬುಗೊಡದಂತೆ ನೋಡಿಕೊಂಡಿದ್ದಾನೆ. ಅದಕ್ಕಂತೇ ಈತನ ಶೈಲಿಯಲ್ಲಿ ವ್ಯಕ್ತಿತ್ವವೂ ವೈಶಿಷ್ಟ್ಯವೂ ಸ್ಫುಟವಾಗಿ ಗೋಚರವಾಗುವವು ಆದ್ದರಿಂದಲೇ ಇವನನ್ನು ಕನ್ನಡ ಸಾಹಿತ್ಯದಲ್ಲಿ ಒಬ್ಬ "ಸೀಮಾಪುರುಷ" ನೆಂದು ಅಂಗೀಕರಿಸಿರುವರು.

ಹರೀಶ್ವರನ ಶೈಲಿಯಲ್ಲಿ ಸರಳತೆಯೂ ಮಾರ್ದವವೂ ಲಾಲಿತ್ಯವೂ ಹೇಗೆ ಉಂಟಾಗಿವೆಯೆಂಬುದನ್ನು ಒಳಹೊಕ್ಕು ವಿವೇಚಿಸಿದರೆ ಆದರೊಳಗಿನ

ಕೆಲವು ರಹಸ್ಯಗಳು ವ್ಯಕ್ತವಾಗುವವು. ಅವುಗಳಲ್ಲಿ ಮೊದಲನೆಯದೆಂದರೆ ಸಂಸ್ಕೃತ ಶಬ್ದಗಳ ಯಥೋಚಿತಪ್ರಯೋಗ. ಕನ್ನಡದಲ್ಲಿ ಸಾಹಿತ್ಯದ ಬರೆವಣಿಗೆಯು ಪ್ರಾರಂಭವಾದಂದಿನಿಂದ ಸಂಸ್ಕೃತ ಶಬ್ದಗಳನ್ನು ಕನ್ನಡ ಕೃತಿಗಳಲ್ಲಿ ಉಪಯೋಗಿಸಬೇಕೆ? ಉಪಯೋಗಿಸುವದಾದರೆ ಎಷ್ಟರ ಮಟ್ಟಿಗೆ? ಎಂಬ ವಿಷಯವು ಭಿನ್ನಾಭಿಪ್ರಾಯಗಳಿಗೆ ಎಡೆಗೊಡುವಂತಹ ಕಠಿಣ ಸಮಸ್ಯೆಯಾಗಿತ್ತೆಂಬುದು ಗೋಚರವಾಗುತ್ತದೆ. ನೃಪತುಂಗನು ( ಕವಿರಾಜಮಾರ್ಗ ೧,೫೭ )

ನೆಗಳ್ದಿರ್ದ ಕನ್ನಡಂಗಳೊ । ಳಗಣಿತಗುಣವಿದಿತ ಸಂಸ್ಕೃತೋಕ್ತಕ್ರಮಮುಮಂ ॥
ಬಗೆದೊಂದುಮಾಡಿ ಪೇಳ್ದೊಡೆ । ಸೊಗಯಿಸುಗುಂ ಕಾವ್ಯಬಂಧಮೆಂದುಮನಿಂದ್ಯಂ ॥

ಎಂದು ಸಂಸ್ಕೃತದ ಬಳಿಕೆಯನ್ನು ಎತ್ತಿ ಹಿಡಿದಿದ್ದಾನೆ. ಮುಂದೆ ಕೆಲ ಶತಮಾನಗಳಲ್ಲಿ ಈ ರೂಢಿಯು ಮಿತಿಮೀರಿತೆಂದು ತೋರುತ್ತದೆ; ಏಕೆಂದರೆ ಹನ್ನೆರಡನೆಯ ಶತಮಾನದ ಆದಿಯಲ್ಲಿದ್ದ ನಯಸೇನನು ಧರ್ಮಾಮೃತ ೧,೪೧–೪೩.

ಪೊಸಗನ್ನಡದಿಂ ವ್ಯಾವ । ರ್ಣಿಸುವೆಂ ಸಂಸ್ಕೃತಿಯನೆಂದು ಕನ್ನಡಮಂ ಚಿಂ ॥
ತಿಸಿ ಕೊಡಲಾರದಕ್ಕಟ । ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥
ಸಕ್ಕದಮಂ ಪೇಳ್ದೊಡೆ ನೆರೆ । ಸಕ್ಕದಮಂ ಪೇಳ್ ಸುದ್ದಗನ್ನಡದೋಳ್ ತಂ ॥
ದಿಕ್ಕುವುದೇ ಸಕ್ಕದಮಂ । ತೆಕ್ಕದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥

ಎಂದು ನಿಷ್ಕಾರಣ ಸಂಸ್ಕೃತ ಪ್ರಯೋಗವನ್ನು ತೀವ್ರವಾಗಿ ನಿಷೇಧಿಸಿದ್ದಾನೆ. ಆದರೂ ಸಂಸ್ಕೃತವನ್ನು ಸಂಪೂರ್ಣವನ್ನು ತ್ಯಜಿಸುವುದು ನೀಗದ ಮಾತೆಂದು ಆ ಕವಿಯ ಕೃತಿಯಿಂದಲೇ ಕಂಡುಬರುತ್ತದೆ. ಹದಿಮೂರನೆಯ ಶತಕದಲ್ಲಿ ಆಗಿಹೋದ ಅಂಡಯ್ಯನು ಸಮಸಂಸ್ಕೃತ ಶಬ್ದಗಳನ್ನು ಬಿಟ್ಟು ದೇಶ್ಯ ತದ್ಭವ ಶಬ್ದಗಳಿಂದಲೆ "ಕಬ್ಬಿಗರಕಾವ" ವನ್ನು ಬರೆದುದಕ್ಕೆ ಆತನ ಧೈರ್ಯ ಸಾಹಸಗಳನ್ನು ಹೊಗಳಬಹುದಾದರೂ ಆತನ ಶೈಲಿಯನ್ನುಮಾತ್ರ ಮುಂದಿನವರು ಯಾರೂ ಅನುಕರಿಸಲಿಲ್ಲವೆಂಬದನ್ನು ಮರೆಯಲಾಗದು. ಹರಿಹರನಾದರೋ ನಯಸೇನನಂತೆ ಸಂಸ್ಕೃತ ಶಬ್ದಗಳನ್ನು ಪೂರ್ಣ ಬಿಟ್ಟುಕೊಡದೆ ಸುಲಭವಾದವುಗಳನ್ನೂ ಸಾರ್ಥಕವಾದವುಗಳನ್ನೂ ತನ್ನ ಕಾವ್ಯದಲ್ಲಿ ಬಳಸಿರುವನು. ದೀರ್ಘಸಮಾಸಗಳನ್ನು ಬಹಳವಾಗಿ ಪ್ರಯೋಗಿಸಿಲ್ಲ. ಸಮುದ್ರ

ವರ್ಣನೆ, ತಾರಕಾಸುರನ ಕೆಟ್ಟುಳಿಯ ಬಣ್ಣನೆ ಇಂತಹ ಒಂದೆರಡು ಎಡೆಗಳಲ್ಲಿ ಬಂದ ಸಂಸ್ಕೃತಪ್ರಚುರವಾದ ಸರಣಿಯು ಆತನಿಗೆ ಸಹಜವಾದುದಲ್ಲ. ಅವನ ನಿಜವಾದ ಶೈಲಿಯು ಪ್ರಕಟವಾಗುವದು—

ಮುಟ್ಟಿದೊಡಾಗಳೆ ಕಂದುವ ।
ನೆಟ್ಟನೆ ನೋಡಿದೊಡೆ ಕೋಡಿಬಾಡುವ ನೆನೆಯಲ್ ॥
ತೊಟ್ಟನೆ ಕೊರಗುವ ಪೂವಂ ।
ಕಟ್ಟುವ ಪರಿಯಂತೆನುತ್ತೆ ಚಿಂತಿಸುತಿರ್ದಳ್ ॥

ಎಂಬಂತಹ ಸರಣಿಯಲ್ಲಿ. ಹರಿಹರನ ವಾಕ್ಯಬಂಧವು ಬಿಡಿಬಿಡಿಯಾಗಿ ಕಟ್ಟಿದ ಹೂಮಾಲೆಯಂತೆ ಲಲಿತವಾಗಿರುತ್ತದೆ. ಅದು ಮಾತಾಡುವ ಸರಣಿಯನ್ನು ಹೆಚ್ಚಾಗಿ ಹೋಲುವುದರಿಂದ ಕವಿಯು ವರ್ಣಿಸುವ ಚಿತ್ರಗಳು ತಟ್ಟನೆ ಕಣ್ಣೆದುರಿಗೆ ಕಟ್ಟಿದಂತಾಗುತ್ತವೆ. ಉದಾಹರಣೆಗಾಗಿ ಬಾಲ್ಯಾವಸ್ಥೆಯಲ್ಲಿ ಗಿರಿಜೆಯು ಕಂಡಕಂಡಲ್ಲಿ ಶಿವಲಿಂಗಪೂಜೆಯನ್ನು ಮಾಡುತ್ತ ಬಾಹ್ಯವನ್ನು ಮರೆಯುತ್ತಿದ್ದಳೆಂಬುದನ್ನು ಬಣ್ಣಿಸಿದ ಚಿತ್ರವಿದು:—

ಕಲ್ಲೆನ್ನಳ್ ಮುಳ್ಳೆನ್ನಳ್ । ಮೆಲ್ಲಿತ್ತಿದು ಬೆಟ್ಟತೆನ್ನಳ್ ಪತಿಭಕ್ತಿಯೊಳಂ ॥
ತೆಲ್ಲಿ ಸುಖಿಸ್ಥಳಮುಂಟಾ । ದಲ್ಲಿ ವಿರೂಪಾಕ್ಷಪೂಜೆಗೀಡಾಗಿರ್ಪಳ್ ॥
ಬರೆದವರೊ ಬೈತರೊ ಪೊಲ್ದರೊ । ಪೊರೆದರೊ ಮರಳ್ಚಿ ಕರುವಿಟ್ಟರೊ ಕಂ ॥
ಡರಸಿದರೋ ಕಡೆದವೊ ಎನೆ । ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ ॥
ಬೇಡೆಂದೊಡೆ ಮಾಣಳ್ ನಲಿ । ದಾಡುವಳಪ್ಪುವಳಮರ್ಚುವಳ್ ಪುಳಕಿಪ್ಪಳ್ ॥
ಮಾಡುವ ಲಿಂಗಾರ್ಚನೆಯೊಳ್ । ನೋಡಳ್ ನುಡಿಯಳ್ ಭವಾನಿಯೇ
ನೆಂದರಿಯಳ್ ॥

ಇದಕ್ಕೆ ಟೀಕೆ–ಟಿಪ್ಪಣೆಗಳೆಬೇಡ; ಅಷ್ಟು ಸುಲಭಗ್ರಾಹ್ಯವಾಗಿದೆ. ಈ ಶೈಲಿಯಲ್ಲಿ ಕಂಡುಬರುವ ಇನ್ನೊಂದು ಲಕ್ಷಣವೆಂದರೆ ಶಬ್ದಗಳ ಪುನರುಕ್ತಿ. ಶಿವನ ಹಾಗೂ ಶಿವಶರಣರ ಚರಿತೆ ಮತ್ತು ಮಹಿಮೆ ಇವುಗಳನ್ನು ಸಾಮಾನ್ಯ ಜನರಿಗೆ ತಿಳಿಸುವ ಇಚ್ಛೆಯಿಂದ ಕವಿಯು ಅವರ ಮನಸ್ಸಿನಮೇಲೆ ಪರಿಣಾಮ ಮಾಡುವುದಕ್ಕಾಗಿ ಶಿಕ್ಷಾಗುರುಗಳು ಶಿಷ್ಯರನ್ನು ಕಲಿಸುವ ಶೈಲಿಯಲ್ಲಿ ಮಹತ್ವದ ಶಬ್ದಗಳನ್ನು ತಿರುತಿರುಗಿ ಉಪಯೋಗಿಸಿರುವುದುಂಟು. ಒಬ್ಬರೇ ಕುಳಿತು

ಕಿವಿಯಿಂದಲೇ ಕೇಳಿ ತಿಳಿದುಕೊಳ್ಳುವವರಿಗೆ ಈ ಶೈಲಿಯು ಬಹಳ ಉಪಕಾರಿಯಾಗುತ್ತದೆ. ಓದಿಕೊಳ್ಳಲು ಬಲ್ಲ ಸುಶಿಕ್ಷಿತರಿಗೆ ಇದು ಬೇಸರವನ್ನುಂಟುಮಾಡಬಹುದಾದರೂ ಅರ್ಥವ್ಯಕ್ತಿಗೂ, ಸುಗುಮತೆಗೂ ಈ ಶೈಲಿಯು ಎಷ್ಟು ಸಹಾಯಕಾರಿಯಾಗುತ್ತದೆಂಬುದನ್ನು ಈ ಉದಾಹರಣೆಯಲ್ಲಿ ನೋಡಬಹುದು:—

ಪುಟ್ಟಿತು ಚಳಿ ಬಳೆದುದು ಚಳಿ ।
ಕೊಟ್ಟುದು ಚಳಿ ಕೊಂಡುದೆಲ್ಲಮುಂ ಚಳಿ ಚಳಿಯಿಂ ॥
ದುಟ್ಟುದು ಚಳಿ ತೊಟ್ಟುದು ಚಳಿ ।
ಮೆಟ್ಟಿತು ಚಳಿ ಮುಟ್ಟಿತೆಲ್ಲ ಚಳಿ ಪೊಸಚಳಿಯೊಳ್ ॥

ಚಳಿಯು ಸರ್ವತ್ರ ವ್ಯಾಪಿಸಿತ್ತೆಂಬ ಅಭಿಪ್ರಾಯವನ್ನು ಎಷ್ಟು ಸುತ್ತುವರಿದು ವರ್ಣಿಸಿದರೂ ಇಲ್ಲಿಯಷ್ಟು ಸುಬೋಧವಾಗಲಾರದು. ಆದರೆ ಈ ಮಾದರಿಯನ್ನು ಎಲ್ಲೆಡೆಗಳಲ್ಲಿಯೂ ಉಪಯೋಗಿಸಲಾರಂಭಿಸಿದರೆ ಅಸಹ್ಯವಾಗುವವುದೂ ಉಂಟು. ಹರಿಹರನ ಶೈಲಿಯಲ್ಲಿಯ ಪುನರುಕ್ತತೆಯು 'ಅತಿ' ರೇಕವನ್ನು ಕೆಳಗಣ ಪದ್ಯದಲ್ಲಿ ಗೋಚರವಾಗುತ್ತದೆ:—

ಅತಿಮಧುರಮತಿಮನೋಹರ ।
ಮತಿಮಂಗಳಮತಿವಿಚಿತ್ರಮತಿಬಂಧುರಮಿಂ ॥
ತತಿಸಂಭ್ರಮಮತಿವಿಭ್ರಮ ।
ಮತಿಯೌವನಮತಿವಿಲಾಸಮತಿಪಾರ್ವತಿಯಾ ॥

ಅಲ್ಲದೆ ಅಲ್ಲಲ್ಲಿ ಭಾವಗಳ ಪುನರಾವೃತ್ತಿಯೂ ಕಾಣಬರುವುಪು. ಉದಾಹರಣೆಗೆಂದು ಈಶ್ವರನ ಉರಿಗಣ್ಣಿನಿಂದ ದಹಿಸುವ ಕಾಮನ ಚಿತ್ರವಾದ ಕೆಳಗಣ ಪದ್ಯಗಳನ್ನು ನೋಡಬಹುದು:—

ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋರಿದತ್ತು ಬಾ ।
ನ್ನೊಗೆದುದು ನಿಂದು ಪೊಂಬೆಳಗುಮಂ ಪರಪುತ್ತದು ದಂಧಗಿಲ್‌ಧಗಿಲ್ ॥
ಧಗಿಲೆಸುತಟ್ಟಿ ತಟ್ಟಿದುದು ಮುಟ್ಟಿತು ಸುಟ್ಟಿತು ತಿಂದ ತೇಗಿದ ।
ತ್ತಗಿಯದೆ ನಿಂದ ಪುಗಣಿಯನಂ ಪಣೆಗಣ್ಣುರಿ ಹಂಪೆಯಾಳ್ದನಾ ॥

ಒಟ್ಟಿನಲ್ಲಿ ಬೀಳಬೇಕಾದರೆ- ಕವಿಯ ಶೈಲಿಯಲ್ಲಿ ಕಂಡುಬರುವ ಈ ಪುನರುಕ್ತತೆಯು ಅನೇಕ ಕಡೆಗೆ ಕವಿಯ ಆಶ್ರಯವನ್ನು ಸಫಲಗೊಳಿಸುವಂತಹದಾಗಿದ್ದರೂ ಸುಸಂಸ್ಕೃತರಿಗೆ ದೋಷವೆನಿಸುವಷ್ಟು ಹೆಚ್ಚಾಗಿ ಬಳಸಲ್ಪಟ್ಟಿದೆ. ಗಿರಿಜಾಕಲ್ಯಾಣದಲ್ಲಿ ಈ ಪುನರುಕ್ತತೆಯ ಪ್ರೀತಿಯಿಂದಲೆ ಜನಿಸಿದಂತಹ ಇನ್ನೊಂದು ಗುಣವು— ಕಾವ್ಯಬಂಧದ ಲಾಲಿತ್ಯಕ್ಕೆ ಸಹಾಯಕಾರಿಯಾದಂತಹದು— ಈ ಶೈಲಿಯಲ್ಲಿ ಕಂಡುಬರುತ್ತದೆ; ಅದಾವುದೆಂದರೆ ಅನುಪ್ರಾಸವು. ಇದು ಹೆಚ್ಚುಕಡಿಮೆ ಪ್ರಮಾಣದಿಂದ ಎಲ್ಲ ಕನ್ನಡ ಕವಿಗಳಲ್ಲಿ ಕಂಡುಬರುತ್ತಿದ್ದರೂ ಗಿರಿಜಾಕಲ್ಯಾಣದಲ್ಲಿ ಹೆಚ್ಚಾಗಿಯೇ ಇರುವುದೆಂದು ಹೇಳಬೇಕು. ಇದರಿಂದ ಕೆಲಕಡೆಗೆ ಶಬ್ದಬಾಹುಲ್ಯವು ತಪ್ಪಿ ಸಂಕ್ಷಿಪ್ತವಾಕ್ಯಬಂಧವು ಸಾಧಿಸಿದೆ. ಉದಾಹರಣೆಗಾಗಿ :—

ಅತಿವಿರಹದೊಳೀಲಲನೆಗೆ |
ಮತಿ-ದುರ್ಮತಿ ವೀಣೆಸಾಣೆ ಸೋಮಂ ಭೀಮಂ ||
ಲತೆಯಸಿಲತೆ ಸಂಪಗೆ ಪಗೆ !
ನುತಕೀರಂ ಘೋರಮನ್ಯಪುಷ್ಟಮನಿಷ್ಟಂ ||

ಎಂಬುದನ್ನು ಪರಶೀಲಿಸಬಹುದು. ಒಮ್ಮೊಮ್ಮೆ ಅನುಪ್ರಾಸದ ಜೊತೆಗೆ ಹಿತವಾದ ಯಮಕಗತವಾದ ಮೃದುಶ್ಲೇಷೆಯೂ ಸಾಧಿಸಿದೆ:--

ಕೆಲದೊಳ್ ಪುಳಿಂದಿಯಿರೆ ಪೆ |
ರ್ಬುಲಿ ಬಂದೊಡಮಂಜನಳ್ಕನೋಡಂ ನೋಡಂ ||
ಚಲದಿಂ ಕಾಡಂ ಕಾಡಂ |
ಸಲೆಪಸಿವಂ ಮರೆದು ತಣಿದು ಬೇಡಂ ಬೇಡಂ ||

ಇದೂ ಅಲ್ಲದೆ ವರ್ಣನಾಂಶಗಳನ್ನು ಸ್ವಲ್ಪದರಲ್ಲಿ ಸಂಗ್ರಹಿಸುವ ಶಕ್ತಿಯು ಈತನ ಶೈಲಿಯಲ್ಲಿ ಅಲ್ಲಲ್ಲಿ ಗೋಚರವಾಗುತ್ತದೆ. ಅದಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು. ಚಂದ್ರನು ಆದೇ ಉದಯವಾದಾಗ ಕೆಂಪುಬಣ್ಣದವನಾಗಿ ಕಂಗೊಳಿಸಿ ಅಲ್ಪಾವಧಿಯಲ್ಲಿಯೆ ಬಣ್ಣಬದಲಿಸುತ್ತ ಕೊನೆಗೆ ಉಜ್ವಲ ಶ್ವೇತವರ್ಣವುಳ್ಳವನಾಗುವುದನ್ನೂ ಕನ್ನಡ ಕವಿಗಳು ಅನೇಕ ಪದ್ಯಗಳಲ್ಲಿ ವರ್ಣಿಸುತ್ತಾರೆ. ಆ ಸಂದರ್ಭದಲ್ಲಿ ಬಂದ ಮನೋಹರ ವರ್ಣನೆಯೊಂದು ಆದಿಪುರಾಣದಲ್ಲಿದೆ— ಕೆಳಗಿನಂತೆ:—

ಅದೋಂದಿನಿಸುಬೇಗದಿಂ ನವಜಪಾಪ್ರಸೂನಾಭವಾ
ಯ್ತದೊಂದಿನಿಸು ಬೇಗದಿಂ ಕನಕಕುಂಭದಂತಾಯ್ತು ಮ ||
ತ್ತದೊಂದಿನಿಸುಬೇಗದಿಂ ಮೃದುಮೃಣಾಳ ಸಂಕಾಶವಾ ||
ಯ್ತದೇಂ ಬಳಿಕೆ ಬಿಂಬದುಜ್ಜ್ವಳಿಕೆಯೋ ಸುಧಾಸೂತಿಯಾ ||

ಇಲ್ಲಿ ಹಳದಿ ಬಣ್ಣಗಳ ಬೇರೆಬೇರೆ ಛಾಯೆಗಳು ವರ್ಣಿತವಾಗಿವೆ. ಇದರೊಡನೆ ಕೆಂಪುಬಣ್ಣದ ಬೇರೆಬೇರೆ ಛಾಯೆಗಳನ್ನು ವರ್ಣಿಸುವ ಗಿರಿಜಾಕಲ್ಯಾಣದ :

ಅದು ಪೊಸಪವಳದ ಬಂಧೂ | ಕದ ಕೆಂದಾವರೆಯ ದಾಸಳದ ಪೂವಿನ ವ ||
ರ್ಣದ ಸಂಪದದಿಂ ಮದದಿಂ | ಮುದದಿಂನೊಪ್ಪಿತ್ತು ಚಂದ್ರಬಿಂಬವಿಡಂಬಂ ||

ಎಂಬುದನ್ನು ಹೋಲಿಸಿದರೆ ಚಿಕ್ಕದೊಂದು ಕಂದದಲ್ಲಿಯೆ ಅಷ್ಟು ಭಾವವನ್ನು ಹೇಗೆಸಂಗ್ರಹಿದ್ದಾನೆಂಬುದು ಗೊತ್ತಾಗುವುದು.

ಇನ್ನು ವರ್ಣನೆಗಳ ವಿಚಾರ. ಈ ಕಾಲದ ಓದುಗರಿಗೆ ತಲೆಚಿಟ್ಟಿನಿಸುವಂತಹವಾದರೂ ಆ ಕಾಲದಲ್ಲಿ ಮಹಾಕಾವ್ಯದ ಮುಖ್ಯಾಂಗಗಳೆಂದು ಪರಿಗಣಿತವಾದ ಅಷ್ಟಾದಶವರ್ಣನೆಗಳೆಲ್ಲವನ್ನೂ ಕವಿಯು ಈ ಕಾವ್ಯದಲ್ಲಿ ತಂದೊಡ್ಡಿದ್ದಾನೆ. ಅವುಗಳಲ್ಲಿ ಕೆಲವು ಅನಾವಶ್ಯಕವೆನಿಸಬಹುದು; ಒಂದೆರಡು ಅನುಚಿತವೆಂದೂ ತೋರಬಹುದು. ಆದರೆ ಅನೇಕ ವರ್ಣನೆಗಳು ಕಾವ್ಯದ ಶೋಭೆಯನ್ನು ಹೆಚ್ಚಿಸುತ್ತವೆಂಬುದರಲ್ಲಿ ಸಂದೇಹವಿಲ್ಲ. ಕೆಲವಂತೂ ಕಥಾವಸ್ತುವಿಗೆ ಪೋಷಕವಾಗಿರುವುವು; ಅಂತಹವುಗಳಲ್ಲಿ ಪಾರ್ವತಿಯ ತಪಸ್ಸಿನ ಉಗ್ರತೆಯನ್ನು ಪ್ರಕಟಿಸಲು ಆಸನ್ನಿವೇಶದಲ್ಲಿ ಬರುವ ಋತು-ವರ್ಣನೆಗಳು ರಮಣೀಯವಾದಂತೆ ಆವಶ್ಯಕವೂ ಆಗಿವೆ. ಈ ವರ್ಣನೆಗಳೆಲ್ಲ ಜೈನಪರಂಪರೆಗನುಸಾರವಾಗಿರುವುದು ಹರಿಹರನ ಪ್ರತಿಭೆಗೆ ಬಾಧಕವಾಗಿದೆಯೆಂತಲ್ಲ. ಆದರೆ ಆ ಪರಂಪರೆಯ ಪ್ರಭಾವದ ದ್ಯೋತಕವಾಗಿದೆ. ಈ ವರ್ಣನೆಗಳಲ್ಲಿ ಸಹ ಕವಿಯ ಸ್ವಭಾವೋಕ್ತಿಗಳಿಗೂ ಸಹಜ ಬಣ್ಣನೆಗಳಿಗೂ ಎಡೆಗೊಟ್ಟಿರುವುದು. ಈ ಕವಿಯ ಒಂದು ವೈಶಿಷ್ಟ್ಯವೆಂದೇ ಗ್ರಹಿಸಬೇಕು. ಅಲಂಕಾರಗಳ ಉಪಯೋಗದಲ್ಲಿಯೂ ಕವಿಯು ಔಚಿತ್ಯವನ್ನು ಪ್ರದರ್ಶಿಸಿದ್ದಾನೆ. ಸಹಜ ಮನೋಹರವಾದ ಉಪಮಾಪ್ರಪಂಚಕ್ಕೆ ಸೇರಿದ ಅಲಂ

ಕಾರಗಳನ್ನೇ ಹೆಚ್ಚುಬಳಸಿದ್ದಾನೆ. ಅಲಂಕಾರ ಶಾಸ್ತ್ರವನ್ನೇ ಬರೆದ ತಿರುಮಲಾರ್ಯನು ಕಗ್ಗತ್ತಲೆಯನ್ನು:—

ಉಂಟೆಲ್ಲೆಂಬೀ ಎರಡರ । ಗೆಂಟಂ ಪರಿಹರಿಸಿ ಮೂರನೆಯ ಪೊಸಬಗೆಯುಂ ॥
ಗಂಟಿಕ್ಕಿ ನಿರ್ವಿಶೇಷಮೊ । ಳಂಟಿಪ್ಪುದೀಜಗಮನಮುಮ ತಿಮಿರಾದ್ವೈತಂ ॥

ಎಂದು ಸಹೃದಯಹೃದಯಾಲ್ಹಾದವನ್ನು ಮಾಡುವಂತೆ ಬಣ್ಣಿಸಿದ್ದರೆ ಹರಿಹರನು:—

ಮನದೊಳಗಂ ಪೊಗರಂತೆ । ಕ್ಕನೆ ತೀವಿದ ಮರ್ಬಿನೊಳಗೆ ಮನಸುಂ ನೆನೆಸುಂ ॥
ಕನಸುಂ ತಾನುಂ ಕಪ್ಪಿತ್ತೆ । ಯೆನಿಸಿರ್ದುದು ತಮದ ಘನವನದನೇನೆಂಬೆಂ ॥

ಎಂದು ಸಹಜ ಮನೋಹರವಾಗಿ ಚಿತ್ರಿಸಿದ್ದಾನೆ. ವಸಂತಋತುವಿನಲ್ಲಿ ತಳಿತಮಾಮರವನ್ನು :—

ಅರಳೆಲೆ ಮೇಲಾಡುತ್ತಿರೆ । ಭರದಿಂ ಮಾಂಗಾಯ್ಗಳೊಲೆಯೆ ಕೆಲಬಲದೊಳ್ ನಿಂ ॥
ದರಗಿಳಿಯ ತೊದಳ್ನುಡಿ ಬಿ । ತ್ತರಿಸೆ ವಸಂತನ ಕುಮಾರನೆನಿಸಿತ್ತಾಮ್ರಂ ॥

ಎಂದು ಎಷ್ಟು ಮನಂಬುಗವಂತೆ ಬಣ್ಣಿಸಿದ್ದಾನೆ. ಹರೀಶ್ವರನ ಸ್ವಭಾವೋಕ್ತಿಗಳಂತೂ ಸುಪ್ರಸಿದ್ಧವಾಗಿವೆ. ಒಂದು ಪದ್ಯವನ್ನು ಮಾತ್ರ ಉದಾಹರಣೆಗೆಂದು ಇಲ್ಲಿ ಕೊಡಬಹುದು:—

ಬಿಗಿಯಪ್ಪಿ ಮೊಗಮನಿಟ್ಟಾ । ಲಿಗಳಂ ನಸುವಂಚ್ಚಿಪಕ್ಷಯುಗಮೆವಿಲೆರಸಂ ॥
ದೆಗೆವ ದನಿ ನಿಮಿರೆ ನಾಲಗೆ । ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ ॥

ಈ ಕಂದವನ್ನು ಓದಿದೊಡನೆ ಗಿಳಿಯ ಚಿತ್ರವು ಕಣ್ಣೆದುರಿಗೆ ಕಟ್ಟಿದಂತಾಗುತ್ತದೆ.

ಈ ವರ್ಣನೆಯು ಎಷ್ಟು ನೇರವಾಗಿ ನಿರಾಯಾಸವಾಗಿ ಹೃದಯವನ್ನು ಮುಟ್ಟುವುದೆಂಬುದು ನಮಗೆ ತಿಳಿಯಬೇಕಾದರೆ ಇದೇ ಚಿತ್ರವನ್ನು ಬಣ್ಣಿಸುವ ಪಂಪನ ಆದಿಪುರಾಣದೊಳಗಿನ ಏಕಾದಶಾಶ್ವದ ರ್ಣನೆಯ ಪದ್ಯವನ್ನು ಇದರೊಡನೆ ಪಡಿಯಿಡಬೇಕು. ಪಂಪನ ಆ ಪದ್ಯದ ಹುರುಳು ತಿಳಿಯಬೇಕಾದರೆ ವಾತ್ಸ್ಯಾಯನ ಕಾಮಸೂತ್ರದ ನೆರವು ಬೇಕಾಗುವುದು, " ಕಿವಿಯಿಂ ಬಗೆವುಗುವೊಡೆ ಕೋಂಕುವೆತ್ತ ಪೊಸನುಡಿಯೆಪುಗುಗುಂ " ಎಂದು ಕಂಠೋಕ್ತವಾಗಿ ಹೇಳಿದ ಪಂಪನಿಗೆ ಕೊಂಕಾದ ಶೈಲಿಯೇ ಶೋಭಿಸುವುದಲ್ಲವೇ ? ಅಂತೂ ಇಂತಹ ವರ್ಣನೆಗಳಲ್ಲಿ ಪಂಪಾಪತಿಯ ಭಕ್ತನಾದ

ಹರಿಹರನು ಪಂಪನ ಶಿಷ್ಯನಲ್ಲವೆಂಬುದು ಸಿದ್ಧವಾಗುತ್ತದೆ. ಒಟ್ಟಿನಲ್ಲಿ ಹೇಳ ಬೇಕೆಂದರೆ, ಹರಿಹರನು ಯಾವ ವಿಷಯವನ್ನು ನಿರುಪಿಸಿದರೂ ಅವುಗಳಲ್ಲಿ ಅಸಂಭಾವ್ಯಭಾವಗಳ ಪ್ರಕಟನೆಯಾಗಲಿ ಶುಷ್ಕಪಾಂಡಿತ್ಯದ ಪ್ರದರ್ಶನೆ ಯಾಗಲಿ ತೋರುವದಿಲ್ಲ. ಕುಸುಮಕೋಮಲವಾದ ಈತನ ಶೈಲಿಯು ವೀರ-ರೌದ್ರ ಮೊದಲಾದ ಉಗ್ರಭಾವಗಳನ್ನು ನಿರೂಪಿಸಲಿಕ್ಕೆ ಅಸಮರ್ಥ ವಾಗಬಹುದು; ಆದರೆ ಕವಿಯ ಆಶಯವು ಸೌಮ್ಯಭಾವಗಳನ್ನು ಅದ ರಲ್ಲಿಯೂ ಭಕ್ತಿರಸವನ್ನು ಸ್ಫುರಿಸುವುದೇ ಇರುವುದರಿಂದ ಕವಿಯು ಕೃತ ಕೃತ್ಯನಾಗಿದ್ದಾನೆಂದೇ ತಿಳಿಯಬೇಕು.

## ೪. ಹರಿಹರನ ತರುವಾಯ ಕವಿಗಳ ಮೇಲೆ ಆದ ಪರಿಣಾಮ.

ಹೀಗೆ ಒಂದಿಲ್ಲೊಂದು ಬಗೆಯಿಂದ ಹೊಸ ಪರಂಪರೆಗಳನ್ನು ಪ್ರವರ್ತಿ ಸಲು ಕಾರಣನಾದ ಹರಿಹರದೇವನ ಪರಿಣಾಮವು ಹಿಂದಣಿಂದ ಬಂದ ಕವಿ ಗಳಮೇಲೆ ವಿಶೇಷವಾಗಿ ಆಗಿರುವುದು ಆಶ್ಚರ್ಯವಲ್ಲ. ಅವರಲ್ಲಿ ಕೆಲವರು ಅವನನ್ನು ಗುರುವಾಗಿ ಅಂಗೀಕರಿಸಿದ್ದಾರೆ; ಹಲವರು ಅವನನ್ನು ಹೆಜ್ಜೆಹೆಜ್ಜೆ ಗೂ ಅನುಕರಿಸಿದ್ದಾರೆ; ಎಲ್ಲರೂ ಅವನನ್ನು ನೂತನ ಮಾರ್ಗ ಪ್ರವರ್ತಕನೆಂದು ಒಪ್ಪಿದ್ದಾರೆ. ಹರಿಹರನ ಸೋದರಳಿಯನಾದ ರಾಘವಾಂಕನು ತಾನು "ಹಂಪೆಯ ಹರೀಶ್ವರನ ವರಸುತನುಭಯಕವಿಕಮಲರವಿ" ಎಂದು ಹೇಳು ಕೊಂಡಿರುವನಲ್ಲದೆ ಅವನನ್ನು ಅನುಸರಿಸಿ—

ಎನಿತು ಸಿರಿ ಸಾರ್ವೊಡಂ ಸಾರಿ ಮಾಣ್ಬೊಡಂ ನಿತ್ಯತ್ವ ।
ಮನುವಪ್ಪೊಡಂ ಸಾವೊಡಂ ಮತ್ತೆ ಹಂಪೆಯರ ।
ಸನ ಪೊಗಳ್ವನಾಲಗೆಯೊಳನ್ಯದೈವವ ಭವಿಗಳಂ ಕೀರ್ತಿಸಿದೆನಾದೊಡೆ॥
ಮನಸಿಜಾರಿಯ ಭಕ್ತನಲ್ಲ

ಎಂಬ ಭಾಷೆತೊಟ್ಟಿರುವನು. ಈತನು ಷಟ್ಪದಿಯಲ್ಲಿ ಕಾವ್ಯರಚನೆಯನ್ನು ಮಾಡಿ ಇನ್ನೂ ಹೊಸ ಪರಂಪರೆಯ ಪ್ರವರ್ತಕನಾದುದಾದರೂ ಹರೀಶ್ವರನ ಪರಿಣಾಮವೆಂದೇ ಹೇಳಬಹು. ಆದರೆ ರಾಘವಾಂಕನು ಸ್ವಂತ ಪ್ರತಿಭೆ ಯುಳ್ಳ ಕವಿಯಾದುದರಿಂದ ಹರೀಶ್ವರನ ಪರಿಣಾಮವು ಅವನಲ್ಲಿ ಅಪ್ರತ್ಯಕ್ಷ ರೀತಿಯಲ್ಲಿಯೆ ತೋರುವುದು. ಚೆನ್ನಬಸವ ಪುರಾಣವನ್ನು ರಚಿಸಿದ

ವಿರೂಪಾಕ್ಷ ಪಂಡಿತನಮೇಲೆ ಹರೀಶ್ವರನ ಪ್ರಭಾವವು ಆಗಿರುವುದೆಂಬುದು ರತಿಪ್ರಲಾಪ ಮೊದಲಾದ ಭಾಗಗಳಲ್ಲಿ ಚನ್ನಾಗಿ ಪ್ರದರ್ಶಿತವಾಗಿರುವುದು ಹದಿನೇಳನೆಯ ಶತಮಾನದಲ್ಲಿ ಆಗಿಹೋದ ಷಡಕ್ಷರ ದೇವನು ತನ್ನ ಕೃತಿ ಗಳನ್ನು "ಹರಿಹರನ ಉದಿತ ಮಾರ್ಗದಿಂದೆ" ಒರೆವೆನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಆತನ ಕಾವ್ಯಪದ್ಧತಿಯಲ್ಲಿ ಅನೇಕಕಡೆಗೆ ಹರಿಹರನ ಸ ಣೆಯು ಪ್ರಕಟವಾಗುತ್ತದೆ. ಆದರೆ ಷಡಕ್ಷರ ದೇವನಾದರೂ ನಿಜಪ್ರತಿಭೆ ಯುಳ್ಳ ಮಹಾಕವಿಯಾದುದರಿಂದ ಹರಿಹರನ ಪುನರುಕ್ತತೆ ಮೊದಲಾದ ದೋಷಗಳನ್ನು ದೂರೀಕರಿಸಿದ್ದಾನೆ; ಮಂಜುಳತ್ವದಲ್ಲಿ ಹರಿಹರನನ್ನೂ ಮೀರಿ ದ್ದಾನೆ. ಇತ್ತೀಚೆಗೆ ಆಗಿಹೋದ ಬಸವಪ್ಪ ಶಾಸ್ತ್ರಿಯ ಕವಿತ್ವದಲ್ಲಿಯೂ ಹರಿಹರನ ಪ್ರಭಾವವು ಅಲ್ಲಲ್ಲಿ ಕಂಗೊಳಿಸುತ್ತದೆ. ವೀರಶೈವರಲ್ಲದ ಇತರ ಕವಿಗಳಿಗಾದರೂ ಹರಿಹರನ ಬೆಲೆಯು ಕಾಣದೇ ಹೋಗಿಲ್ಲ. ಮಲ್ಲಿಕಾರ್ಜು ನನ ಸೂಕ್ತಿಸುಧಾರ್ಣವದಲ್ಲಿ, ವಾದಿವಿದ್ಯಾನಂದನ ಕಾವ್ಯಸಾರದಲ್ಲಿ ಈತನ ಪದ್ಯಗಳು ಸಂಕಲಿತವಾಗಿರುವವು. ತಿರುಮಲಾರ್ಯನ:

ಕಂದಂ ಕವಿಕೋಕಿಲಮಾ । ಕಂದಂ ಕೋಮಳವಿಕಾಸಿಕೃತಿಕಲ್ಪಲತಾ ।
ಕಂದಂ ವಿಸ್ಮಯರಸದು । ಕ್ಕಂದಂ ಚಿಕದೇವರಾಯಚಂದನ ಚಂದಂ ।

ಎಂಬುದು ಗಿರಿಜಾಕಲ್ಯಾಣದ

ಕಂದಗಳಮೃತಲತಿಕಾ ಕಂದಂಗಳಸೂನವಾಕ್ಯಫಲವಿಲಸನ್ಮಾ ॥
ಕಂದಂಗಳ್ ತನಿರಸದು । ಕ್ಕಂದಂಗಳ್ ಸೊಗಯಿಸಿರ್ಪುವೀನುತ-
ಕೃತಿಯೊಳ್ ।

ಎಂಬ ಕಂದವನ್ನು ಸ್ಮರಣೆಗೆ ತರುತ್ತದೆ. ಬಣ್ಣಿಸುವ ಭಣಿತೆಯಲ್ಲಿಯೂ ಹರಿಹರನು ನೂತನ ಪರಂಪರೆಯ ಉತ್ಪಾದಕನಾಗಿದ್ದನೆಂಬುದಕ್ಕೆ ಒಂದು ಉದಾಹರಣೆಯನ್ನು ಮಾತ್ರ ಇಲ್ಲಿ ಕೊಡಲಾಗುವದು. ಮನ್ಮಥ ಮನೋ ರಥ ದುರ್ಲಭ ವಲ್ಲಭನಾದ, ಆತ್ಮಧ್ಯಾನಾಸಕ್ತನಾದ ಪರಶಿವನ ಸರ್ವಾಂಗ ದಲ್ಲಿ ಆತನನ್ನು ಪೂಜಿಸುತ್ತಿದ್ದ ಪಾರ್ವತಿಯ ನೋಟವು ಹೇಗೆ ಮುಸುಕಿ ತೆಂಬುದನ್ನು ವರ್ಣಿಸುವ ಚಿತ್ರವಿದು.

**ಪೊಸಜಡೆಯೊಳ್ ತೊಡಂಕಿ ನೊಸಲೊಳ್ ನಡೆವಾಡಿ ಕಪೋಲಭಾಗದೊಳ್ ।**
**ಪಸರಿಸಿ ಲೋಚನಂಗಳೊಳಮುರ್ಚಿ ತದಾಸ್ಯದೊಳೊಂದಿ ಕಂಠದೊಳ್ ॥**

ಮಿಸುಗಿ ಭುಜಾಗ್ರದೊಳ್ ತೊಳಗಿ ವಕ್ಷದೊಳಾಳ್ದು ಕರಂಗಳೊಳ್ ವಿಶಾ |
ಚಿಸಿ ಪದದಲ್ಲಿ ಬೀಳ್ದುವು ಭವಾನಿಯ ಮಾನಿಯ ದೈನ್ಯದೃಷ್ಟಿಗಳ್ ವಿಶಾ ||

ಇದರೊಡನೆ ಕಬ್ಬಿಗರ ಕಾವದ:—

ನಗೆಮೊಗದೊಳ್ ತೆರಂಬೊಳೆದು ನುಣ್ದುಟಿಯೊಳ್ ಮೊಗವಿಕ್ಕಿ ಗಲ್ಲದೊಳ್ ||
ಜಗುಳ್ದು ಕೊಡಂಕೆಯೊಳ್ ನುಸುಳ್ದು ಪೇರುರದೊಳ್ ಸುಳಿದಾಡಿ ತೋಳ್ಗಳೊಳ್ ||
ಸೊಗಯಿಸಿ ಸೊರ್ಕಿಪೊರ್ಕುಮೊಳಡಂಗಿ ತೊಳಪ್ಪುಡಿಯೊಳ್ ಸಡಿಲ್ದು ಕಾ |
ಲುಗುರ್ಗಳೊಳೆಯ್ದೆ ಮಾರ್ಪೊಳೆದುವಾಕೆಯ ಡಾಳಮನಾಂತದಿಟ್ಟಿಗಳ್ ||

ಎಂಬ ಪದ್ಯವನ್ನೂ ರಾಜಶೇಖರವಿಳಾಸದೊಳಗಿನ :—

ಗುರುಜಘನಸ್ಥಳೀಪುಳಿನದೊಳ್ ಪರಿದಾಡಿ ವಳಿತ್ರಯೋರ್ಮಿಯೊಳ್ |
ಪಿರಿದಡರ್ದಾಡಿ ನಾಭಿಸುಳಿಯೊಳ್ ಸುಳಿದಾಡಿ ತಮಾಲನೀಲಭಾ ||
ಸುರತರರೋಮರಾಜಿನವಶೈವಲದೊಳ್ ನಡೆದಾಡಿ ತನ್ಮುಖಾಂ |
ಬುರುಹರಸಪ್ರವಾಹದೆ ಮುಳುಂಗಿದುರಕ್ಷಿರ್ಝಷಂಗಳಾತನಾ ||

ಎಂಬ ಪದ್ಯವನ್ನು ಪರಿಶೀಲಿಸಬಹುದು. ಹರಿಹರನ ಚಿತ್ರವು ಪಾರ್ವತಿಯ ಶೃಂಗಾರಕ್ಕಿಂತಲೂ ಪ್ರಬಲವಾದ ಭಕ್ತಿಯನ್ನು ಬಿತ್ತರಿಸುತ್ತದೆ. ಅದನ್ನೇ ಇನ್ನಿಷ್ಟು ಕನ್ನಡಿಸಿದ ಅಂಡಯ್ಯನ ವರ್ಣನೆಯು ಶೃಂಗಾರಕ್ಕೆ ತಿರುಗಿದೆ. ಷಡಕ್ಷರಿದೇವನ ಬಣ್ಣನೆಯು ಶೃಂಗಾರದೊಡನೆ ಕವಿಯ ಪ್ರತಿಭೆಯನ್ನೂ ಬೀರುತ್ತದೆ. ಹರಿಹರನಲ್ಲಿ ಅಂಕುರಿಸಿದ ಭಾವವು ಅಂಡಯ್ಯನಲ್ಲಿ ಪಲ್ಲವಿಸಿ ಷಡಕ್ಷರಿಯಲ್ಲಿ ಫಲಿಸಿರುವುದೆಂದು ಈ ಉದಾಹರಣೆಗಳು ತೋರುವುವಲ್ಲದೆ ಪರಂಪರೆಯು ಹುಟ್ಟಿ ಬೆಳೆಯುವ ಗುಟ್ಟನ್ನೂ ಸೂಚಿಸುವವು. ಹೀಗೆ ಜಾತಿ ಮತಗಳ ಕಟ್ಟುಗಳನ್ನು ಒಡೆದು, ಕಾಲಪರಿಸ್ಥಿತಿಗಳ ಭೇದಗಳನ್ನು ಮೀರಿ ಕವಿಗಳು ಅನ್ಯೋನ್ಯಗುಣಗ್ರಾಹಿಗಳಾಗಿರುವುದರಿಂದಲೇ ಸಾಹಿತ್ಯವು ಎಲ್ಲರ ಆದರಕ್ಕೂ ಪಾತ್ರವಾಗಿರುವುದು. ಕೊನೆಗೆ, ಕನ್ನಡ ಸಾಹಿತ್ಯಕ್ಕೆ ಹೊಸ ದಿಶೆಯನ್ನು ತೋರಿಸಿಕೊಟ್ಟ ಮಹಾಕವಿಗಳಲ್ಲಿ ಹರಿಹರನೂ ಒಬ್ಬನಾಗಿರುವುದರಿಂದ ಹೊಸಹೊಸ ದಿಶೆಗಳನ್ನು ಹುಡುಕುತ್ತಿದ್ದ ಈಗಿನ ಬರೆಹಗಾರರಿಗೆ ಆದರ್ಶಪ್ರಾಯನೂ ಆದರಣೀಯನೂ ಆಗಿದ್ದಾನೆಂದು ಹೇಳಿ ವಿರಮಿಸುತ್ತೇವೆ.

ಶಿ. ಶಿ. ಬಸವನಾಳ.

# ಒ ಪ್ಪೋ ಲೆ .



| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧ | ೧೭ | ಪಾಂಡಿತ್ಯದೊಳಗಸಮಂ | ಪಾಂಡಿತ್ಯದೊಳಸಗನುಂ |
| ೬ | ೧೦ | ತಿಗೆ | ತೆಗೆ |
| ,, | ೨೪ | ವಾರ್ಣಕದಿಂಪ | ವರ್ಣಕದಿಂದ |
| ೭ | ೧೦ | ಅಡಿಯಲ್ಲಿ | ಅಡಿಯಲ್ಲಿ: — |
| ೮ | ೨ | ಪೂರ್ಣವಾಗುದು | ಪೂರ್ಣವಾಗದು |
| ,, | ೨೦ | ವರುವರುಷಂ | ವರುಷಂ |
| ೨೨ | ೪ | ಪೊರಮೆಟ್ಟು | ಪೊರಮಟ್ಟು |
| ೨೪ | ೨೧ | ದೂರಿಪನೆಯಕಟ | ದೂರಿದನೆಯಕಟ |
| ೨೬ | ೬ | ರಚಿಸಿದನ್ನು | ರಚಿಸಿದನು |
| ,, | ೯ | ವ್ಯಾಸಿಸಿಕೊಂಡು | ವ್ಯಾಪಿಸಿಕೊಂಡು |
| ,, | ೧೮ | ವಿಯ ಹರಿಪರನ | ವಿಯು ಹರಿಹರನ |
| ೩೩ | ೧೨ | ಒಂಮೂ | ಒಂದು |
| ,, | ೧೫ | ನೇಮಿಚಂದನ | ನೇಮಿಚಂದ್ರನ |
| ೩೪ | ೧೪ | ಸುತ್ತಿ | ಸ್ತುತಿ |
| ೩೫ | ೧೧ | ಪುಡಿಯೊಳಿರ್ದ | ಮುಡಿಯೊಳಿರ್ದ |
| ,, | ೬ | ಲೋಚಿನಂ | ಲೋಚನಂ |
| ,, | ೧೬ | ಇತಿನು | ಇನಿತು |
| ೩೮ | ೧೪ | ತಾನಂ | ತಾನುಂ |
| ೩೯ | ೧೭ | ಬೇಕಾದುತ್ತವೆ | ಬೇಕಾಗುತ್ತದೆ |
| ,, | ೨೨ | ಪಾರ್ವತಿಯು | ಪಾರ್ವತಿಯ |
| ೪೦ | ೨೩ | ಯಮ್ಮೆ | ಮ್ಮೆಯ |
| ೪೩ | ೨೧ | ವಾರ್ಹ್ರವೂ | ವಾರ್ಹವೂ |
| ೪೫ | ೪ | ಭಯಾನಕಮುವಂ | ಭಯಾನಕಮುಮಂ |
| ,, | ೧೮ | ವಿಕ್ರ | — |
| ,, | ೨೦ | ಬಕುದೋ | ಬಹುದೋ ? |
| ೪೬ | ೧ | ಕಾಲೀನವಾಗು | ಕಾಲೀನನಾಗು |
| ,, | ೪ | ತೈಲ. | ತೈಲ, |
| " | ೧೬ | ಸೋಲಿಸುದು | ಸೋಲಿಸಿದ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ,, | ೧೯ | ಮೇಲಿನಪ್ರ ಭುದೇವರ | ಮೇಲಿನ ಪ್ರಭುದೇವರ |
| ೪೮ | ೨ | ಬಿಚ್ಚಿ | ಬಿಬ್ಬಿ |
| ,, | ೧೨ | ಹರಹರಭಕ್ತ | ಹರಿಹರಭಕ್ತ |
| ,, | ೧೪ | ವಿಜ್ಞಾಪನೆನನ್ನದು | ವಿಜ್ಞಾಪನೆ ನನ್ನದು |
| ೭೪ | ೧೪ | ವಂತೂ | ವೆಂತೋ |
| ೭೫ | ೨೨ | ಸುಖದನೆನಗೆ | ಸುಖವನೆನಗೆ |
| ೭೮ | ೨೧ | ಆಹಾಹ | ಅಹಹಾ |
| ೮೦ | ೨೦ | ಇಂತಿಂತೊಪ್ಪು | ಇಂತಿಂತೊಪ್ಪುವ |
| ೮೧ | ೯ | ವೇದಿಯು | ವೇದಿಯು. |
| ,, | ೨೧ | ಸಾರಿದುದಯ್ಯ: | ಸಾರಿದುದಯ್ಯ ! |
| ,, | ೨೨ | ಅಗಲಿದ್ದಿತಯ್ಯ | ಅಗಲಿದ್ದಿತಯ್ಯ ! |
| ,, | ೨೩ | ಬಿಂದಿವೆ | ಬಂದಿವೆ |
| ೮೩ | ೧೨ | ಅಂದಗೊಳಿಸುವುದು. | ಅಂದಗೊಳಿಸುವುದು ? |
| ,, | ೨೬ | ನಮ್ಮನಪ್ಪುವ | ನಮ್ಮನಪ್ಪುವ. |
| ೮೪ | ೮ | ಎಂಬಿರರಲ್ಲಿ | ಎಂಬಿವರಲ್ಲಿ |
| ,, | ೧೩ | ಬಾಲ | ಬಾಲ್ಯ |
| ,, | ೨೦ | ಹಗ್ಗದಲ್ಲ | ಹಗ್ಗದಲ್ಲಿ |
| ೮೫ | ೩ | ಒಂದೆ ಒಂದು | ಒಂದೇ ಒಂದು |
| ,, | ೮ | ನಾರು, | ನಾರು |
| ,, | ೨೦ | ದನಕಾಯ್ವನು | ದನಕಾಯ್ವನು. |
| ೮೬ | ೧೯ | ಭೇದವಿದು | ಭೇದವಿದು. |
| ೮೭ | ೪ | ಭಕ್ತಿಯು | ಭಕ್ತಿಯ |
| ,, | ೫ | ಕತಾತ್ವಿದ | ತಾತ್ವಿಕದ |
| ,, | ೯ | ಮಾರ್ಗವನ್ನಾರು | ಮಾರ್ಗವನ್ನಾರೊ |
| ,, | ೧೫ | ನೊಬ್ಬಗೆ | ನೊಬ್ಬನಿಗೆ |
| ,, | ೧೭ | ಕಡಿಮೆಯುವನು | ಕಡಿಮೆವಯನು. |
| ೮೮ | ೧೬ | ಎಂಬಿಕ | ಎಂಬೀ |
| ,, | ೧೯ | ಹಾಡಿದನು | ಹಾಡಿದನು. |
| ,, | ೨೩ | ಭಾವದುನ್ನತೆರದ | ಭಾವದುನ್ನತಿರಸ |
| ೮೯ | ೪ | ಕಾವ್ಯವು- | ಕಾವ್ಯವು. |
| ೦೯ | ೨೫ | ಸಾಯಿಯಾಗ | ಸ್ಥಾಯಿಯಾಗ |
| ೨೯ | ೧೧ | ಒಂದೆ | ಒಂದೇ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೯೩ | ೧೫ | ಸ್ಮೃಭೂರ್ಯಿಷ್ಟ | ಸ್ಮೃಭೂರ್ಯಿಷ್ಠ |
| ,, | ೧೬ | ಸ್ತೋತ್ರೈಕ್ಯೈವಿಭಾವ್ಯೈ | ಸ್ತೋತ್ರೈಕ್ಯೈರ್ವಿಭಾವ್ಯೈ |
| ,, | ೨೨ | ಮುಮ್ಮುಟಾಚಾರಿಯರ್ನೂ | ಮುಮ್ಮುಟಾಚಾರ್ಯರ್ನೂ |
| ೯೪ | ೬ | ಭಾವವಾಗಲುಳ್ಳದು. | ಭಾವವಾಗಲುಳ್ಳದು, |
| ,, | ೧೦ | ಒಂದೆಯಾಗಿವೆ | ಒಂದೇಯಾಗಿವೆ |
| ೯೪ | ೦೯ | ತಳವೆಳವಾದನು | ತಳವೆಳಗಾದನು. |
| ,, | ೨೧ | ಭವಿಯೆಂವೆ ಅಲ್ಲ ! | ಭವಿಯೆಂದೆಯಲ್ಲ ! |
| ೯೫ | ೨ | ಕೌಂಸಿಕ | ಕೌಂಶಿಕ |
| ,, | ೧೧ | ದುಡು. | ದುದು |
| ,, | ೧೪ | ಶಿವಾವಭವ | ಶಿವಾನುಭವ |
| ೧೦೦ | ೪ | ಮೆಲ್ಲಿಮೆಲ್ಲ | ಮೆಲ್ಲಮೆಲ್ಲ |
| ,, | ೧೧ | ಬಿಸುಸುಯ್ದು | ಬಿಸುಸುಯ್ದು |
| ,, | ೧೭ | ಮುಗಳಿ | ಮುಗಳೆ |
| ೧೦೧ | ೧೪ | ನಲ್ಲಿಗೆಯ್ದು | ನಲ್ಲಿಗೆಯ್ದಿ |
| ,, | ೨೦ | ಭವಿಯೊಳೆಗೆ | ಭವಿಯೊಳಗೆ |
| ೧೦೨ | ೧೧ | ಸಂತಯಿಸಿ. | ಸಂತಯಿಸಿ |
| ೧೦೩ | ೧೭ | ಮಹೇಶ್ವರರಂ | ಮಾಹೇಶ್ವರರಂ |
| ,, | ೧೮ | ಕರ್ರ್ಣನೆ | ಕೌರ್ರ್ಯನೆ |
| ೧೦೪ | ೨೬ | ಗೆಲೆದಿ | ಗೆಲೆದೆ |
| ೧೦೫ | ೫ | ನಿಧಿಯೆ | ನಿಧಿಯು |
| ,, | ೧೧ | ಹರೆದೇವನ | ಹರಿದೇವನ |
| ,, | ೧೫ | ಬಿಣ್ಣಸುವುದು | ಬಣ್ಣಿಸುವುದು |
| ,, | ೨೪ | ಪುದುಳೆ | ಪುರುಳೆ |
| ,, | ೨೫ | ಎನನೆ | ಎನಗೆ |
| ೧೦೬ | ೧೮ | ಭೀಭತ್ಸ | ಬೀಭತ್ಸ |
| ೧೦೮ | ೨೬ | ಇರು | ಇರ |
| ೧೧೦ | ೧೮ | ಬೀಸುಟಿ | ಬಿಸುಟಿ |
| ೧೧೨ | ೨೧ | ತನುವಂ ತನುವಂ | ತನುವಂ ತನುವಂ ತನುವೆ |
| ,, | ೨೬ | ಪರಮುಶಿವನಲ್ಲಿ | ಪರಶಿವನಲ್ಲಿ |
| ೧೧೩ | ೮ | ಶಿವಭಕ್ತಿಗಲ್ಲಧಭವಂ | ಶಿವಭಕ್ತಿಗಲ್ಲದಭವಂ |
| ೧೧೪ | ೬ | ಬೀಳ್ದುವು | ಬಿಳ್ದುವು |
| ,, | ೧೮ | ಸುಯ್ಗನಂಪುವಂ | ಸುಯ್ಗಂಪುವಂ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೧೭ | ೧೧ | ಯಂದಲ್ಲಲ್ಲಿ | ಯೆಂದಲ್ಲಲ್ಲಿ |
| ,, | ೨೫ | ಕಿಡಿಇಟ್ಟುದು | ಕಿಡಿಯಿಟ್ಟುದು |
| ೧೧೮ | ೧ | ಮುಟ್ಟಿದಂತಿದು | ಮುಟ್ಟಿತು ತಿಂದು |
| ೧೨೨ | ೨೬ | ಸಮಾರ್ಥವಾಗಿದೆ | ಸಮಾನಾರ್ಥವಾಗಿದೆ. |
| ೧೪೦ | ೨೬ | कु सं. | कु सं. |
| ,, | ೨೧ | नचस्तिभावः पुंसायो | न चास्ति भावः स्त्रिपुंसयो |
| ,, | ೨೨ | भवेद्दहि | भवेद्दूहि |
| ,, | ೨೫ | याचेथंचन | याचे कथंचन |
| ೧೩೩ | ೧೦ | ತೋರಿದವಳು; | ತೋರಿದಳವಳು; |
| ,, | ೧೯ | ಪ್ರಕೃತಿ ಪುರುಷರ–ಶಕ್ತಿ ಶಿವರ | ಪ್ರಕೃತಿ ಪುರಷರ ಶಿಕ್ತಿ–ಶಿವರ |
| ೧೩೮ | ೧೫ | ಮರಮರವ್ವೆ | ಮರಳ್ಚಿ |
| ,, | ,, | ಕರುವಿಟ್ಟರೋಕಂ \| | ಕರುಪಿಟ್ಟರೊಕಂ । |
| ,, | ೨೧ | ನೆನಪು | ನನಪು |
| ,, | ೨೫ | सनाति तन्तृ | सनावितन्तु |
| ೧೪೧ | ೪ | ಶಿವಸುಖ ಮುಖ ಸಂ | ಶಿವಸುಖಮುಖಸಂ |
| ,, | ೧೧ | ಮದಿವಾಳಮುಂ. | ಮಡಿವಾಳ ಮುಂ. |
| ೧೪೨ | ೨೬ | ಒಲಿಯಿಸಿ | ಒಲಿಯಸಿ |
| ೧೪೪ | ೨ | ಸೋಂಕವೆನಿ | ಸೋಂಕವೆ ನಿ |
| ,, | ೩ | ಸ್ವತತಂತ್ರ ನಹಿಧರ | ಸ್ವತಂತ್ರನಹಿಧರ |
| ,, | ೭ | ಒಲಿಯನು | ಒಲೆಯುನು |
| ,, | ೯ | ನಿಲ್ಲವಳು___ | ನಿಲ್ಲುವಳು. |
| ೧೪೫ | ೨೬ | ಭವಾನಿಯೇ ನೆಂದರಿಯಳ್ | ಭವಾನಿಯೇನೆಂದರಿಯಳ್ |
| ೧೪೭ | ೧೮ | ಮದನ ದಹೆನದ | ಮದನದಹನದ |
| ೧೪೯ | ೨೫ | ೯೯೨. | ೯–೯೨. |
| ,, | ೨೬ | ಮದು ವೆಯಾಗುವ | ಮದುವೆಯಾಗುವ |
| ೧೫೦ | ೧೯ | ಒಮ್ಮೆಲಿ | ಒಮ್ಮೆಲೆ |
| ೧೫೧ | ೭ | ಹೆಣ್ಣ ಕೊಡದವಂತಹ | ಹೆಣ್ಣು ಕೊಡದಂತಹ |
| ೧೫೪ | ೨೦ | ಪ್ರಶ್ನಗಳೇ | ಪ್ರಶ್ನೆಗಳೇ |
| ೧೫೫ | ೮ | ಉದ್ದೇಶ್ಯವು | ಉದ್ದೇಶವು |
| ೧೫೬ | ೧೫ | ನಡೆಯ | ನಡೆಯೆ |
| ,, | ೧೬ | ಅತ್ಯುರುತರ | ತ್ಯುರುತರ |
| ೧೫೭ | ೧೫ | ಗಿರಿಸುತೆ ನಡೆಯೇ | ಗಿರಿಸುತೆ ನಡೆಯೆ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೫೭ | ೮ | ಸಿಂಗರಿಸುವುದ್ನು | ಸಿಂಗರಿಸುವುದು, |
| ,, | ೧೧ | ಲಾಜಹೋಮ | ಲಾಜಾಹೋಮ |
| ,, | ೨೦ | सगस्यतावेवपितरौस्मृतौ | सर्गस्य तावेव पितरौ स्मृतौ |
| ೧೬೧ | ೨೪ | गृहय | गृह्य |
| ೧೬೩ | ೧೭ | ಇಬ್ಬಾಗವಾದನು | ಇಬ್ಭಾಗನಾದನು |
| ೧೬೪ | ೪ | ವ್ಯಾಜಸೇವೆ | ಸವ್ಯಾಜಸೇವೆ |
| ೧೬೬ | ೧೮ | ಮು । ಗ್ಥಯು | ಮು–। ಗ್ಧಯು |
| ೧೬೮ | ೧೩ | ಶೆಟ್ಟಿಗೆ | ಸೆಟ್ಟಿಗೆ |
| ,, | ೧೬ | ಫಣ್ಯಾಂಗನೆ | ಪಣ್ಯಾಂಗನೆ |
| ,, | ೨೦ | ಸೆಜ್ಜೆಯುಂ ಮನೆಯು | ಸೆಜ್ಜೆಯೆ ಮನೆಯುಂ |
| ೧೭೦ | ೧೩ | ನೆರಯೆಕೊಡೆ | ನೆರೆಯೆ ಕೊಡೆ |
| ೧೭೨ | ೨೪ | ಆತ್ಮೋತ್ಕ್ರಾಂತಿಯ | ಆತ್ಮೋತ್ಕ್ರಾಂತಿಯ |
| ೧೭೩ | ೧೪ | ಹೊರಗೆಳದು | ತೊರಗೆಳೆಸು |
| ,, | ೨೩ | ಮೂಡಲಿಸಿ | ಮೂದಲಿಸಿ |
| ೧೭೪ | ೫ | ಕಂಡುಬರಬೇಕಷ್ಟೇ ! | ಕಂಡುಬರಬೇಕಷ್ಟೆ ? |
| ,, | ೯ | ಅಸುರಕ್ತಿ | ಅನುರಕ್ತಿ |
| ,, | ೧೫ | ಹರುಷ ದಿಂದೊಲ್ದು | ಹರುಷದಿಂದೊಲ್ದು |
| ೧೭೫ | ೩ | ಈ ಗೇಕೆ | ಈಗೇಕೆ |
| ೧೭೬ | ೧ | ಸವೆಯುವ್ವೇಳುಂ | ಸವೆಯುವೇಳ್ಕುಂ |
| ,, | ೧೯ | ಈ ಶಾನ್ಯ ಗುರುಗಳೆಂಬ | ಈಶಾನ್ಯಗುರುಗಳೆಂಬ |
| ೧೭೯ | ೯ | ಭಾಷ್ಟ | ಬಾಷ್ಪ |
| ೧೮೦ | ೩ | ಬಸವಣನವ್ರ | ಬಸವಣ್ಣನವರ |
| ೧೮೧ | ೫ | ವೇದಜನಡರು | ವೇದಜಡರು |
| ೧೮೨ | ೫ | ಶರಣಗೊಷ್ಠಿ | ಶರಣಗೋಷ್ಠಿ |
| ,, | ೨೪ | ಕುರಿಸೆವ | ಕುರಿಸೆ |
| ೧೮೪ | ೨೩ | ಮುದವೇರುವುದೆಂದು | ಮುದವೇರುವುದೆಂದು |
| ೧೮೫ | ೨ | ಪರಿಯಿಂದೆ | ಪರಿಯುವೆ |
| ೧೮೮ | ೧೬ | ಪಾಲನಅದೇ | ಪಾಲನದೇಂ |
| ೧೯೫ | ೨೧ | ತುಮಕೇ | ತಮಕೇ |
| ೧೯೬ | ೨ | ದೊಂಂದು | ದೊಂದು |
| ೧೯೭ | ೪ | ಮತಚಾರಗಳನ್ನು | ಮತಾಚಾರಗಳನ್ನು |
| ೧೯೮ | ೨೪ | ಉತ್ಹರ | ಉತ್ತರ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೯೯ | ೨೬ | ಅಭೇಧ್ಯನಾಗಿ | ಅಭೇದ್ಯನಾಗಿ |
| ೨೦೧ | ೧೫ | ಅನಾಧಾರಣ | ಅಸಾಧಾರಣ |
| ೨೦೮ | ೨೦ | ಬಲಂ | ಬಲ್ಲಂ |
| ೨೦೯ | ೩ | ಕಾಳಾವಃಖ | ಕಾಳಾಮುಖ |
| ,, | ೯ | ರುಂಚದ | ಕುಂಚದ |
| ೨೧೨ | ೧೦ | ಪುರವೇರುತ್ತಿರ | ಪುರವೇರುತ್ತಿರು |
| ೨೧೭ | ೯ | ಉಪಯೋಗಿಸದ್ದಾರೆ | ಉಪಯೋಗಿಸಿದ್ದಾರೆ. |
| ೨೧೮ | ೨೨ | ವಡೆಯೊಳ್ವೆಸೆಯ | ವಡೆಯೊಳ್ಪೆಸೆಯೆ |
| ,, | ,, | ಸಮುನಾಗಿ ಗುಣ | ಸಮನಾಗೆ ಗುಣಾ |
| ,, | ೨೩ | ಗುಣಿಯು ಮತದಿಂದ | ಗುಣಿಯು ಮತದಿಂದೆ |
| ,, | ೨೪ | ಬಂಧ | ಬಂಧಂ |
| ೨೨೩ | ೨೧ | ಹೋದ | ಹೋದರೆ |
| ೨೪೧ | ೨೫ | ಮುರೆಯುವಳು | ಮೊರೆಯುವಳು. |
| ,, | ,, | ಶಿವನಿಳಯದಲ್ಲ | ಶಿವಸಿಳಯದಲ್ಲಿ |
| ೨೪೨ | ೧೭ | ಕಳಶಂಗಳಿನೊ | ಕಳಶಂಗಳಿಸು |
| ೨೪೩ | ೨೫ | ಮೇರೆ | ನೋರೆಗೆ |
| ೨೪೭ | ೨ | ಸಾನಿಧ್ಯ | ಸಾನ್ನಿಧ್ಯ |
| ೨೪೭ | ೨೨ | ಶೋಕಿ | ಶೊಕಿಸಿ ರತಿಯು |
| ೨೪೮ | ೫ | ಮಾಣೊಡೆ | ಮಾಣ್ದೊಡೆ. |
| ೨೪೯ | ೯ | ಸಾಮರ್ಥವನ್ನು | ಸಾಮರ್ಥ್ಯವನ್ನು |
| ,, | ೧೦ | ಹೇಮಕೂಟಚಲಕ್ಕೆ | ಹೇಮಕೂಟಾಚಲಕ್ಕೆ |
| ೨೫೦ | ೬ | ಜನನ-ಬಾಕ, | ಜನನ, |
| ೨೫೧ | ೧೯ | ಬಳಿಕೆ | ಬಳಕೆ |
| ,, | ೨೨ | ವೃತ | ವೃತ್ತ |
| ,, | ೨೬ | ಗೂತಿ | ಗೊತ್ತಿ |
| ೨೫೨ | ೪ | ಶೈಲಿಯ | ಶೈಲಿಯು |
| ,, | ,, | ಸಿಬಿಡವೇಶ | ನಿಬಿಡವೇಷ್ಟ. |
| ೨೫೩ | ೧೦ | ಬಿಣ್ಣೂರೆ | ಬಿಣ್ಪೊರೆ |
| ,, | ೨೦ | ಅದರೊಡಗೆ | ಅದರೊಡನೆ |
| ೨೫೪ | ೦೯ | ಸಂಪೂರ್ಣವನ್ನು | ಸಂಪೂರ್ಣವಾಗಿ |
| ೨೫೬ | ೪ | ಸುಗುಮತೆಗೂ | ಸುಗಮತೆಗೂ |
| ,, | ೧೪ | ವನ್ನು | ವು. |